# ಪೀಟರ್ ಜೆಂಗರ್

( ಸಚಿತ್ರ )

ಮೂಲ ಲೇಖಕರು:
ಟಾಂ ಗಾಲ್ಟ್

ಅನುವಾದಕರು:
ಕೆ. ಎಸ್. ರಾಮಕೃಷ್ಣಮೂರ್ತಿ
"ಪ್ರಜಾವಾಣಿ" : : ಬೆಂಗಳೂರು

ವಾಹಿನಿ ಪ್ರಕಾಶನ : : ಬೆಂಗಳೂರು-೨

ಮೊದಲನೆಯ ಮುದ್ರಣ: ಡಿಸೆಂಬರ್ ೧೯೫೭



**Peter Zenger**

by **Tom Galt**



**ಬೆಲೆ:** Rs 14.00

ಮುದ್ರಕರು:
ಎಂ. ಎಸ್. ಚಿಂತಾಮಣಿ, ಬಿ. ಎಸ್‌ಸಿ.,
ಈಸ್ಟರ್ನ್ ಪ್ರೆಸ್
ಜಯಚಾಮರಾಜ ರಸ್ತೆ, ಬೆಂಗಳೂರು-೨






# ಪ್ರಕಾಶಕನ ಮಾತು

ಮೈಸೂರು ದೇಶದಲ್ಲಿ ‘ ಕಿಡಿ ’ ಪತ್ರಿಕೆಯ ಹೆಸರನ್ನು ಕೇಳದವರಿಲ್ಲ. ಹಲವು ವರ್ಷಕಾಲ ಆ ಪತ್ರಿಕೆಯ ಪ್ರಕಟನೆಯಲ್ಲಿ ಪಾತ್ರವಹಿಸಿದ ನನಗೆ ‘ ಪೀಟರ್ ಜೆಂಗರ್ ’ ನ ಹೋರಾಟದ ಕತೆಯನ್ನು ಓದುತ್ತಲೇ ಅದನ್ನು ಕನ್ನಡದಲ್ಲಿ ಪ್ರಕಟಿಸ ಬೇಕೆಂಬ ಸ್ಫೂರ್ತಿ ಬಂತು.

‘ ಪೀಟರ್ ಜೆಂಗರ್ ’ ಹದಿನೆಂಟನೆಯ ಶತಮಾನದಲ್ಲಿ ನಿರಂಕುಶಾಧಿಕಾರದ ವಿರುದ್ಧ ಹೋರಾಡಿ, ಅಮೆರಿಕದಲ್ಲಿ ಪತ್ರಿಕಾ ಸ್ವಾತಂತ್ರ್ಯದ ಪತಾಕೆಯನ್ನು ಮೆರೆಸಿದ ಮೊದಲಿಗ. ಆ ಹೋರಾಟದ ಕತೆ ಇದು.

ನಿರಂಕುಶತ್ವ ಬುಟ್ಟಿಯಲ್ಲಿ ಕೂಡಿಟ್ಟ ಹಾವಿನಂತೆ, ಅವಕಾಶ ಸಿಕ್ಕಾಗಲೆಲ್ಲ ಹೆಡೆಯೆತ್ತಲು ಹವಣಿಸುತ್ತಲೇ ಇರುತ್ತದೆ. ಅಂಥ ಹವಣಿಕೆಯ ಬಗ್ಗೆ ಎಲ್ಲ ಸ್ವಾತಂತ್ರ್ಯ ಪ್ರೇಮಿಯೂ ಸದಾ ಎಚ್ಚರದಿಂದಿರಬೇಕು. ಆ ಬಗ್ಗೆ ಹೋರಾಟ ನಡೆಸಿದವರ, ನಡೆಸುತ್ತಿರುವವರ ಇತಿಹಾಸವು ಚಿರಸ್ಮರಣೀಯ.

‘ ಪೀಟರ್ ಜೆಂಗರ್ ’ ನ ಕತೆಯಲ್ಲಿ ಬರುವ ಹಲವಾರು ಸನ್ನಿವೇಶಗಳನ್ನು ಹೋಲುವಂತಹ ಘಟನಾವಳಿಗಳು ಮೈಸೂರು ರಾಜಕೀಯದಲ್ಲೂ ಜರುಗಿದುದು ಓದುಗರಿಗೆ ಮನವರಿಕೆಯಾಗದಿರದು. ಸರ್ಕಾರದ ಕಾರ್ಯಾಂಗವು ನ್ಯಾಯಾಂಗದ ನಿಯಂತ್ರಣ ಮಾಡುವುದಾಗಲೀ, ನ್ಯಾಯಾಂಗವು ಕಾರ್ಯಾಂಗದ ಕೈಗೊಂಬೆ ಯಾಗಿರುವುದಾಗಲೀ, ಅಥವಾ ನ್ಯಾಯಾಂಗವು ಸರ್ವತಂತ್ರ ಸ್ವತಂತ್ರವಾಗಿದ್ದೂ ದೇಶದ ರಾಜಕೀಯ ಆಗುಹೋಗುಗಳಲ್ಲಿ ಕೈಯಾಡಿಸುವುದಾಗಲೀ ಎಂತಹ ದುಷ್ಪರಿಣಾಮಗಳಿಗೆ ಎಡೆಕೊಡುವುವೆಂಬುದು ಮೈಸೂರು ಜನತೆ ಕಂಡ ವಿಷಯ.

ಈ ಅನುವಾದವನ್ನು ‘ ಕಿಡಿ ’ ಸಂಪಾದಕರಾದ ಶ್ರೀ ಪಿ. ಶೇಷಪ್ಪನವರು ನಡೆಸಿರುವ, ನಡೆಸುತ್ತಿರುವ ಹೋರಾಟ, ಅವರು ಅದರಿಂದ ಅನುಭವಿಸಿರುವ ಕಷ್ಟ ನಿಷ್ಠೂರಗಳ ನೆನಪಾಗಿ ಪ್ರಕಟಿಸಲು ನನಗೆ ಹೆಮ್ಮೆ ಎನಿಸುತ್ತದೆ.




ಎಂ. ಎಸ್. ಚಿಂತಾಮಣಿ

“೧೭೩೫ರಲ್ಲಿ ನಡೆದ ಜೆಂಗರ್ ವಿಚಾರಣೆ ಅಮೆರಿಕದ ವಿಮೋಚನೆಯ ಮೊದಲ ಕುಡಿ, ಅನಂತರ ಅಮೆರಿಕವನ್ನು ಕ್ರಾಂತಿಕಾರಕವಾಗಿ ಪರಿವರ್ತಿಸಿದ ಪ್ರಭಾತ ತಾರೆ.”

— ಗವರ್ನರ್ ಮಾರಿಸ್

* * * *

“ಪ್ರಖ್ಯಾತ ಜೆಂಗರ್ ವಿಚಾರಣೆ, ಪತ್ರಿಕಾ ಸ್ವತಂತ್ರ್ಯದ ಪರವಾದ ನ್ಯೂಯಾರ್ಕ್ ಶಾಸನವನ್ನೂ, ಅಮೆರಿಕದಲ್ಲಿ, ಸರ್ವಕಾಲಿಕನಾವಾದ ಪತ್ರಿಕಾ ಸ್ವಾತಂತ್ರ್ಯದ ತತ್ವವನ್ನೂ, ಪ್ರತಿಷ್ಠಾಪಿಸಿತು” — ಮಾನ್ಯ ಡೇವಿಡ್ ಮೆರ್‌ಆಡಂ ಅವರ ಸಂಪಾದಕತ್ವದ “ನ್ಯೂಯಾರ್ಕಿನ ಕೋರ್ಟುಗಳ ಮತ್ತು ನ್ಯಾಯವಾದಿತ್ವದ ಇತಿಹಾಸ”

* * * *

“ನ್ಯೂಯಾರ್ಕಿನ ಜೆಂಗರ್ ವಿಚಾರಣೆ ಪ್ರಜಾನಿಮಿತ್ತದ್ದು. ಪತ್ರಿಕಾ ಸ್ವಾತಂತ್ರ್ಯ ಅದನ್ನವಲಂಬಿಸಿತ್ತು.” — ಬೆಂಜಮಿನ್ ಫ್ರಾಂಕ್‌ಲಿನ್, ೧೭೩೭ರ ಡಿಸೆಂಬರ್ ೧ರ “ಪೆನ್ಸಿಲ್ವೇನಿಯ ಗೆಜೆಟ್” ನಲ್ಲಿ

# ಅಧ್ಯಾಯ ೧

## ನೆಲೆಸುಗಾರರು

ರಪಗುಟ್ಟುವ ಹಾಯಿಪಟಗಳ, ಕಿರಿಗುಟ್ಟುವ ಹಗ್ಗಗಳ ಕೆಳಗೆ, ಆ ಮರದ ಹಡಗಿನ ಡೆಕ್ಕಿನ ಮೇಲೆ, ಮೌನ ಮುದ್ರಿತ ಸ್ತ್ರೀಪುರುಷರು ಮಕ್ಕಳೂ ಒತ್ತಾಗಿ ನಿಂತಿದ್ದರು.

ಹದಿಮೂರು ವರ್ಷಗಳ, ಎತ್ತರವಾದ ತೆಳು ಹುಡುಗ ಪೀಟರ್, ಬೇಸಿಗೆಯ ಬಿಸಿಲಿಗೆ ಕೈ ಮರೆಮಾಡಿಕೊಂಡು ಕೊಲ್ಲಿಯಾಚೆಗೆ ದಿಟ್ಟಿಸಿದ. ಕೆಂಪು ಇಟ್ಟಿಗೆ ಗೋಡೆಗಳಿಂದಲೂ, ನೀಲಿ ಮೇಲ್ಛಾವಣಿಗಳಿಂದಲೂ, ಆ ಅಪರಿಚಿತ ದಡದ ಮೇಲೆ ಒತ್ತಾಗಿ ಕಟ್ಟಲ್ಪಟ್ಟಿದ್ದ ಮನೆಗಳ ಆ ಸಣ್ಣ ಊರು ಸವಾಲು ಹಾಕಿದಂತೆ ಭಾಸವಾಯಿತು.

ಕಣ್ಮುಂದೆಯೇ ಮಜಭೂತಾದ, ಕಂದು ಬಣ್ಣದ ಪುರಾತನ ಕೋಟೆ. ಅದರ ಹೊರ ಪ್ರಾಕಾರದ ಸುದೀರ್ಘಕಲ್ಲುಗೋಡೆಯ ಮೇಲೆಲ್ಲ ಹರಡಿದ ಬಿಸಿಲು. ಅದರ ಪಕ್ಕದಲ್ಲೇ, ಯಾರನ್ನಾದರೂ ಗಲ್ಲಿಗೇರಿಸಲು ಸನ್ನದ್ಧವಾದ ನೇಣುಗಂಬ. ಅಲ್ಲಲ್ಲಿ ಅಂಗಡಿ ಮನೆಗಳಿಂದ ಮೇಲಿದ್ದ ನ್ಯೂಯಾರ್ಕ್ ನಗರದ ನಾಲ್ಕಾರು ಚರ್ಚುಗಳ ಗಗನಚುಂಬಿತ ಚೂಪು ಶಿಖರಗಳು.

ಊರು ಮುಟ್ಟಿದ ಉತ್ಸಾಹದಿಂದ ಪುಳಕಿತನಾದ ಪೀಟರ್, ದೀರ್ಘವಾಗಿ ನಿಟ್ಟುಸಿರೆಳೆದ. ಪ್ರಯಾಣಿಕರ ತಲೆಗಳ ಸಂದಿನಿಂದ ನೋಡಲಾಗುವಂತೆ, ತನ್ನ ತಮ್ಮನನ್ನು, ಕೊಂಕುಳಿಗೆ ಕೈ ಹಾಕಿ ಎತ್ತಿ ಹಿಡಿದ. "ನೋಡು ಜಾನ್, ಅಲ್ಲಿ ಕಾಣುತ್ತಲ್ಲ ಆ ಊರಿನಲ್ಲೇ ನಮ್ಮ ಇನ್ನು ಮುಂದಿನ ವಾಸ" ಎಂದ. ನಗುತ್ತ ಮಾತು ಮುಂದುವರಿಸಿದ, "ಆಕಡೆ ನೋಡು, ಅದೇ ಹಾರುವ ಯಂತ್ರ! ನಿನ್ನ ಕುತ್ತಿಗೆಗೆ ಒಂದು ನೇಣುಗುಣಿಕೆ ಬಿಗಿದು ಎಳೆದರು ಅಂದರೆ, ಅಂತರಾಳದಲ್ಲಿ ಹಾರಾಡುತ್ತೀಯ!" ಎಂದ.

ಅನಂತರ ಪೀಟರನ ಗಮನ ಹಡಗಿನ ಬಳಿಗೆ ಧಾವಿಸುತ್ತಿದ್ದ ಇಂಡಿಯನ್ ಮಾದರಿಯ ದೋಣಿಯ ಕಡೆಗೆ ಹರಿಯಿತು. ಸುದೃಢ ಮೈಕಟ್ಟಿನ ಬಲಶಾಲಿಯಾದ ನೀಗ್ರೋ ಒಬ್ಬ ಅದರ ಹುಟ್ಟು ಹಾಕುತ್ತಿದ್ದ. ದೋಣಿಯಲ್ಲಿದ್ದ ಇನ್ನೊಬ್ಬ ನಗರದ ಒಬ್ಬ ಅಧಿಕಾರಿ. ಬಂದರಿಗೆ ಬರುವ ಎಲ್ಲಾ ಹಡಗುಗಳ ತನಿಖೆ ನಡೆಸುವುದು, ಟಪಾಲನ್ನು ಸಂಗ್ರಹಿಸುವುದು ಆತನ ಕೆಲಸ. ದುಂಡು ಮೈ, ದಪ್ಪ ಮೀಸೆ, ಕೊಬ್ಬಿದ ಕೆನ್ನೆಗಳ ಆ ಚಿಕ್ಕ ಮನುಷ್ಯನ ಮುಖದ ಮೇಲೆ ಅಧಿಕಾರದ ಅಹಂಕಾರ ಲಾಸ್ಯವಾಡುತ್ತಿತ್ತು. ನಿಡುತೋಳಿನ ಕಂದು ಬಣ್ಣದ ಓವರ್ ಕೋಟನ್ನು ಧರಿಸಿದ್ದ ಆ ಮನುಷ್ಯ ಜೂನ್ ತಿಂಗಳಿನ ಆ ಉರಿ ಬಿಸಿಲಿನಲ್ಲಿ ಸಂತತವಾಗಿ ಬೆವರುತ್ತಿದ್ದ.

ಹಗ್ಗದೇಣಿಯ ಮೂಲಕ ಹಡಗಿಗೆ ಹತ್ತಿ ಬಂದ ಆ ಅಧಿಕಾರಿ ಸುತ್ತ ಕತ್ತು ತಿರುಗಿಸಿ, ಒಮ್ಮೆ ಸ್ವಲ್ಪ ಕೆಮ್ಮಿದಂತೆ ಮಾಡಿ, ಮೂಗಿಗೆ ಬೆರಳು ಹಿಡಿದ. ಎರಡೂವರೆ ತಿಂಗಳಿಂದ ಆ ಹಡಗಿನಲ್ಲಿ ಯಾನ ಮಾಡಿದ್ದ ಪ್ರಯಾಣಿಕರು ಸಾಕಷ್ಟು ಅನ್ನ ನೀರಿಲ್ಲದೆ ಬಳಲಿದ್ದರು. ಹಡಗಿನಲ್ಲಿ ಬಂದ ಪ್ರಯಾಣಿಕರ ಸಂಖ್ಯೆ ಅಪಾರ. ಅವರೆಲ್ಲ ಒಂದೇ ಸಾರೇ ಮೇಲೆ ಬಂದು ನಿಲ್ಲಲು ಸಾಕಷ್ಟು ಸ್ಥಳಕೂಡ ಆ ಹಡಗಿನ ಮೇಲಂತಸ್ತಿನಲ್ಲಿರಲಿಲ್ಲ.

"ಹಡಗು ಯಾನ ಹೊರಟಾಗ ಇದ್ದ ಪ್ರಯಾಣಿಕರ ಸಂಖ್ಯೆ ೩೦೦ ರ ಹತ್ತಿರ. ಈಗ ಉಳಿದಿರುವವರು ೨೭೦" ಎಂದು ನಾಕಾ ಕ್ಯಾಪ್ಟನ್ ವ್ಯಸನದಿಂದ ನುಡಿದ.

"ಉಳಿದವರಿಗೇನಾಯಿತು ? " ಅಧಿಕಾರಿಯ ಪ್ರಶ್ನೆ.

"ಜ್ವರ ಬಂದಿರಬೇಕು. ಈ ಹಡಗಿನಲ್ಲಿ ಡಾಕ್ಟರೇ ಇಲ್ಲದಿರುವುದರಿಂದ ನಾನು ತಾನೆ ಏನು ಹೇಳಲಿ? ಇವರೆಲ್ಲರ ಪ್ರಯಾಣದ ಖರ್ಚನ್ನು ರಾಣಿ ಕೊಟ್ಟರು, ಇಲ್ಲಿಗೆ ಬಂದಿದ್ದಾರೆ. ಇಳಿಸಿಕೊಳ್ಳಿ."

ಫ್ರಾನ್ಸ್ - ಜರ್ಮನಿ ಯುದ್ಧವಾದಾಗ ಪೀಟರನ ತಂದೆ ತಾಯಿಗಳು ಬ್ಲಾಕ್ ಫಾರೆಸ್ಟಿಗೆ ಅಟ್ಟಲ್ಪಟ್ಟರು. ಅಲ್ಲಿ ಅವರು ತಲೆ ಮರೆಸಿಕೊಂಡಿದ್ದಾಗಲೇ, ಪೀಟರ್ ಹುಟ್ಟಿದ್ದು. ಕೆಲವು ವರ್ಷಗಳ

ನಂತರ ಪೀಟರನ ಪಿತೃಗಳು ಮತ್ತೆ ಜೀವ ಉಳಿಕೆಗಾಗಿ ಓಡಬೇಕಾಯಿತು. ಪ್ರಾಟೆಸ್ಟೆಂಟರಾಗಿದ್ದುದೇ ಅವರ ಅಪರಾಧ. ಎಲ್ಲೆಲ್ಲೂ ತುಂಬಿದ್ದ ಫ್ರೆಂಚ್ ಅಥವ ಜರ್ಮನ್ ಸೈನಿಕರಾರ ಕೈಗೆ ಸಿಕ್ಕಿದ್ದರೂ ಬದುಕಿ ಉಳಿಯುತ್ತಿರಲಿಲ್ಲ. ಅವರೂ, ಅವರಂತೆಯೇ ರೈನ್ ನದಿ ದಂಡೆಯಿಂದ ಓಡಿ ಬಂದ ಅವರ ನೆರೆಹೊರೆಯ ಅನೇಕ ಸಾವಿರಾರು ಮಂದಿ ಲೋಯರ್ ಪ್ಲಾಟಿನೇಟಿನವರೂ ಐದು ವರ್ಷಗಳ ಕಾಲ ನೆದರ್‌ಲೆಂಡಿನ ಜಮೀನುಗಳಲ್ಲಿ ದುಡಿದರು. ಆದರೂ ಅವರ ಜೀವಕ್ಕೆ ಭದ್ರತೆ ದೊರಕಲಿಲ್ಲ. ಫ್ರಾನ್ಸಿನ ಪ್ರಜಾಪೀಡಕ ದೊರೆ ಹದಿನಾಲ್ಕನೇ ಲೂಯಿ ಸಿಕ್ಕಿದೆಡೆಯೆಲ್ಲ ತನ್ನ ಸೈನ್ಯವನ್ನು ನುಗ್ಗಿಸಿದ. ಮನೆಗಳಿಗೂ ಬೆಳೆಗಳಿಗೂ ಬೆಂಕಿಯಿಡಿಸಿದುದರಿಂದ ಹಸಿವು ಎಲ್ಲರನ್ನೂ ಕಾಡಿತು. ಕಟ್ಟ ಕಡೆಗೆ ರಾಣಿ ಆನೆ ರಾಟರ್‌ಡಾಂಗೆ ಒಂದಷ್ಟು ಹಡಗುಗಳನ್ನು ಕಳಿಸಿ ಸುಮಾರು ೩೦ ಸಹಸ್ರ ನಿರಾಶ್ರಿತರನ್ನು ಇಂಗ್ಲೆಂಡಿಗೆ ಕರೆಸಿಕೊಂಡಳು.

ಅನೇಕರಿಗೆ ಇಂಗ್ಲೆಂಡಿನಲ್ಲಿ ಉದ್ಯೋಗ ದೊರಕದೆ ಹೋಯಿತು. ಎರಡು ವರ್ಷಗಳ ನಂತರ ಅಲ್ಲಿನ ಸರಕಾರ ಮುಂದೆ ಬಂದು, ಈ ನಿರಾಶ್ರಿತರು ಅಮೆರಿಕಕ್ಕೆ ಹೋಗಿ ಪೈನ್ ಅರಣ್ಯಗಳಿಂದ ಇಂಗ್ಲಿಷ್ ಹಡಗುಗಳಿಗೆ, ಟಾರು ಮತ್ತು ಟರ್ಪೆಂಟೈನ್‌ಗಳನ್ನು ಸಂಗ್ರಹಿಸಿ ಕೊಡುವುದಾದರೆ ಉಚಿತ ಪ್ರಯಾಣ ಸೌಕರ್ಯವನ್ನೂ, ಸ್ವಲ್ಪ ಹಣ ಸಹಾಯವನ್ನೂ ಒದಗಿಸುವುದಾಗಿ ಹೇಳಿತು.

ಅದುವರೆಗಿನ ಅನೇಕ ವರ್ಷಗಳ ಭಯ, ಕಷ್ಟಗಳ ನಂತರ ನೆಮ್ಮದಿ ದೊರಕೀತು – ನವ ಸ್ವತಂತ್ರ ಜಗತ್ತಿನಲ್ಲಿ ಸ್ವಂತ ಜಮೀನನ್ನು ಮಾಡಿಕೊಳ್ಳಬಹುದು, ನೌಕಾ ಪಡೆಗೆ ಸರಬರಾಜು ಮಾಡಿ ಒಳ್ಳೆ ಜೀವನ ನಡೆಸಬಹುದು—ಎಂಬ ಭರವಸೆಯಿಂದ ಜೆಂಗರ್ ಕುಟುಂಬದವರೂ ಹಡಗು ಹತ್ತಿದರು. ಆದರೆ ಮಧ್ಯ ಮಾರ್ಗದಲ್ಲಿ ಅವರ ಕೊರಡಿಗಳಲ್ಲಿ ಜ್ವರ ಬಲೆ ಬೀಸಿತು. ಮಧ್ಯ ಸಮುದ್ರದಲ್ಲಿ ತಂದೆಯ ಸಾವನ್ನು ಪೀಟರ್ ನೋಡಿದ.

ಪೀಟರೇನೋ ತನ್ನ ವಯಸ್ಸಿಗೆ ವಿಪರೀ ಗಟ್ಟಿಮುಟ್ಟಾಗಿದ್ದ.

ಆದರೂ, ಕಾಠಿಣ್ಯವನ್ನು ಪ್ರದರ್ಶಿಸುತ್ತಿದ್ದ ಬೂದು ಬಣ್ಣದ ಕೋಟೆ, ಯಾರನ್ನಾದರೂ ಗಲ್ಲಿಗೇರಿಸಲು ಸಿದ್ಧವಾಗಿ ನಿಂತಿದ್ದ ನೇಣುಗಂಬಗಳಿರುವ ಆ ಅಪರಿಚಿತ ಊರಿನಲ್ಲಿ, ಚಿಕ್ಕ ತಮ್ಮ, ತಂಗಿಯರನ್ನು ಕಟ್ಟಿಕೊಂಡು ವಿಧವೆ ತಾಯಿಯೊಡನೆ ಅವನು, ಜೀವನ ನಡೆಸುವುದಾದರೂ ಹೇಗೆ?

ಪ್ರಯಾಣಿಕರಿಂದ ತುಂಬಿದ ಆ ಹಡಗನ್ನು ಕಲ್ಲಿನ ಬಂದರು ಕಟ್ಟೆಗೆ ಕಟ್ಟಿದಾಗ, ಆ ಅಧಿಕಾರಿ ದಪ್ಪ ಧ್ವನಿಯಲ್ಲಿ ಹೀಗೆಂದ: "ನಡೆಯ ಬಲ್ಲವರು ದಂಡೆಗೆ ಹೋಗಬಹುದು. ನಡೆಯಲಾಗದವರು, ಗುಣವಾಗುವವರೆಗೂ ಹಡಗಿನಲ್ಲೇ ಉಳಿಯಬೇಕು. ಇಲ್ಲವಾದರೆ...." ಭುಜವನ್ನೊಮ್ಮೆ ಕುಣಿಸಿ ಸರಸರನೆ ಹಗ್ಗದೇಣಿಯಿಳಿದ.

ಹಡಗಿಳಿದು ಬಂದ ಪ್ರಯಾಣಿಕರನ್ನು ಊರಿನ ಬೀದಿಗಳಲ್ಲಿ ಕರೆದೊಯ್ದು. ಸಾಕಷ್ಟು ಸಾಲುಗಟ್ಟಿದ್ದ, ಚಿಂದಿಬಟ್ಟೆಧಾರಿಗಳು ಅಧಿಕಾರಿಯ ಹಿಂದೆ ಕಾಲೆಳೆದುಕೊಂಡು ನಡೆದರು. ಹಲವಾರು ವಾರಗಳ ಕಾಲ ಸಮುದ್ರದಲ್ಲಿದ್ದು ಬಂದ ಆ ಪ್ರಯಾಣಿಕರ ಮೂಗಿಗೆ ಚರಂಡಿಗಳಿಂದಲೂ ಮನೆಗಳ ಕಡೆಯಿಂದಲೂ ಬಂದ ಕಟರು, ಉತ್ಕಟವಾದ ಹುಳಿವಾಸನೆಯಂತೆ ಭಾಸವಾಯಿತು. ಪೀಟರ್ ನೋಡಿದ್ದ ಯೂರೋಪಿನ ನಗರಗಳಿಗೆ ಹೋಲಿಸಿದರೆ ನ್ಯೂಯಾರ್ಕ್ ಸಣ್ಣ ಪಟ್ಟಣವೇ. ಹತ್ತೇ ನಿಮಿಷಗಳಲ್ಲಿ ಅವರು ಊರಿನ ಕೊಳಕು ಬೀದಿಗಳನ್ನೆಲ್ಲಾ ದಾಟಿ ಬಯಲನ್ನು ಸೇರಿದರು. ಅಲ್ಲಿ ಬೂಸರು ಕಟ್ಟಿದ ಬಿಳಿಯ ಡೇರೆಗಳು ಅವರನ್ನು ಸ್ವಾಗತಿಸಿದವು.

ತಮ್ಮ ಜೊತೆಯಲ್ಲಿಯೇ ಬೇರೆ ಹಡಗುಗಳಲ್ಲಿ ಇಂಗ್ಲೆಂಡಿನಿಂದ ಪ್ರಯಾಣ ಬೆಳೆಸಿದ ಇತರ ಪ್ಯಾಲಟೈನ್ ಮಿತ್ರರು ಅಲ್ಲಾಗಲೆ ಬಂದಿಳಿದಿದ್ದರು. ಇಂಗ್ಲೆಂಡಿನಿಂದ ಪ್ರಯಾಣ ಹೊರಟವರ ಸಂಖ್ಯೆ ಸುಮಾರು ೩೪೦೦; ಆದರೆ ಅಲ್ಲಿದ್ದವರು ೩೦೦೦ಕ್ಕೂ ಕಮ್ಮಿ. ಅವರ ಸಂಖ್ಯೆ ಇನ್ನೂ ಇಳಿಮುಖವಾಗುವುದೆಂದು ಪೀಟರಿಗೆ ಸ್ಪಷ್ಟವಾಗಿ ಭಾಸವಾಯಿತು. ಟೈಫಸ್ ವ್ಯಾಧಿ ಸರ್ವೇಸಾಮಾನ್ಯವಾಗಿತ್ತು. ಆ ಬೇಸಿಗೆಯಲ್ಲಿ ಆ ವ್ಯಾಧಿಗೆ "ಪ್ಯಾಲಟೈನ್ ಜ್ವರ" ಎಂಬ ಹೊಸ

ಹೆಸರು ಸಹಜವಾಗಿ ಬಂದಿತ್ತು.

ಡೇರೆಗಳ ನಗರವನ್ನು ಆರು ವಲಯಗಳಾಗಿ ವಿಭಾಗಿಸಿ, ಪ್ರತಿಯೊಂದಕ್ಕೂ ಒಬ್ಬೊಬ್ಬ ಮುಖ್ಯಾಧಿಪತಿಯನ್ನು ನೇಮಿಸಿದ್ದರು. ನೆದರ್‌ಲೆಂಡಿನಲ್ಲೂ, ಇಂಗ್ಲೆಂಡಿನಲ್ಲೂ ನೋಡಿದ್ದವನೊಬ್ಬ ಚಿಕ್ಕ ಜೆಂಗರ್ ಕುಟುಂಬವನ್ನು ಸ್ವಾಗತಿಸಿದ. ನಾಲ್ಕು ಕುಟುಂಬ ಗಳಿದ್ದ ಡೇರೆಯೊಂದರಲ್ಲಿ ಈ ಹೊಸಬರಿಗೂ ಸ್ಥಳ ಕೊಡಿಸಿ, ಸರಕಾರದ ಸಾಲವೆಂದು ಕೆಲವು ನಾಣ್ಯಗಳನ್ನು ಕೈಗಿತ್ತ.

ಆ ಸಾಯಂಕಾಲ ಪೀಟರನ ತಾಯಿ ಇತರ ಹೆಂಗಸರೊಡನೆ, ಡೇರೆಯ ಮುಂಭಾಗದಲ್ಲಿ ರಾತ್ರಿಯ ಭೋಜನವನ್ನು ಸಿದ್ಧಗೊಳಿಸು ತ್ತಿದ್ದಾಗ, ಪೀಟರ್ ಒಳಗೆ ಇತರ ಗಂಡಸರೊಡನೆ ಮಾತನಾಡುತ್ತಿದ್ದ. ರೋಗಗ್ರಸ್ತನೊಬ್ಬನ ಪಕ್ಕದ ಸಂದೂಕದ ಮೇಲಿದ್ದ ನಾಲ್ಕು ಪುಸ್ತಕ ಗಳನ್ನು ಕಂಡು, ಅವುಗಳ ಬಳಿ ತೆರಳಿ, ಒಂದೊಂದನ್ನಾಗಿ ಎತ್ತಿ ಕೊಂಡು ಅವುಗಳ ಹರಿದ ರಟ್ಟುಗಳನ್ನು ತಿರುವಿದ. ಇತ್ತೀಚಿನ ಕೆಲವು ವರ್ಷಗಳಲ್ಲಿ ತಾನು ಇನ್ನಷ್ಟು ಚೆನ್ನಾಗಿ ಓದು ಕಲಿಯ ಬೇಕೆಂಬ ಭಾವನೆ ಅವನ ಮನಸ್ಸಿನಲ್ಲಿ ಆಗಾಗ ಸುಳಿದಿತ್ತು. ಆದರೆ ಅವನ ತಿರುಗಾಲಿಯ ಜೀವನದಲ್ಲಿ ಶಾಲೆಗೆ ಕಾಲಿಡುವ ಯೋಗವೇ ಒದಗಿರಲಿಲ್ಲ. ಕೈಯಲ್ಲಿ ಪುಸ್ತಕ ಹಿಡಿಯುವ ಅವಕಾಶ ದೊರೆತದ್ದೂ ಅಪರೂಪವೇ.

"ನಿಮ್ಮಪ್ಪ ನಿನಗೇನಾದರೂ ಓನಾಮ ಕಲಿಸಿದಾನೇನಯ್ಯ?" ರೋಗಗ್ರಸ್ತ ಪ್ರಶ್ನಿಸಿದ.

ಪೀಟರ್ ಸಂಕೋಚದಿಂದ ಉತ್ತರವಿತ್ತ. "ರಾಟರ್‌ಡಾಂನಲ್ಲಿ ಒಮ್ಮೆ ಒಂದು ಡಚ್ ಪುಸ್ತಕವನ್ನು ಎರವಲು ತಂದು ಸ್ವಲ್ಪ ಹೇಳಿ ಕೊಟ್ಟ. ನನಗೆ ಹೆಚ್ಚು ಕಲಿಯಬೇಕೆಂಬ ಆಸೆಯಿತ್ತು."

"ಇದನ್ನು ತಗೋ, ಏನಾದರೂ ಅರ್ಥವಾದೀತೇನೋ ನೋಡು." ಆ ಮನುಷ್ಯ ಮೊಳಕೈ ಊರಿ, ಸ್ವಲ್ಪ ಎದ್ದು ಒಂದು ಪುಸ್ತಕವನ್ನು ಎತ್ತಿಕೊಂಡು "ಇದು ಭೂಗೋಳ. ಡಚ್ ಭಾಷೆಯದು. ಅಮೆರಿಕವನ್ನು ಕುರಿತ ಅಧ್ಯಾಯ ಇಲ್ಲಿದೆ. ಇಲ್ಲಿಂದ ಓದು."

ರಾತ್ರಿ ಊಟದ ನಂತರ ಪೀಟರ್ ಪುಸ್ತಕವನ್ನೆತ್ತಿಕೊಂಡು, ಹೊರಗಡೆಯ ಹಸಿರು ಹುಲ್ಲಿನಮೇಲೆ ಬೋರಲು ಮಲಗಿ ಪುಸ್ತಕ ತೆರೆದ. ಹುಲ್ಲಿನ ತಂಪು ಕಂಪನ್ನು ಸೇವಿಸುತ್ತ, ಬೇಸಿಗೆಯ ಸುದೀರ್ಘವಾದ ಸಂಜೆ ಬೆಳಕಿನಲ್ಲಿ ಸಾವಧಾನವಾಗಿ ಓದತೊಡಗಿದ. ಓದು ಮುಂದುವರಿದಂತೆ, ಈ ಅಪರಿಚಿತ ಪ್ರದೇಶದಲ್ಲಿ ಜೀವನ ಸಾಗಿಸುವುದು ಹೇಗೆಂಬ ಯೋಚನೆ ಮರತೇಹೋಯಿತು. ಕೆಲ ಶಬ್ದಗಳು ಕಠಿಣವಾಗಿದ್ದರೂ, ಹೊಸ ದೇಶವಾದ ಅಮೆರಿಕವನ್ನು ಕುರಿತ ಒಂದೂವರೆ ಪುಟಗಳ ಅಧ್ಯಾಯವನ್ನು ಹಾಗೂ ಹೀಗೂ ಓದಿ ಮುಗಿಸಿದ.

ಮುದ್ರಿತ ಸಾಲುಗಳ ಮೂಲಕ ಮನೋಭೂಮಿಕೆಯಲ್ಲಿ ಹೊಸ ದೇಶದ ಮಹಾದ್ವಾರ ತೆರೆದುದರಿಂದ ಸಂತೋಷದ ಪುಳಕ ನಾಡಿಗಳಲ್ಲಿ ಮಿಡಿಯಿತು. ನೂರಾರು ಮೈಲಿಗಳಷ್ಟು ವಿಸ್ತಾರವಾದ ಅರಣ್ಯಗಳೂ, ಹುಲ್ಲುಗಾವಲುಗಳೂ, ಅವುಗಳಲ್ಲಿನ ಕರಡಿಗಳೂ ತೋಳಗಳೂ, ಇಂಡಿಯನ್ ಡೇರೆಗಳೂ ಅವನ ಕಣ್ಣುಮುಂದೆ ಗೋಚರಿಸಿದವು. ಹೇಗಾದರಾಗಲಿ ಚೆನ್ನಾಗಿ ಓದುವುದನ್ನು ಕಲಿಯಲೇಬೇಕು – ಎಂದು ತನಗೆ ತಾನೇ ಹೇಳಿಕೊಂಡ.

ಪುಸ್ತಕಗಳೆಲ್ಲ ಆಶ್ಚರ್ಯಕರ ವಸ್ತುಗಳಂತೆ ತೋರಿದವು. ಅವನ್ನು ಬರೆದವರಿಗೂ ಮುದ್ರಿಸಿದವರಿಗೂ ಮಹಾ ಗೌರವ ಸಲ್ಲಲೇ ಬೇಕು. ತಾನೊಂದು ಪುಸ್ತಕವನ್ನು ರಚಿಸಿದಂತೆ, ನೆರೆಯುವರೆಲ್ಲ ತನ್ನ ಮೇಲೆ ಅಭಿನಂದನೆಗಳ ವರ್ಷ ಕರೆದಂತೆ, ಒಂದು ಕ್ಷಣ ಚಿಂತಿಸಿದ.

ಈ ಮಧ್ಯೆ ಆಹಾರ ಧಾನ್ಯಗಳ ಬೆಲೆಯನ್ನು ಇಳಿಸುವುದಕ್ಕಾಗಿ ಗವರ್ನರ್ ಹೊರಡಿಸಿದ್ದ ಘೋಷಣೆಯನ್ನು ಅವನ ಸುತ್ತಲಿದ್ದ ಗಂಡಸರು ಚರ್ಚಿಸುತ್ತಿದ್ದರು. ಸಹಜವಾಗಿಯೇ ಹೊಸ ಗವರ್ನರ ಬಗೆಗೆ ಅವರಲ್ಲಿ ಅಭಿಮಾನ ಮೂಡಿತ್ತು.

“ಇಲ್ಲ, ಹಾಗೇನಿಲ್ಲ! ಎಲ್ಲ ಗವರ್ನರೂ ಒಳ್ಳೆಯವರೇನಲ್ಲ. ಮುಂಚಿನವನನ್ನು ಜೈಲಿಗೆ ಹಾಕಲಿಲ್ಲವೇ !” ಎಂದು ಎರಡು ತಿಂಗಳಿಂದ ಈ ಪ್ರದೇಶದಲ್ಲಿ ವಾಸಿಸುತ್ತಿದ್ದ ಕ್ಷೌರವಿಲ್ಲದ ಮುಖದ ಬಡಕಲು

ಜರ್ಮನ್ ಬಡಗಿಯೊಬ್ಬ, ಗಟ್ಟಿಯಾಗಿ ನಗುತ್ತ ಇತರರಿಗೆ ಹೇಳಿದಾಗ, ರಾಜಕೀಯದ ಗಂಧವಿಲ್ಲದ ಪೀಟರ್ ವಿಸ್ಮಯದಿಂದ ತಲೆ ಎತ್ತಿ ಆತನೆಡೆ ದಿಟ್ಟಿಸಿದ.

"ಗವರ್ನರನ್ನೆ ಜೈಲಿಗೆ ಹಾಕೋದಕ್ಕೆ ಜನರಿಗೆ ಹೇಗೆ ಸಾಧ್ಯ? ಆಗೋಲ್ಲ" ಎಂದು ಪೀಟರ್ ಪ್ರತಿಭಟನೆಯ ಮರುನುಡಿಯಾಡಿದ.

"ಇಲ್ಲಿ ಹಾಕಿದರಯ್ಯ" ಬಟ್ಟೆಮುಚ್ಚದ ತೋಳಿನ ಮೇಲೆ ಬಂದು ಕುಳಿತ ಸೊಳ್ಳೆಯೊಂದನ್ನು ಹೊಡೆಯುತ್ತ ಆತ ಉತ್ತರಿಸಿದ. "ಪರೀಕ್ಷೆಗೆ ಲಂಚಕೊಡದಿದ್ದರೆ ಗವರ್ನರ್ ಮಹಾಶಯ ಇನ್ನೂ ಜೈಲಿನಲ್ಲೇ ಕೊಳೆಯಬೇಕಾಗಿತ್ತು."

ಸತ್ತ ಸೊಳ್ಳೆಯನ್ನು ಹೆಬ್ಬೆಟ್ಟು ಮತ್ತು ಮೊದಲ ಬೆರಳುಗಳಲ್ಲಿ ಹಿಡಿದೇ ಆ ಬಡಗಿ "ಅಲ್ಲಿ ನೋಡು. ಮಹಾದ್ವಾರದ ಬಲಗಡೆ 'ನೆಲದಂತಸ್ತಿದೆ'ಯಲ್ಲಾ ಅದೇ ಜೈಲು" ಎಂದು ಕೈ ತೋರಿಸಿದ.

ಅಲ್ಲಿದ್ದವರೆಲ್ಲರೂ ಒಂದೇ ಸಾರಿ ಅತ್ತಕಡೆ ಕತ್ತು ಹೊರಳಿಸಿದರು. ಮಣ್ಣಿನ ಗಲ್ಲಿಯೊಂದರಲ್ಲಿ ಹಾದು ಹೋದರೆ ನಗರ ಭವನ; ಇಟ್ಟಿಗೆಯ ಮಜಭೂತಾದ ಆ ಕಟ್ಟಡ ರಸ್ತೆಗೆ ಅಡ್ಡವಾಗಿ ಚಚ್ಚೌಕವಾಗಿ ನಿಂತಿತ್ತು. ಅವರೆಲ್ಲ ನೋಡುತ್ತಿದ್ದಂತೆ ಜೈಲಿನ ಕಿಟಕಿಯೊಂದರಿಂದ ಆಗತಾನೆ ಹೊತ್ತಿಸಿದ ಮೇಣದ ಬತ್ತಿಯ ಬೆಳಕು ಚೆಲ್ಲಿತು.

ಪೀಟರ್ ಮನಸ್ಸಿನಲ್ಲೇ ಗವರ್ನರ್ ಸ್ವರೂಪವನ್ನು ಚಿತ್ರಿಸಿಕೊಂಡ. ಚಿತ್ರವಿಚಿತ್ರವಾದ ರೇಷ್ಮೆ ಉಡುಪುಗಳಿಂದ ಅಲಂಕರಿಸಿಕೊಂಡ ರಾಜಠೀವಿಯ ಗವರ್ನರ್, ಅವನ ಸುತ್ತ ಜಬರ್ದಸ್ತಿನ ಸೇವಕರು. ಅಂಥ ಮನುಷ್ಯನನ್ನು ಜೈಲಿನಲ್ಲಿ ಇಟ್ಟಿದ್ದರೆಂಬ ಮಾತು ಅಪಹಾಸ್ಯವೆನಿಸಿತು. ನಗು ಬಂತು.

ಅದೇ ಜೈಲಿನಲ್ಲಿ ತಾನೂ ಒಂದು ದಿನ ಬಂಧಿತನಾಗಬಹುದೆಂಬ ಭಾವನೆ ಅವನ ಮನಸ್ಸಿನಲ್ಲಿ ಸುಳಿಯಲಿಲ್ಲ.

---

## ಅಧ್ಯಾಯ ೨

### ಪೀಟರ್ ಕಂಡ ಉದ್ಯೋಗ

ತನ್ನ ತಮ್ಮನೊಡನೆ, ಪೀಟರ್ ವಿನೋದಾರ್ಥವಾಗಿ ನಗರದಲ್ಲೆಲ್ಲ ಓಡಾಡಿದ.

ಚಮ್ಮಾರನ ಅಂಗಡಿಯೊಂದರ ಮುಂದೆ ನಿಂತು ಇಬ್ಬರು ಬಾಲಕರೂ ತಮ್ಮ ಹರಿದ ಬೂಟ್ಸುಗಳನ್ನು ನೋಡಿಕೊಂಡರು. ರಂಧ್ರದ ಮೂಲಕ ಹೊರಗೆ ಇಣಿಕಿದ್ದ ತನ್ನ ಕಾಲ ಹೆಬ್ಬೆರಳೊಂದನ್ನು ಪೀಟರ್ ಕುಣಿಸಿದ.

ತೆರೆದ ಬಾಗಿಲ ಬಳಿ ಕುಳಿತು ಬೂಡ್ಸಿನ ಹಿಮ್ಮಡಿಗೆ ಸರಸರನೆ ಮೊಳೆ ಹೊಡೆಯುತ್ತಿದ್ದವನನ್ನು ಉದ್ದೇಶಿಸಿ ಪೀಟರ್, "ಅಯ್ಯಾ, ನಾನೊಂದು ತಮಾಷೆ ಹಾಡು ಹೇಳ್ತೇನೆ. ಅದರ ಬದಲು ನೀನು ನನ್ನ ಬೂಡ್ಸ್ ರಿಪೇರಿ ಮಾಡಿಕೊಡ್ತೀಯ ?" ಎಂದು ಕೇಳಿದ.

ಅಂಗಡಿಯ ಒಳಗಡೆ ಕುಳಿತಿದ್ದ ಮಾಲಿಕ ಒಡನೆ ಮೇಲೆದ್ದು "ಹೋಗ್ರೋ, ಹೋಗ್ರೋ" ಎಂದು ಗದರಿಸಿದ.

ಇಬ್ಬರೂ ನೀರ ತಡಿಗೆ ಓಡುತ್ತಿದ್ದಂತೆ, ಪೀಟರನ ಮನಸ್ಸಿಗೊಂದು ಯೋಚನೆ ಹೊಳೆಯಿತು. ಜೀವನೋಪಾಯದ ಮಹಾ ಸಮಸ್ಯೆಗೆ ಅದೊಂದೇ ಉತ್ತರ ಎನ್ನುವಂತೆ ಭಾಸವಾಯಿತು. ಒಂದು ನಿಮಿಷದ ನಂತರ ತಟಕ್ಕನೆ ನಿಂತ. "ಜಾನ್, ಎಲ್ಲಾದರೂ ಅಪ್ರೆಂಟಿಸ್ ಆಗಬೇಕೆಂಬುದು ನನ್ನ ಯೋಚನೆ. ಏನಾದರೂ ಕೆಲಸ ಕಲಿಯುವುದಕ್ಕೆ ಅದೊಂದೇ ಮಾರ್ಗ !" ಎಂದು ಹೊಸ ಶೋಧನೆ ಮಾಡಿದವನಂತೆ ಗಡಬಡಿಸಿದ.

ದೂರದಲ್ಲಿ ಮನೆಗಳ ಮೇಲ್ಛಾವಣಿಗಳು ಮೇಲೆದ್ದಂತೆ ಹಡಗುಗಳ ಧ್ವಜಸ್ತಂಬಗಳು ಕಂಗೊಳಿಸುತ್ತಿದ್ದವು. ಆದರೆ ಹುಡುಗರ ಆಸಕ್ತಿ

ಅಂಗಡಿಯೊಂದರಿಂದ ಕೇಳಿ ಬರುತ್ತಿದ್ದ ಕಿರುಗುಟ್ಟುವ ಶಬ್ದದ ಕಡೆ ಆಕರ್ಷಿತವಾಯಿತು. ಅದೇನೆಂಬುದನ್ನು ನೋಡಲು ತೆರೆದ ಬಾಗಿಲ ಬಳಿಗೆ ಸಾಗಿದರು.

ಮೇಜಿನಂಥ ಮರದ ವಸ್ತು. ಇಕ್ಕೆಡೆಗಳಲ್ಲಿ ಮರದ ದಪ್ಪ ಬಿಗಿ ಪಟ್ಟಿಗಳು. ಆರು ಅಂಗುಲ ದಪ್ಪದ ಭಾರಿಯಾದ ಮರದ ತಿರುಪುಳಿಯನ್ನು ಅದರ ಮಧ್ಯೆ ಎತ್ತಿ ನಿಲ್ಲಿಸಿದ್ದನು. ಈ ಯಂತ್ರವನ್ನು ತರುಣನೊಬ್ಬ ನಡೆಸುತ್ತಿದ್ದ.

ಬಲವಾದ ಮೈ ಕಟ್ಟಿನ ಆ ತರುಣ ತಿರುಪುಳಿಯನ್ನು ತಿರುಗಿಸಿ, ತಳಕ್ಕೆ ಹಾಕಿದ ಮುಚ್ಚಳದಂತಿದ್ದ ಚಪ್ಪಟೆ ಹಲಗೆಯನ್ನು ಮೇಲಕ್ಕೆತ್ತಿ ಮೇಜು ಮತ್ತು ಈ ಹಲಗೆಗಳ ನಡುವಿನಿಂದ ಕಾಗದದ ಹಾಳೆಯೊಂದನ್ನು ಎಳೆದುಕೊಂಡು, ಇನ್ನೊಂದು ಹೊಸ ಹಾಳೆಯನ್ನು ಅಲ್ಲಿಗೆ ಜರುಗಿಸಿ, ತಿರುಪುಳಿಯ ಮೇಲ್ತುದಿಯಲ್ಲಿದ್ದ ಸನ್ನೆಯನ್ನು ತಳ್ಳಿ, ಚಪ್ಪಟೆ ಹಲಗೆಯನ್ನು ಕೆಳಕ್ಕೆ ಇಳಿಸುತ್ತಿದ್ದ. ಮೈಬಲವನ್ನೆಲ್ಲ ಬಿಟ್ಟು ಸನ್ನೆಯನ್ನು ಒತ್ತುತ್ತಿದ್ದ. ದೀರ್ಘ ಉಚ್ಛ್ವಾಸ ನಿಶ್ವಾಸಗಳಿಂದ, ಅಪಾರ ಶ್ರಮದಿಂದ ಮೈಯಲ್ಲಿ ಬೆವರು ಕೋಡಿಹರಿದಿತ್ತು.

"ಅದೇನು?" ಎಂದು ಜಾನ್ ಕೇಳಿದ.

ಪೀಟರ್ ಸಾವಧಾನವಾಗಿ ಉತ್ತರಿಸಿದ. "ಇಂಥದೊಂದನ್ನು ನಾನು ನೆದರ್‌ಲೆಂಡಿನಲ್ಲಿ ನೋಡಿದ್ದೆ. ಅದು ಕೆಲಸ ಮಾಡುವುದು ಹೀಗೆ: ನೀನು ಕಾಗದ, ನಾನು ಮುದ್ರಣ ಯಂತ್ರ ಅನ್ನು." ಜಾನ್‌ನ ತಲೆಯಮೇಲೆ ಎಡಗೈಯನ್ನು ಬಲವಾಗಿ ಅದುಮಿ, ಊಹೆಯ ಸನ್ನೆಯನ್ನು ಬಲಗೈಯಲ್ಲಿ ಹಿಡಿದುಕೊಂಡು ತಮ್ಮನ ಸುತ್ತ ಒಂದು ಸುತ್ತು ಬಂದ. ಸನ್ನೆಯನ್ನು ಬಲವಾಗಿ ಒತ್ತುತ್ತಿರುವಂತೆ ತೋರಿಸಲು ಉಸಿರು ಕಟ್ಟಿ, ಶ್ರಮಪಡುತ್ತಿರುವಂತೆ ನಟಿಸಿದ. ಯಂತ್ರದ ಶಬ್ದವನ್ನು ಅನುಕರಿಸಿ ಬಾಯಲ್ಲಿ ಕಿರುಚು ಶಬ್ದ ಮಾಡಿದ. ಈ ಮಧ್ಯೆ ಅವನ ಎಡಗೈ ತಮ್ಮನ ತಲೆಯನ್ನು ನೆಲದ ಕಡೆಗೆ ಅದುಮುತ್ತಿತ್ತು.

ವಿಧಿಯಿಲ್ಲದೆ ಮಂಡಿಯೂರಿ ಕುಳಿತುಕೊಳ್ಳಬೇಕಾಗಿ ಬಂದ ಜಾನ್, "ಆಗಿ ಹೋಯಿತು. ನಾನೆಲ್ಲ ಮುದ್ರಿತನಾದೆ!"

ಎಂದು ಕೂಗಿದ.

ಅಂಗಡಿಯ ಮಾಲಿಕ, ವ್ಯಗ್ರನಾಗಿ ಬಾಗಿಲಿಗೆ ಬಂದ. "ಹೋಗ್ರೋ ರಸ್ತೇಲಿ ಗಲಾಟೆ ಮಾಡೋದಕ್ಕಿಂತ ಬೇರೆ ಉತ್ತಮ ಕೆಲಸ ನಿಮಗಿಲ್ಲವೇನ್ರೋ, ಹೋಗ್ರೋ" ಎಂದು ಗಡಸಾಗಿ ನುಡಿದ.

ಆತ ತೀಕ್ಷ್ಣವಾದ ಸಣ್ಣ ಕಣ್ಣುಗಳಿಂದ ಕೆಕ್ಕರಿಸಿ ನೋಡಿದುದು ಪೀಟರಿಗೆ ಹಿತವೆನಿಸಲಿಲ್ಲ. ಅಗಲವಾದ ಭುಜಕಟ್ಟು, ಚಾಚಿದ ಸದೃಢ ಎದೆ, ಅನೇಕ ಗುಂಡಿಗಳನ್ನು ಹಾಕಿದ ವೇಸ್ಟ್ ಕೋಟು, ಮಡಿಚಿದ ಷರಟು. ಮುನ್ಚಾಚಿದ ಹಣೆಯಿಂದ ಇಳಿಯುತ್ತಿದ್ದ ಬೆವರನ್ನು, ಕೈಬೆರಳುಗಳಿಗೆ ಕಪ್ಪುಮಸಿ ಹತ್ತಿದ್ದುದರಿಂದ ಮುಂಗೈನಿಂದ ಒರಸಿಕೊಂಡ.

"ನಾನೂ ಒಬ್ಬ ಮುದ್ರಕ" ಪೀಟರ್ ಘೋಷಿಸಿದ.

"ನಾನೇ ಕಾಗದ." ಜಾನ್ ರಸ್ತೆಯೆಡೆಗೆ ಬಾಗುತ್ತ, "ನಾನು ಪುಸ್ತಕ ಆಗೋದು ಬೇಡವೇ ನಿಮಗೆ?" ಎಂದ. ಅದೇ ತಾನೆ ತಾನು ಗಮನಿಸಿದ ಬೋರ್ಡಿನ ಕಡೆ ಕೈ ತೋರುತ್ತ "ಅದರ ಹಾಗೆ" ಎಂದು ಪೀಟರ್ ಮಾತು ಸೇರಿಸಿದ. ಬೈಬಲ್ಲಿನಂತೆ ಕಾಣುವ ಹಾಗೆ ಚಿತ್ರಿಸಿದ್ದ ಬೋರ್ಡೊಂದು ಬಾಗಿಲಿನ ಮೇಲೆ ಗಾಳಿಯಲ್ಲಿ ತೂಗಾಡುತ್ತಿತ್ತು.

ತೀವ್ರವಾಗಿ ಆಲೋಚನೆ ಮಾಡುವಂತೆ ಕಣ್ಣುಗಳನ್ನು ಸಂಕುಚಿತಗೊಳಿಸಿ, ಪೀಟರನನ್ನೇ ದಿಟ್ಟಿಸುತ್ತ ಆ ಮಾಲಿಕ, "ಗಟ್ಟಿಗ ಕಣಯ್ಯ ನೀನು. ಎಷ್ಟು ವರ್ಷ ನಿನಗೆ?" ಎಂದು ಕೇಳಿದ.

ಮುಖದ ಮೇಲಿದ್ದ ಮುಗುಳುನಗೆಯನ್ನು ಅಳಿಸಿ, ಗಂಭೀರ ಮುಖಮುದ್ರೆ ತಾಳುತ್ತ ಪೀಟರ್ ಗೌರವದಿಂದ "ಹದಿಮೂರು ಸಾರ್" ಎಂದುತ್ತರಿಸಿದ.

"ಅಷ್ಟೇನೆ? ವಯಸ್ಸಿಗೆ ಮೀರಿ ಬೆಳೆದಿದೀಯ. ಇಂಗ್ಲಿಷ್ ಓದೋಕೆ, ಬರೆಯೋಕೆ ಬರುತ್ತೇನು ನಿನಗೆ?"

"ಇಲ್ಲಾ ಸರ್"

ತತ್‌ಕ್ಷಣ ಆ ಗಣ್ಯ ಮಾಲಿಕ ಗರಕ್ಕನೆ ಹಿಂತಿರುಗಿದ. ಆತನ ಕೂದಲಿನ ಟೋಪಿಯ ತುದಿಗಳು ರೇಗಿ ತೊನೆದಾಡಿದವು.

ಒಡನೆ ಪೀಟರ್, "ಡಚ್ ಭಾಷೆಯಲ್ಲಿ ಸ್ವಲ್ಪ ಓದಿ ಬರೆದೂ ಮಾಡಬಲ್ಲೆ ಸಾರ್. ಬೈಬಲ್ ಕೆಲಸ ಮಾಡಲು ನನಗಾಸೆ ಸಾರ್" ಎಂದ.

ಆ ಗಣ್ಯವೃದ್ಧನಿಗೆ ಸ್ವಲ್ಪ ಸಂತೋಷವಾದಂತೆ ಕಂಡುಬಂತು. ಆತ ಮತ್ತೆ ಪೀಟರ್ ಕಡೆ ತಿರುಗಿ " ಡಚ್ ಭಾಷೆ ನೀನೆಲ್ಲಿ ಕಲಿತೆ ?" ಎಂದು ಕೇಳಿದ.

" ರಾಟರ್‌ಡಾಂನಲ್ಲಿ ಸಾರ್. ನಾನು ಹುಟ್ಟಿದ್ದು ಜರ್ಮನಿಯಲ್ಲಿ. ಆದರೆ ಇದ್ದದ್ದು ಹೆಚ್ಚುಕಾಲ ನೆದರ್‌ಲೆಂಡಿನಲ್ಲಿ. ಇಲ್ಲಿಗೆ ಬರುವ ಮುನ್ನ ಎರಡು ವರ್ಷಕಾಲ ಇಂಗ್ಲೆಂಡಿನಲ್ಲಿ ಇದ್ದೆವು." ತನ್ನ ಅನೇಕ ಭಾಷಾಜ್ಞಾನ ತನಗೆ ಸಹಾಯಕವಾಗಬಹುದೆಂದು ಪೀಟರ್ ಭಾವಿಸಿದ.

" ನೀವು ಡಚ್‌ಭಾಷೆಯಲ್ಲಿ ಮುದ್ರಿಸುತ್ತೀರೋ ಇಲ್ಲವೋ "

" ಅದನ್ನೂ ಅಚ್ಚು ಹಾಕುತ್ತೇವೆ" ಎಂದ ಆ ಮಾಲಿಕ. " ಆದರೆ ನೀನು ಮುದ್ರಣ ಉದ್ಯೋಗವನ್ನು ಕಲಿಯುವಾಗ ನಿನಗೆ ಫೀಜು ಕೊಡುವವರಾರು ? ನಿಮ್ಮ ತಂದೆ ಹದಿನೈದು ಷಿಲಿಂಗ್ ಖರ್ಚು ಮಾಡಬಲ್ಲರೆ ?"

ಪೀಟರ್ ಬೆಪ್ಪು ಹಿಡಿದವನಂತೆ ಕಾಲ ಕೆಳಗಿದ್ದ ಮಣ್ಣಿನ ಕಡೆ ನೋಡಿದ. " ಇಲ್ಲಿಗೆ ಬರುವಾಗ, ಹಡಗಿನಲ್ಲೇ ನಮ್ಮ ತಂದೆ ಮೃತರಾದರು." ತಾಯಿಯ ಹತ್ತಿರ ಅಷ್ಟಿಷ್ಟು ದುಡ್ಡೇನಾದರೂ ಇದ್ದರೆ ಅದು ಊಟಕ್ಕೇ ಬೇಕು. ಅವನಿಗಂತೂ ಅಷ್ಟೊಂದು ಹಣದ ಮಾತು ಗಗನ ಕುಸುಮ.

ಮಾಲಿಕ ನಿರಾಶೆಯ ನಿಟ್ಟುಸಿರು ಬಿಟ್ಟ. " ಇನ್ನು ಹೊರಡು. ಅಲ್ಲಿ ಇಲ್ಲಿ ನಿಂತು ಕಾಲ ಕಳೆಯುವುದಕ್ಕಿಂತ ಹೆಚ್ಚಿನ ಕೆಲಸ ಈ ನ್ಯೂಯಾರ್ಕ್ ನಗರದಲ್ಲಿದೆ, ನಿನ್ನಂಥ ಗಟ್ಟಿಮುಟ್ಟಾದ ಹುಡುಗರಿಗೆ. "

ನಿಧಾನವಾಗಿ ಹೆಜ್ಜೆ ಹಾಕಿದ ಪೀಟರ್. ಅಳಲಿಲ್ಲ. ಅಳುವುದಕ್ಕಾಗಲಿ, ಉತ್ಸಾಹದಿಂದ ಕುಣಿಯುವುದಕ್ಕಾಗಲಿ ಅದು ಕಾಲವಲ್ಲ. ಉದ್ದಕ್ಕೂ ಅನುಭವಿಸಿದ ಅದೃಷ್ಟ ಇದಕ್ಕಿಂತ ಭಿನ್ನವಲ್ಲ. ಒಳ್ಳೆ ಉದ್ಯೋಗ ಕಲಿತು ಒಳ್ಳೆ ಸಂಪಾದನೆ ಮಾಡುವ ಅವಕಾಶವಿಲ್ಲ.

ಗುಲಾಮು ಸೇವಕನಾಗಿ ತನ್ನನ್ನು ಮಾರಿಕೊಂಡು, ಜೀವನಾದ್ಯಾಂತ್ಯ ಮರ ಕಡಿದು, ನೀರು ಹೊತ್ತು, ಗಾಡಿ ಹೊಡೆದು, ಹೊಟ್ಟೆಗೆ ಸಾಲದ ವೇತನ ಪಡೆದು, ಸದಾ ಚಿಂದಿ ಬಟ್ಟೆ ಧರಿಸಿ, ಗುಂಡಿ ತೋಡಬೇಕು, ಹೆಣಕ್ಕೆ ಸಮಾಧಿ ಕಟ್ಟಬೇಕು.

---

# ಅಧ್ಯಾಯ ೩

## ಪೀಟರನ ದೃಢನಿರ್ಧಾರ

ಊರ ಹೊರವಳಯದಲ್ಲಿದ್ದ ಟೈಫಾಯಿಡ್ ಜ್ವರ, ನಗರದೊಳಕ್ಕೂ ತಲೆಹಾಕಿ ಭಯಂಕರ ಭೂತ ಸ್ವರೂಪ ತಾಳಿತು. ಅಲ್ಲೊಬ್ಬ ವಯಸ್ಕ, ಇಲ್ಲೊಂದು ಮಗು ಹೀಗೆ ಆಹುತಿ ತೆಗೆದುಕೊಳ್ಳ ತೊಡಗಿತು. ವಾಲ್ ಸ್ಟ್ರೀಟಿನ ಉತ್ತರದ ಡೇರಾ ನಗರದಲ್ಲಂತೂ ವ್ಯಾಧಿಗ್ರಸ್ತರ ಸಂಖ್ಯೆ ದಿನ ದಿನಕ್ಕೂ ಹೆಚ್ಚತೊಡಗಿತು – ಇದನ್ನೆಲ್ಲಾ ನೋಡಿ ನ್ಯೂಯಾರ್ಕಿನ ನಾಗರಿಕರು ಭೀತಿಗೊಂಡರು.

ತತ್ಪರಿಣಾಮವಾಗಿ ಪ್ಯಾಲಟೈನ್‌ನವರನ್ನೆಲ್ಲ ನಟ್ಟನ್ ದ್ವೀಪಕ್ಕೆ (ಅನಂತರ ಈ ದ್ವೀಪಕ್ಕೆ ಗವರ್ನರ್ ದ್ವೀಪವೆಂಬ ಹೆಸರು ಬಂತು) ರವಾನಿಸಿದರು. ಆ ಜನ ಅಲ್ಲೇ ಗುಡಿಸಲುಗಳನ್ನು ಕಟ್ಟಿಕೊಂಡರು.

ಆದರೆ ಅವರ ನೆಲೆ ಅದೂ ಆಗಲಿಲ್ಲ. ಮತ್ತೆ ಗಂಟುಮೂಟೆ ಕಟ್ಟಬೇಕಾಯಿತು. ಈ ವಿಷಯವನ್ನು ಕುರಿತು ಗವರ್ನರ್ ಹಂಟರ್, ಲಂಡನ್ ಅಧಿಕಾರಿಗಳಿಗೆ, ಆಗ ಬರೆದ ಮಾತುಗಳು ಹೀಗಿವೆ :

"ದರಿದ್ರ ಪ್ಯಾಲಟೈನರನ್ನು ರೋಗ ಕಿತ್ತು ತಿನ್ನುತ್ತಿದೆ. ಈಗೇನೋ ಶೀಘ್ರವಾಗಿ ಗುಣಮುಖರಾಗುತ್ತಿದ್ದಾರೆ. ಇದುವರೆಗೆ ಕಣ್ಣುಮುಚ್ಚಿದವರ ಸಂಖ್ಯೆ ೪೨೦.

ಹಡ್ಸನ್‌ನದಿ ದಂಡೆಯಲ್ಲಿ ನೂರು ಮೈಲಿ ಮೇಲಕ್ಕೆ ೬೦೦೦ ಎಕರೆಗಳನ್ನು ವಿಧಿಯಿಲ್ಲದೆ ಕೊಂಡಿದ್ದೇನೆ ; ನದಿಯ ಇಕ್ಕೆಡೆಗಳಲ್ಲಿ ಐದು ಗ್ರಾಮಗಳನ್ನು ಕಟ್ಟಿ ಅವರನ್ನೆಲ್ಲ ನೆಲೆಗೊಳಿಸಬೇಕಾಗಿದೆ. ಚಳಿಗಾಲಕ್ಕೆ ಮುನ್ನವೇ ಅವರನ್ನೆಲ್ಲ ಸಾಗಿಸಲು ಸಾಧ್ಯವಿದ್ದ ತುರ್ತು ಕ್ರಮಗಳನ್ನೆಲ್ಲ ಕೈಗೊಂಡಿದ್ದೇನೆ."

ನಟ್ಟನ್ ದ್ವೀಪದ ಅತ್ಯಂತ ದೊಡ್ಡ ಗುಡಿಸಲಿನ ಮುಂದೆ ಗುಂಪು

ನೆರೆದಿತ್ತು. ಅವರ ಹಿಂಬದಿಯಲ್ಲಿ ಪೀಟರ್ ವ್ಯಸನಾಕ್ರಾಂತನಾಗಿ ನಿಂತಿದ್ದ. ಮೇಜಿನ ಮೇಲೆ ಕಾಗದದ ರಾಶಿಯನ್ನು ಹಾಕಿಕೊಂಡು ಕುಳಿತಿದ್ದ ಗವರ್ನರನ ಏಜೆಂಟ್ ಜಾರ್ಜ್ ಕ್ಲಾರ್ಕ್‌ನ ಜೊತೆಯಲ್ಲಿ ಗುಂಪಿನ ಜನ ತಮಗೆ ದೊರೆಯಬಹುದಾದ ಸಾಗುಭೂಮಿಯನ್ನು ಕುರಿತು ಆಸಕ್ತಿಯಿಂದ ಚರ್ಚಿಸುತ್ತಿದ್ದರು. ಜಾರ್ಜ್ ಕ್ಲಾರ್ಕ್ ಬಹು ಸಾವಧಾನ ಸ್ವಭಾವದ ತುಂಬು ಎಚ್ಚರಿಕೆಯ ವ್ಯಾಪಾರಿಯಂತಿದ್ದ. ಸಾಗುಭೂಮಿಯನ್ನು ಪಡೆಯಲು ಮುಂದೆ ಬರುವ ನೆಲಸುಗಾರರು ಮನೆ ಕಟ್ಟಿ, ಜಮೀನನ್ನು ಸಾಗಿಗೆ ತಂದು, ಧಾನ್ಯ ಬಿತ್ತಿ, ಸಮೀಪದಲ್ಲಿ ಬೆಳೆದ ಮರಗಳಿಂದ ಟರ್ಪೆಂಟೈನ್ ಮತ್ತು ಟಾರು ಸಂಗ್ರಹಿಸುವುದಾಗಿಯೂ ಎರಡು ವರ್ಷಗಳೊಳಗೆ ಎಲ್ಲಾ ತೆರಿಗೆಗಳನ್ನೂ ಶುಲ್ಕಗಳನ್ನೂ ಪಾವತಿ ಮಾಡುವುದಾಗಿಯೂ ಒಪ್ಪಿ ಕರಾರು ಪತ್ರವೊಂದಕ್ಕೆ ಸಹಿ ಹಾಕಬೇಕಿತ್ತು. "ಎಂಟು ವರ್ಷ ಮತ್ತು ಅದನ್ನು ಮೀರಿದ ಮಕ್ಕಳನ್ನು ಮರ ಸಂಗ್ರಹಿಸುವ, ಕಪ್ಪುರಾಳ ಕಾಯಿಸುವ ಕೆಲಸಗಳಿಗೆ ವಯಸ್ಕರಿಗೆ ಸಹಾಯಕರನ್ನಾಗಿ ನೇಮಿಸಿಕೊಳ್ಳಬೇಕು" ಎಂಬ ಷರತ್ತು ಕೂಡ ಆ ಮುದ್ರಿತ ಕರಾರು ಪತ್ರದಲ್ಲಿತ್ತು.

ಹದಿಮೂರು ವರ್ಷದ ಹುಡುಗನಿಗೆ ಭೂಮಿ ಕೊಡುವವರು ಯಾರೂ ಇರಲಿಲ್ಲ. ದಿನಂಪ್ರತಿ ದೋಣಿ ತುಂಬ ಕುಟುಂಬಗಳು ಹಡ್ಸನ್ ನದಿಯಲ್ಲಿ ಪ್ರವಾಹ ವಿರುದ್ಧ ಮುಖವಾಗಿ ಸಾಗಿದವು. "ಹೋಗಿ ಬರುತ್ತೇವೆ" ಎನ್ನುವವರಿಗೆ ಸುಖ ಪ್ರಯಾಣ ಕೋರುವುದೇ ಪೀಟರನ ನಿತ್ಯದ ಕೆಲಸವಾಯಿತು. ಆಗಸ್ಟ್ ಕಳೆದು ಸೆಪ್ಟೆಂಬರ್ ಬಂತು. ಛಳಿ ತಡೆಯಲಾರದೆ ಪೀಟರ್, ಖಾಲಿ ಗುಡಿಸಲೊಂದನ್ನು ಕಿತ್ತು ಸೌದೆ ಕೂಡಿಸಿಕೊಂಡ.

ಅಕ್ಟೋಬರ್ ಮಧ್ಯದ ಹೊತ್ತಿಗೆ ಪರಿತ್ಯಕ್ತ ಆ ಮುರುಕು ಗುಡಿಸಲುಗಳಲ್ಲಿ, ಇನ್ನೂ ಉಳಿದಿದ್ದ ಇಬ್ಬರು ಮೂವರು, ಕೆಲವು ಮಂದಿ ವಿಧವೆಯರಿಗೂ ಅನಾಥ ಮಕ್ಕಳಿಗೂ ಆಶ್ರಯದಾತರಾಗಿದ್ದರು.

ಎಂದಿನಂತೆ ಪೀಟರ್ ಇತರ ಮಕ್ಕಳೊಂದಿಗೆ ಪ್ರಧಾನ ಕಟ್ಟಡಕ್ಕೆ

ಹೋದ. ಏಕಾಂಗಿಯಾಗಿ ಕುಳಿತ ಗವರ್ನರನ ಏಜೆಂಟು ಕಾಗದಗಳ ಕಟ್ಟು ಕಟ್ಟುತ್ತಿದ್ದ. ಪೀಟರ್ ನಿಂತು ಅವನನ್ನೆ ಎವೆಯಿಕ್ಕದೆ ನೋಡಿದ.

ಜಾರ್ಜ್ ಕ್ಲಾರ್ಕ್ ಮಕ್ಕಳೆಡೆ ಒಮ್ಮೆ ನೋಡಿ, ಮೇಜಿನ ಮೇಲೆ ಕೈಬೆರಳುಗಳನ್ನು ತಾಡಿಸಿದ.

"ಸರಿ ಇನ್ನು ನಿಮ್ಮನ್ನೇನು ಮಾಡೋಣ?" ಎಂದ. ಎದ್ದು ನಿಂತು ಕಟ್ಟುಗಳನ್ನು ಕೊಂಕಳಿಗೆ ಇರುಕಿ, ಪೀಟರ್‌ನ ಕಡೆ ನೋಡಿದ.

"ನಿನ್ನನ್ನು ಯಾವುದಾದರೂ ಕೆಲಸ ಕಲಿಯೋದಕ್ಕೆ ಸೇರಿಸಲೇನು?"

"ಹಾಗೇ ಮಾಡಿ" ಪೀಟರ್ ಗಟ್ಟಿಯಾಗಿ ಉತ್ತರವಿತ್ತ. "ಆದರೆ ನನಗೆ ಫೀಜ್ ಯಾರು ಕೊಡುತ್ತಾರೆ?" ಸ್ವಲ್ಪ ಹೆದರಿಕೆ ಯಿಂದಲೇ ಮಾತು ಸೇರಿಸಿದ.

ಉಪಕಾರ್ಯದರ್ಶಿಯ ಮುಖ ಗಂಟಿಕ್ಕಿತು. "ಅದೋ ನಿನ್ನ ಸಮಸ್ಯೆ? ಗವರ್ನರ್ ಹತ್ತಿರ ಮಾತನಾಡುತ್ತೇನೆ. ಸ್ತ್ರೀಯರು ಸೇವಕರಾಗಬೇಕು. ಇಲ್ಲವೇ, ಹೋಟೆಲುಗಳಲ್ಲೋ ಅಂಗಡಿಗಳಲ್ಲೋ ನೌಕರಿಗೆ ಸೇರಬೇಕು. ಆದರೆ ಮಕ್ಕಳು? ಆಗಲಿ ನೋಡೋಣ" ತನಗಾಗಿ ಕಾಯುತ್ತಿದ್ದ ದೋಣಿಯೆಡೆಗೆ ದಪದಪನೆ ಹೆಜ್ಜೆ ಹಾಕಿದ.

ಒಂದು ವಾರದ ನಂತರ, ಮಂಜು ಕವಿದಿದ್ದ ಒಂದು ಪ್ರಾತಃಕಾಲ, ಸೌದೆ ಕಡಿಯುತ್ತಿದ್ದ ಪೀಟರ್, ಗುಡಿಸಲುಗಳ ಮಧ್ಯೆ ದಿಟ್ಟ ಹೆಜ್ಜೆ ಹಾಕುತ್ತಾ ಬರುತ್ತಿದ್ದವನೊಬ್ಬನನ್ನು ಕಂಡ. ಸೊಗಸಾದ, ಬೆಚ್ಚನೆಯ ಕೋಟು ಧರಿಸಿದ್ದ ಆತ, ಮುದ್ರಣ ಕಾರನ ಮಗನೆಂಬುದು ನೋಡುತ್ತಿದ್ದಂತೆ ಮನದಟ್ಟಾಯಿತು. ಹಿಂದೆ ಆತನ ಹೆಸರನ್ನೂ ಕೇಳಿ ತಿಳಿದುಕೊಂಡಿದ್ದ.

"ನಮಸ್ಕಾರ ಬ್ರಾಡ್‌ಫರ್ಡ್!" ಎಂದ ಪೀಟರ್.

"ಓ, ನನ್ನ ಹೆಸರೂ ನಿನಗೆ ಗೊತ್ತು! ಈ ದ್ವೀಪದಲ್ಲಿರೋ ಹುಡುಗರ ಪೈಕಿ ಹೆಚ್ಚು ಗಟ್ಟಿಮುಟ್ಟಾಗಿರೋನ್ನ ತೋರಿಸು. ನಿನಗೆ ಒಂದು ಪೆನ್ನಿ ಬಹುಮಾನ ಕೊಡುತ್ತೇನೆ." ಆ ತರುಣ ಮುಗುಳು ನಗೆ

ಸೂಸುತ್ತ ನುಡಿದ.

"ಪೆನ್ನಿ ನಿಮ್ಹತ್ತಿರಲೇ ಇರ್ಲಿ ಸಾರ್ – ನಿಮಗೆ ಬೇಕಾದಂಥ ಬಾಲಕ ನಿಮ್ಮ ಮುಂದೇ ಇದ್ದಾನೆ ಸಾರ್."

ಹೊರ ತೆಗೆದಿದ್ದ ಪೆನ್ನಿಯನ್ನು ಬ್ರಾಡ್‌ಫರ್ಡ್ ಸರಕ್ಕನೆ ಜೇಬಿಗೆ ಹಾಕಿ ಅದರ ಮುಚ್ಚಳಕ್ಕೆ ಗುಂಡಿ ಹಾಕಿದುದನ್ನು ಪೀಟರ್ ಗಮನಿಸಿದ. "ನಿಮ್ಮಮ್ಮ ಎಲ್ಲಿ ?" ಸ್ವಲ್ಪವೂ ತಡಮಾಡದೆ ಆ ತರುಣ ಪೀಟರನನ್ನು ಪ್ರಶ್ನಿಸಿದ.

ಆ ಗಣ್ಯ ತರುಣನನ್ನು ತಮ್ಮ ಮುರುಕು ಗುಡಿಸಿಲಿನೊಳಕ್ಕೆ ಕರೆದುಕೊಂಡು ಹೋಗುವುದು ಉಚಿತವಲ್ಲವೆಂದು ಭಾವಿಸಿದ ಪೀಟರ್ ತನ್ನ ತಾಯಿಯನ್ನೇ ಹೊರಕ್ಕೆ ಕರೆತಂದ.

ಆಗಲೂ ಆ ತರುಣ ಆಂಡ್ರ್ಯೂಬ್ರಾಡ್‌ಫರ್ಡ್ ಸ್ವಲ್ಪವೂ ತಡಮಾಡದೆ ನೇರವಾಗಿ ಹೇಳಬೇಕಾದುದನ್ನು ಹೇಳಿದ: "ರಾಜಮನ್ನಿತ ಮುದ್ರಕರಾದ ನಮ್ಮ ತಂದೆಯು ಬಳಿ ನಿಮ್ಮ ಮಗ ಅಪ್ರೆಂಟಿಸ್ ಆಗಿ ಸೇರುವುದು ನಿಮಗೆ ಒಪ್ಪಿಗೆಯೇ ?"

"ರಾಜ ಮನ್ನಿತ ಮುದ್ರಣಕಾರ!" ತನ್ನ ತಾಯಿ ಶಾಲಿನ ಮೇಲೆ ಬೆರಳಾಡಿಸಿ, ವಿಸ್ಮಯ ಪೂರ್ಣ ಧ್ವನಿಯಲ್ಲಿ ನುಡಿದಳು. ತನ್ನ ಮಗನನ್ನು ರಾಜಕುಮಾರನನ್ನಾಗಿ ಮಾಡಲು ಅನುಮತಿ ಕೇಳುತ್ತಿರುವಂತೆ ಆಕೆಗೆ ಭಾಸವಾಯಿತು. ಪೀಟರನ ಅಭಿಪ್ರಾಯ ಅರಿಯಲು ಆಕೆ ಅವನ ಕಡೆ ತಿರುಗಿದಾಗ, ಪೀಟರ್ 'ಹೂ' ಎಂದು ತಲೆಹಾಕುವ ಭರದಲ್ಲಿ, ತಲೆಕೂದಲು ಅವನ ಕಣ್ಣುಗಳನ್ನು ಮುಚ್ಚಿತು.

"ಹೂಂ....ಆಗಲಿ....ಆಗಲಿ ಆಗಲಿ–ಆದರೆ" ತಾಯಿ ತಡ ವರಿಸಿದಳು.

"ಹಾಗಾದರೆ, ಇಬ್ಬರೂ ನನ್ನೊಡನೆ ಬಂದು ಕರಾರುಪತ್ರಕ್ಕೆ ಸಹಿ ಹಾಕಿ" ಎನ್ನುತ್ತ ಬ್ರಾಡ್‌ಫರ್ಡ್ ಹೆಜ್ಜೆ ಹಾಕಿದ.

ಪೀಟರನ ಬಾಯಲ್ಲಿ ಮಾತೇ ಹೊರಡಲಿಲ್ಲ. ಮಹತ್ಸಾಧನೆಯ ಉದ್ರೇಕದಿಂದ ಪುಳಕಿತನಾದ ಅವನು, ಬಿಚ್ಚಿದ ಬಾಯಿ ಮುಚ್ಚದೆ,

ತನ್ನ ಹೆಣಿಗೆಯ ಉಣ್ಣೆ ಟೋಪಿಯನ್ನು ಹಿಂದಕ್ಕೆ ಮುಂದಕ್ಕೆ ಸರಿಸುತ್ತ ಒಂದು ಕೈಯಿಂದ ಇನ್ನೊಂದು ಕೈಗೆ ಸಾಗಿಸುತ್ತ ಹೆಜ್ಜೆ ಹಾಕಿದ. ಕಟ್ಟಕಡೆಗೆ, "ಹಾಗಾದರೆ ನಾನು ಫೀಜೇನೂ ಕೊಡಬೇಕಾಗಿಲ್ಲ ತಾನೆ ?" ಎಂದು ಕೇಳಿಯೇಬಿಟ್ಟ.

"ಪ್ಲೆಚ್ !" ಎಂದ ಬ್ರಾಡ್‌ಫರ್ಡ್. ಮಾತು ಮುಂದುವರಿಸಿ "ಓ, ಅದೋ-ಪ್ಯಾಲಟೈನಿನ ಅನಾಥ ಹುಡುಗರಿಗೆ ಕೆಲಸ ಕಲಿಸಲು ಸಹಾಯ ಮಾಡುವುದಗತ್ಯವೆಂದು, ಗವರ್ನರ್ ಹಂಟರ್ ಈಗಾಗಲೆ ಸಲಹಾ ಮಂಡಳವನ್ನೂ ಒಪ್ಪಿಸಿದ್ದಾರೆ; ಸರಕಾರದವರೇ ಫೀಜು ಕೊಡುತ್ತಾರೆ. ಬಾ" ಎಂದು ವಿವರಿಸಿದ.

ಸರಕಾರ? ಹಾಗೆಂದರೇನು? ಪೀಟರ್ ಅರ್ಥವಾಗದೆ ಮೈ ಆಡಿಸಿದ. ಸರಕಾರಕ್ಕೊಂದು ದೊಡ್ಡ ನಮಸ್ಕಾರ! ಎಂದು ಮನಸ್ಸಿನಲ್ಲೇ ಅನೇಕಾವರ್ತಿ ವಂದಿಸಿದ. ಸದಾಕಾಲದಲ್ಲೂ ಇದೇ ರೀತಿಯ ಸಹಾಯಕ ಸರಕಾರವೇ ಇರಲಿ ಎಂದು ಬಯಸಿದ.

———

# ಅಧ್ಯಾಯ ನಾಲ್ಕು

## ವೃತ್ತಿ ವಿದ್ಯಾರ್ಥಿ

ಬಿಡುವಿಲ್ಲದ, ನಾತ ತುಂಬಿದ ಮುದ್ರಣ ಕಛೇರಿಯಲ್ಲಿ ಅಡಗಿರಬಹುದಾದ ಅಪಾಯಗಳೇನೆಂಬುದನ್ನು ಅರಿತುಕೊಳ್ಳುವ ಮುನ್ನ, ಅದನ್ನು ಪ್ರೀತಿಸತೊಡಗಿದ ಪೀಟರ್ ಜೆಂಗರ್. ಬೆಳಗಿನ ಮಧ್ಯದಲ್ಲೇ ಮಾಲಿಕನ ಮುಖ ಗಂಟಿಕ್ಕಿರುತ್ತಿತ್ತು ಅಥವಾ ಆಯಾಸದಿಂದ ಬಳಲಿರುತ್ತಿತ್ತು. ಸುಸ್ವಭಾವದ ಹೊಸ ಅಪ್ರೆಂಟಿಸ್ ಪೀಟರ್, ಅದಕ್ಕೆಲ್ಲ ಅಷ್ಟೊಂದು ಗಮನ ಕೊಡುತ್ತಿರಲಿಲ್ಲ. ಆಶ್ಚರ್ಯ ತುಂಬಿದ ಹೊಸ ಉದ್ಯಮದಲ್ಲಿ, ತಾನರಿಯಬೇಕಾದ ಸಂಗತಿಗಳೇ ಯಥೇಚ್ಛವಾಗಿರುವಂತೆ ಅವನಿಗೆ ಕಂಡಿತು.

ಬ್ರಾಡ್‌ಫರ್ಡನ ಮನೆ ಹಳೆಯದು; ಆ ನಗರಕ್ಕೆ ನ್ಯೂ ಆಮ್ಸ್ಟರ್ಡಾಂ ಎಂಬ ಹೆಸರಿದ್ದ ಕಾಲದಲ್ಲಿ ಕಟ್ಟಿದ ಡಚ್ ಮಾದರಿಯದು. ಬಂದರು ಕಟ್ಟೆಯ ಮೇಲಿನ ಹಳೆ ಮಾರ್ಕೆಟ್ಟೂ, ಮನೆಗಳಿಂದ ಮೇಲೆದ್ದ ಹಡಗುಗಳ ಧ್ವಜಸ್ತಂಭಗಳೂ ಬಾಗಿಲ ಬಳಿಯಿಂದಲೇ ಕಾಣುತ್ತಿದ್ದವು; ಉಪ್ಪು ಮಿಶ್ರಿತ ಗಾಳಿಯು, ಟಾರ್ ಬಳಿದ ಹಗ್ಗಗಳ ವಾಸನೆ ಮೂಗಿಗೆ ಅಡರುತ್ತಿತ್ತು.

ತೂಗಾಡುವ ಬೈಬಲ್ ಬೋರ್ಡಿದ್ದ ಹೊರಬಾಗಿಲ ಮೂಲಕ ಪೀಟರ್ ಕೆಲಸದ ಕೊಠಡಿಗೆ ಕಾಲಿಟ್ಟ. ಬ್ರಾಡ್‌ಫರ್ಡ್ ಮತ್ತು ಕೆಲಸ ಕಲಿತ ಅವನ ನೌಕರ ನಡೆಸುತ್ತಿದ್ದ ಎರಡು ಮುದ್ರಣ ಯಂತ್ರಗಳು ಅಲ್ಲಿದ್ದವು. ಭಾರಿಯಾದ ಮರದ ತಿರುಪುಗಳಿಂದ ಲಭಿಸುತ್ತಿದ್ದ ಒತ್ತಡ ಅಪಾರ. ನೋಡುತ್ತಿದ್ದಂತೆ ಅವುಗಳ ಶಕ್ತಿಯ ಅರಿವು ಉಂಟಾಗುತ್ತಿತ್ತು. ಹೆಚ್ಚಿನ ಬಲಕ್ಕಾಗಿ, ಮೇಲ್ಛಾವಣಿಯಲ್ಲಿದ್ದ ಬಾಗಿದ ತೊಲೆಗಳಿಗೆ ಯಂತ್ರಗಳ ಮೇಲುಭಾಗವನ್ನು

ಪಟ್ಟಿಯಿಂದ ಕಟ್ಟಿದ್ದರು. ಕೆಲಸ ಮಾಡುತ್ತಿದ್ದವರ ತಲೆಯ ಮೇಲಿನ ತಂತಿಗಳ ಮೇಲೆ ಮುದ್ರಿತ ಹಾಳೆಗಳನ್ನು, ಅಗಸರು ಬಟ್ಟೆಗಳನ್ನು ಹರವುವಂತೆ ಒಣಹಾಕಿದ್ದರು. ಆ ಎರಡು ಯಂತ್ರಗಳಿಂದ ಮುದ್ರಿತ ಹಾಳೆಗಳು ಹೊರ ಬಂದಂತೆ, ಅವುಗಳಿಗೆ ಸ್ಥಳ ಮಾಡಿಕೊಡಲು ತಂತಿ ಮೇಲಿನ ಹಾಳೆಗಳನ್ನು ಎಳೆದು ಜೋಡಿಸುವುದು, ಪೀಟರನ ಆರಂಭದ ಕೆಲಸಗಳಲ್ಲೊಂದು.

ಆ ಕೊಠಡಿಯಲ್ಲಿ ಎಲ್ಲಿನೋಡಿದರೂ ಕಾಗದದ ರಾಶಿ ; ಬೀರುಗಳಲ್ಲಿ, ಮೇಜುಗಳ ಮೇಲೆ, ನೆಲದ ಮೇಲೆ, ಗೋಡೆಖಾನೆಗಳಲ್ಲಿ. ಮುದ್ರಣ ಶಾಲೆಯ ಜೊತೆಗೆ ಅದು ಪುಸ್ತಕದ ಅಂಗಡಿಯೂ ಆಗಿದ್ದುದರಿಂದ ಎರಡು ಬೀರುಗಳ ತುಂಬ ಇಂಗ್ಲೆಂಡ್, ಫ್ರಾನ್ಸ್ ಮತ್ತು ನೆದರ್ಲೆಂಡ್‌ಗಳಿಂದ ಹಡಗುಗಳಲ್ಲಿ ಬಂದಿದ್ದ ಪುಸ್ತಕಗಳಿದ್ದವು. ಅವುಗಳನ್ನು ಪೀಟರ್ ಬೆರಗಾಗಿ ನೋಡುತ್ತಿದ್ದ. ಕೆಲವು ಪುಸ್ತಕಗಳನ್ನು ಮೇಲಂತಸ್ತಿನಿಂದ ಆಯ್ದುಕೊಂಡು ನೋಡಿದ. ಅವುಗಳ ಪ್ರಕಾಶಕ ತನ್ನ ಮಾಲಿಕನೇ ಎಂದು ಗೊತ್ತಾದಾಗ ಅವನ ಸಂತೋಷ ಇಮ್ಮಡಿಯಾಯಿತು. ತನ್ನ ಪ್ರಕಟನೆಗಳಿಂದಲೇ ತುಂಬಿದ ದೊಡ್ಡ ಬೀರುವನ್ನು ಆಂಡ್ರ್ಯೂ ತೋರಿಸಿದಾಗ ಪೀಟರನ ಎದೆ ಹೆಮ್ಮೆಯಿಂದ ಉಬ್ಬಿತು.

ಮರುಕ್ಷಣದಲ್ಲಿ ಹಿಮ್ಮುಖನಾಗಿ ಒಂದು ಹೆಜ್ಜೆ ಇಟ್ಟಾಗ ಪೀಟರ್ ಅಮುದ್ರಿತ ಕಾಗದದ ಕಟ್ಟುಗಳನ್ನು ಎಡವಿ ಕಮಾನಿನ ಬಾಗಿಲ ಮೂಲಕ ಅಕ್ಷರ ಜೋಡಿಸುವ ಕೊಠಡಿಯೊಳಕ್ಕೆ ಉರುಳಿದ. ತಪ್ಪಿಗೆ ಶಿಕ್ಷೆ ಮಾಡಲೆಂದು ಆಂಡ್ರ್ಯೂ ಕೋಲೊಂದನ್ನೆತ್ತಿಕೊಂಡಾಗ, ಪೀಟರ್ ಸಿಕ್ಕಾಪಟ್ಟೆ ಓಡಲೆತ್ನಿಸಿದ. ಅಕ್ಷರಖಾನೆಯ ಸ್ಟ್ಯಾಂಡಿಗೆ ಅವನ ಭುಜ ಬಡಿದು, ಅಕ್ಷರ ಜೋಡಿಸಿಟ್ಟಿದ್ದ ಟ್ರೇಯೊಂದು ತಲಕೆಳಕಾಯಿತು. ಅಕ್ಷರದ ಮೊಳೆಗಳು ಅವನ ತಲೆಯಮೇಲೆ ಸುರಿದವು. ಮೂರುಗಂಟೆಗಳ ಕಾಲ ಈ ಅಕ್ಷರದ ರಾಶಿಯ ಮೊಳೆಗಳನ್ನೆಲ್ಲ ಸ್ವಸ್ಥಾನಗಳಿಗೆ ಸೇರಿಸುವಾಗ, ಮೊಳೆಗಳನ್ನು ಹೇಗೆ ಜೋಡಿಸುತ್ತಾರೆಂಬುದನ್ನು ಬಹು ಪ್ರಯಾಸದಿಂದ ಅರಿತ. ಬೇರೆ ಬೇರೆ ಟ್ರೇಗಳಲ್ಲಿ ಬೇರೆ ಬೇರೆ ಅಕ್ಷರಗಳು ತುಂಬಿದ್ದವು.

ಈ ಕೊಠಡಿಯಲ್ಲಿ ಬ್ರಾಡ್‌ಫರ್ಡ್, ರಕ್ತ ಪುಟತ್ವವಿಲ್ಲದ ತನ್ನ

೧೯ ವರ್ಷ ವಯಸ್ಸಿನ ಮಗನೊಡನೆ ದಿನವೆಲ್ಲ ದುಡಿಯುತ್ತಿದ್ದ. ಸಾಮಾನ್ಯವಾಗಿ ಸತಿ ಬ್ರಾಡ್‌ಫರ್ಡ್ ಮಹಡಿಯಲ್ಲಿ ಕುಳಿತು ಲೆಖ್ಖ ಬರೆಯುತ್ತಿದ್ದಳಾದರೂ, ಒಮ್ಮೊಮ್ಮೆ ಒಂದೆರಡು ಪುಟಗಳಷ್ಟು ಅಕ್ಷರ ಜೋಡಿಸಿ, ಕೈ ಮಸಿಮಾಡಿಕೊಳ್ಳುತ್ತಿದ್ದಳು.

ಕಾನೂನಿನ ರೀತ್ಯ ತಾನೂ ಈ ಕುಟುಂಬದೊಬ್ಬ ಸದಸ್ಯ ಎಂಬುದನ್ನು ಪೀಟರ್ ಕಂಡುಕೊಂಡ. ಅವರ ಜೊತೆಯೇ ಊಟದ ಮೇಜಿನ ಮುಂದೆ ಕುಳಿತು ಭೋಜನ ಮಾಡುತ್ತಿದ್ದ, ಅವರೊಡನೆಯೇ ಪ್ರಾರ್ಥನೆ ಮಾಡುತ್ತಿದ್ದ. ಬ್ರಾಡ್‌ಫರ್ಡ್ ದಂಪತಿಗಳು ತನ್ನ ತಂದೆ ತಾಯಿಗಳೇ ಎಂಬಂತೆ ಅವರ ಮಾತನ್ನು ಪಾಲಿಸುತ್ತಿದ್ದ. ಅವರ ವಿಷಯದಲ್ಲಿ ವಿಪರೀತ ಅಭಿಮಾನ ಬೆಳೆಯಿತು. ಅವರೂ ಇವನನ್ನು ವಾತ್ಸಲ್ಯದಿಂದ ನೋಡುತ್ತಿದ್ದರು. ಸತಿ ಬ್ರಾಡ್‌ಫರ್ಡ್ ರಾತ್ರಿ ಹೊತ್ತು ಅವನಿಗೆ ರಗ್ ಹೊದಿಸಿ, ಕೆನ್ನೆಗೆ ಮುದ್ದಿಟ್ಟು, ಮನೆಯವನೇ ಎಂಬ ಭಾವನೆ ಬೆಳೆಯಲು ಕಾರಣಳಾದಳು. ಅವನಿಗೆ ಬಹು ಬೇಸರದ ಕೆಲಸವೆಂದರೆ ಛಳಿ ಕಾಯಿಸುವ ಒಲೆಯ ಮುಂದೆ ಇದ್ದ ಮರದ ತೊಟ್ಟಿಗಳಲ್ಲಿ ಸಂಜೆ ಹೊತ್ತು ತಟ್ಟೆ ಬಟ್ಟಲುಗಳನ್ನು ತೊಳೆಯುವುದು. ಒಂದು ರಾತ್ರೆ ಈ ತೊಳೆಯುವ ಕೆಲಸ ಬಹು ಹೊತ್ತು ಹಿಡಿಯಿತು. ಬಿಳಿ – ನೀಲಿ ಬಣ್ಣಗಳ ಪಟ್ಟಾಪಟ್ಟೆ ಷರಾಯಿ, ಗುಂಡಿ ಹಾಕದ ಕ್ಯಾನ್ವಾಸ್ ಜಾಕೆಟ್ ಧರಿಸಿದ್ದ ಅವನು, ಕುಕ್ಕುರುಗಾಲಿನಲ್ಲಿ ಕುಳಿತು ಕೆಲಸ ಮಾಡುತ್ತಲೇ, ಸತಿ ಬ್ರಾಡ್‌ಫರ್ಡಳೊಂದಿಗೆ ಹರಟೆ ಕೊಚ್ಚುತ್ತಿದ್ದ. ಆಕೆ ಕುರ್ಚಿಯಲ್ಲಿ ಬಿಗಿಯಾಗಿ ಕುಳಿತು, ಹಿಂಬದಿಯಲ್ಲಿ ತೂಗು ಬಿಟ್ಟಿದ್ದ ಮೇಣದ ಬತ್ತಿಯ ಬೆಳಕಿನಲ್ಲಿ ಹೊಲಿಗೆ ಹಾಕುತ್ತಿದ್ದಳು. ಕಂದು ಕೂದಲ ಬಿಗಿ ಗಂಟು, ಚಿವುಟಿದಂತಿದ್ದ ನೇರ ಬಾಯಿ. ಆಕೆ ಸದಾ ಹಸನ್ಮುಖಿ. ತನ್ನ ತಾಯಿಗಿಂತ ಹೆಚ್ಚು ವಯಸ್ಸಾದವಳಂತೆ ತೋರಿದಳು.

ಕೆಲಸಕ್ಕಿಂತಲೂ ಮಾತಿನ ಮೇಲೆ ಹೆಚ್ಚು ಗಮನವಿದ್ದ ಪೀಟರ್, "ಯಜಮಾನರ ವಾಸ ಮೊದಲಿನಿಂದಲೂ ನ್ಯೂಯಾರ್ಕೇ?" ಎಂದು ಪ್ರಶ್ನಿಸಿದ.

"ಅಲ್ಲ" ಎಂದುತ್ತರವಿತ್ತಳು ಮುದ್ರಕನ ಪತ್ನಿ. ಹೆಜ್ಜೆಯ ವರೆಗೂ ಬಂದಿದ್ದ ಬೂದು ಬಣ್ಣದ ಲಂಗವನ್ನು ಸರಿಪಡಿಸಿಕೊಳ್ಳುತ್ತ, "ಬ್ರಾಡ್‌ಫರ್ಡ್ ಹುಟ್ಟಿದ್ದು ಇಂಗ್ಲೆಂಡಿನ ಬಡ ಕುಟುಂಬದಲ್ಲಿ. ಅವರೆಲ್ಲ ಇಂಗ್ಲೆಂಡ್ ಚರ್ಚಿಗೆ ಸೇರಿದವರು. ಈಗ ನೀನು ಬ್ರಾಡ್‌ಫರ್ಡನ ಶಿಷ್ಯನಾಗಿರುವಂತೆ, ಬ್ರಾಡ್‌ಫರ್ಡ್ ಹುಡುಗನಾಗಿರುವಾಗಲೇ ಮುದ್ರಕನಾಗಿದ್ದ ನನ್ನ ತಂದೆಯ ಬಳಿ ಅಪ್ರೆಂಟಿಸ್ ಆಗಿ ಸೇರಿದ. ನಮ್ಮ ಕುಟುಂಬದವರು ಮಿತ್ರಕೂಟದ ಅರ್ಥಾತ್ ಕ್ವೇಕರ್ಸ್ ಸಂಘದ ಸದಸ್ಯರಾಗಿದ್ದರು. ಬ್ರಾಡ್‌ಫರ್ಡ್ ಅದರ ಸಭೆಗಳಿಗೆ ಬರುತ್ತಿದ್ದ. ಪ್ರಾಯ ಬಂದಾಗ ತನ್ನ ಕೈಹಿಡಿಯುವಂತೆ ನನ್ನನ್ನು ಕೇಳಿದ. ಜೀವನೋಪಾಯಕ್ಕಾಗಿ ನಾವು ಹಡಗು ಹತ್ತಿದೆವು. ಎಂಟು ವರ್ಷಗಳ ಕಾಲ ಫಿಲಿಡೆಲ್ಫಿಯಾದಲ್ಲಿ ಮುದ್ರಕನಾಗಿದ್ದ. ಅನಂತರ...." ಎಂದು ನುಡಿದು, ಗಂಟಲು ಸರಿಪಡಿಸಿಕೊಂಡು ಹೀಗೆಂದು ಮುಂದು ವರಿಸಿದಳು: "ಅಲ್ಲಿ ಸ್ವಲ್ಪ ಕಷ್ಟ ಅನುಭವಿಸಿದ ಮೇಲೆ ೧೬೯೩ರಲ್ಲಿ ನ್ಯೂಯಾರ್ಕಿಗೆ ಬಂದೆವು. ಅಂದರೆ ಈ ಸಂಗತಿ ಸಂಭವಿಸಿದ್ದು ನೀನು ಹುಟ್ಟುವುದಕ್ಕೂ ಮೂರು ವರ್ಷ ಮುಂಚೆ, ಅನ್ನು"

"ಏನು ಕಷ್ಟವಾಯಿತು?" ಪೀಟರ್ ಬಾಲ್ಯಸಹಜವಾದ ಪ್ರಶ್ನೆ ಹಾಕಿದ.

ಆಕೆ ಹೊಲಿಯುವುದನ್ನು ನಿಲ್ಲಿಸಿ, ಅವನ ಕಡೆ ನೋಡಿದಳು. "ಆ ತಟ್ಟೆಗಳನ್ನು ಇನ್ನೂ ತೊಳೆದಿಲ್ಲವೆ? ಶುದ್ಧ ಸೋಮಾರಿ! ನೀನೆಂದೂ ಹಣವಂತನಾಗಲಾರೆ. ಅದೊಂದು ಮಾತು ಮಾತ್ರ ಖಚಿತ"

ವಿಧಿಯಿಲ್ಲದೆ ಆಗ ಬಾಯಿ ಮುಚ್ಚಿಕೊಂಡಿರಬೇಕಾಗಿ ಬಂದುದ ರಿಂದ ಹೆಚ್ಚಿನ ಪ್ರಶ್ನೆಗಳನ್ನು ಇನ್ನೊಮ್ಮೆ ಕೇಳಬಹುದೆಂದು ಪೀಟರ್ ಸದ್ಯಕ್ಕೆ ಸುಮ್ಮನಾದ. ತನ್ನ ಯಜಮಾನನಿಗೆ ಬಂದಿದ್ದ ಕಷ್ಟ ವೇನೆಂಬುದನ್ನು ಅರಿತುಕೊಳ್ಳಬೇಕೆನ್ನುವ ಕುತೂಹಲ ಅವನಲ್ಲಿ ಕೆರಳಿತ್ತು. ಸತಿ ಬ್ರಾಡ್‌ಫರ್ಡ್ ಈ ಅಂಶವನ್ನು ವಿಶೇಷ ರಹಸ್ಯವಾಗಿ ಕಾಪಾಡುತ್ತಿರುವಂತೆ ಭಾಸವಾಯಿತು. ಬಹು ಪ್ರಾಮುಖ್ಯವಾದ

ವಿಷಯ ಇದಾಗಿರಬೇಕು ಎಂದುಕೊಂಡ ಪೀಟರ್. ಮುದ್ರಣ ಕಾರನಿಗೆ ಸಂಬಂಧಿಸಿದ ವಿಷಯ; ಅಂದಮೇಲೆ ತಾನೂ ಮುದ್ರಣ ಕಾರನಾದಾಗ ಅದೇನೆಂಬುದನ್ನು ಅರಿತಿರಬೇಕಾದುದು ಅವಶ್ಯ.

ಸ್ವಲ್ಪ ಹೊತ್ತು ಬಿಟ್ಟು "ಯಜಮಾನರು ಕ್ವೇಕರ್ಸ್ ಪಂಗಡಕ್ಕೆ ಸೇರಿದವರೆಂಬುದು ನನಗೆ ತಿಳಿದೇ ಇರಲಿಲ್ಲ" ಎಂದು ಮಾತು ಬೆಳೆಸ ಲೆಳಸಿದ.

"ಈಗಲ್ಲ" ಸ್ವಲ್ಪ ಸಿಡುಕಿನಿಂದಲೇ ಆಕೆ ನುಡಿದಳು. "ನ್ಯೂಯಾರ್ಕಿನಲ್ಲಿ ಟ್ರನಿಟಿ ಚರ್ಚಿಗೆ ಹೋಗುವುದು ಅವರಿಗೆ ಸಮಾಧಾನವೆನಿಸಿದೆ. ಈ ಚರ್ಚೂ ಇಂಗ್ಲೆಂಡ್ ಚರ್ಚಿಗೇ ಸೇರಿದುದು." ಸ್ವಲ್ಪ ಸಮಾಧಾನದಿಂದ ಮಾತು ಮುಗಿಸುತ್ತ "ಈಚಿನ ಏಳು ವರ್ಷ ಗಳಿಂದ ಚರ್ಚಿನ ಆಡಳಿತ ಮಂಡಳಿಯಲ್ಲಿದ್ದಾರೆ. ಅದೊಂದು ಗೌರವದ ಸ್ಥಾನ. ಅದಿರಲಿ, ಊಟದ ತಟ್ಟೆಗಳನ್ನು ನೀನು ತೊಳೆದು ಮುಗಿಸುವುದೇ ಇಲ್ಲವೇನು?"

ಹುಲ್ಲುಗಾವಲಿಗೆ ಹೊಡೆದ ಹೋರಿಯಂತೆ, ಭಾನುವಾರ ಮಧ್ಯಾಹ್ನ ಪೀಟರ್ ಹೊರಕ್ಕೋಡಿದ. ತನ್ನ ತಮ್ಮ ಜಾನ್ ಅಪ್ರೆಂಟಿಸ್ ಆಗಿದ್ದ ಬಡಗಿ ಶಾಲೆಗೆ ಹೋಗಿ ಅವನನ್ನು ಜೊತೆಗೆ ಕರೆದುಕೊಂಡ. ಅವರಿಬ್ಬರೂ ಮಣ್ಣಿನ ಬೀದಿಗಳ ಮೂಲಕ ಓಡಿ, ಬ್ರಾಡ್ ಸ್ಟ್ರೀಟಿನ ಅಲಂಕೃತ ಗೃಹವೊಂದರ ಹಿಂಬಾಗಿಲನ್ನು ಮೆಲ್ಲನೆ ತಟ್ಟಿದರು. ಅಲ್ಲಿ ಅವರ ತಾಯಿ ಮತ್ತು ಸೋದರಿ ಸ್ವಾಗತಿಸಿದರು. ದೊಡ್ಡ ಶ್ರೀಮಂತ ಕುಟುಂಬವೊಂದರಲ್ಲಿ ಕರಾರು ಬಂಧಿತ ದಾದಿ ಯಾಗಿ ತಾಯಿ ಸೇರಿದ್ದಳು. ಹೊಲಿಗೆ ಆಕೆಯ ಪ್ರಧಾನ ಕೆಲಸ. ಮಕ್ಕಳ ಬಟ್ಟೆಗಳನ್ನೂ, ಪರಟುಗಳನ್ನೂ ಆಕೆ ಸಿದ್ಧಪಡಿಸಬೇಕು. ಸೋದರಿ ಕ್ಯಾಥಿ ಕೂಡ ಆ ಕೆಲಸವನ್ನು ಬೇಗನೆ ಕಲಿಯಬೇಕಿತ್ತು.

ಅವರೆಲ್ಲ ನಗರ ದಾಟಿ ಕಾಡಿನ ಕಡೆಗೆ ಕಾಲಿಟ್ಟರು. ಜಾನ್ ಮರ ಗಳನ್ನು ಹತ್ತಿ ಇಳಿಯುತ್ತ, ಯುದ್ಧದ ಕೂಗಳನ್ನು ಅಬ್ಬರಿಸುತ್ತ, 'ಇಂಡಿಯನ್'ನಂತೆ ಆಡತೊಡಗಿದ. ಚಿಕ್ಕ ಗಿಡಗಳನ್ನು ಕಡಿದು ಸಣ್ಣ ಗುಡಿಸಲೊಂದನ್ನು ಕಟ್ಟಲೆಳಸಿದ ಪೀಟರ್, ಎಲ್ಲರನ್ನು

ತಮಾಷೆಯ ಮಾತುಗಳಿಂದ ನಗಿಸುತ್ತ ಹೆಚ್ಚು ಕಾಲ ಕಳೆದ. ವಿನೋದ ಗೀತವೊಂದರ ರಚನೆಯಲ್ಲಿ ತೊಡಗಿದ ಅವನು ಗುಡಿಸಲು ಕಟ್ಟಿ ಮುಗಿಸಲೇ ಇಲ್ಲ.

ಕಾನೂನಿನ ರೀತ್ಯ, ಮಾಲಿಕರೆಲ್ಲರೂ ತಮ್ಮ ಅಪ್ರೆಂಟಿಸ್‌ಗಳಿಗೆ ಓದು, ಬರೆಹ, ಸ್ವಲ್ಪ ಲೆಖ್ಖ ಇಷ್ಟನ್ನಾದರೂ ಕಲಿಸಲೇಬೇಕಿತ್ತು. ಕೆಲವುಸಾರಿ ಬ್ರಾಡ್‌ಫರ್ಡೇ ಪೀಟರಿಗೆ ಪಾಠ ಹೇಳಿಕೊಟ್ಟ. ಅವನಿಗೆ ಬಿಡುವಿಲ್ಲದಾಗ, ಪೀಟರನ್ನು ಶಾಲೆಗೆ ಕಳಿಸುತ್ತಿದ್ದ. ಪೀಟರಿಗಾಗುತ್ತಿದ್ದ ಅನ್ನ, ಬಟ್ಟೆಗಳ ಖರ್ಚಿನ ವಿಷಯವನ್ನೇ ಬ್ರಾಡ್‌ಫರ್ಡ್ ಸದಾ ಎತ್ತಿ ಬಯ್ಯುತ್ತಿದ್ದ. ಒಂದು ನಿಮಿಷ ಪೀಟರ್ ಅಲಸಿಕೆ ತೋರಿಸಿದರೂ, ಅಷ್ಟೊಂದು ಪೆನ್ನಿಗಳ ಬೆಲೆಯ ಕೆಲಸ ಹಾಳಾಯಿತು ಎಂದು ಗದರಿಸುತ್ತಿದ್ದ. ಅದರಿಂದ ಪೀಟರ್ ಹಗಲು ಹೊತ್ತು ಶಾಲೆಗೆ ಹೋಗದೆ, ಸಂಜೆ ಹೊತ್ತು ಮಾತ್ರ ಹೋಗುತ್ತಿದ್ದ.

ಆಂಡ್ರ್ಯೂ ಕ್ಲಾರ್ಕನ ಉಚಿತ ಗ್ರಾಮದ ಶಾಲೆ ಎಂದರೆ ಅವನ ಮನೆಯ ಒಂದು ಕೊಠಡಿ ಮಾತ್ರ. ಮೇಣದ ಬತ್ತಿಯ ಬೆಳಕು, ಹೊಗೆ ತುಂಬಿದ ಆ ಕೊಠಡಿಯಲ್ಲಿ ಹುಡುಗರೂ, ನಾನಾ ವಯಸ್ಸಿನ ದೊಡ್ಡವರೂ ತುಂಬಿ ನಿದ್ರೆ ಅಡರಿದ ಕಣ್ಣುಗಳಿಂದ ತಮ್ಮ ಕೈಗಳಲ್ಲಿದ್ದ ಪುಸ್ತಕದ ಹಾಳೆಗಳ ಕಡೆ ನೋಡುತ್ತಿದ್ದರು. ಪೀಟರ್ ತನ್ನ ತಮ್ಮ ಜಾನ್ ಪಕ್ಕದಲ್ಲಿ ಕುಳಿತುಕೊಳ್ಳುತ್ತಿದ್ದ. ಅಧ್ಯಯನದಲ್ಲಿ ಹೆಚ್ಚಿನ ಆಸಕ್ತಿ ಅವನದು. ತನ್ನ ಯಜಮಾನನ ಮೆಚ್ಚಿಕೆಯನ್ನು ಸಂಪಾದಿಸಿ, ತಾನೂ ಒಬ್ಬ ಪ್ರಮುಖ ಮುದ್ರಕನಾಗಬೇಕೆಂಬುದು ಅವನ ಬಯಕೆ. ಆದರೆ ಹಾಡುವುದೂ ವಿನೋದ ಸಂಭಾಷಣೆಗಳೂ ಕೂಡ ಅವನಿಗೆ ಪ್ರಿಯ.

ಮುದ್ರಿತ ಇಂಗ್ಲಿಷ್ ಶಬ್ದಗಳ ಜ್ಞಾನ ಉಂಟಾದಂತೆ, ಅವನ ನಕಲಿಗೂ ಕಾಲು ಬಂತು. ಪಾಠದ ಪುಸ್ತಕದ ತುಂಬ ನಾಯಿ, ಬೆಕ್ಕು, ಕತ್ತೆ, ಕೋತಿಗಳನ್ನು ಕುರಿತ ಪದ್ಯಗಳಿದ್ದವು. ಅವೆಲ್ಲ ಅವನಿಗೆ ವಿನೋದ ಬರೆಹಗಳೆನಿಸಿದವು. ಸ್ವತಂತ್ರವಾಗಿ ತಮಾಷೆಯ ಪದ್ಯಗಳನ್ನು ರಚಿಸತೊಡಗಿದ. ಜಾನ್ ಅವುಗಳನ್ನು ಕೇಳಿ ತಡೆಯ

ಲಾರದೆ ನಕ್ಕು ಉಪಾಧ್ಯಾಯರಿಂದ ಪೆಟ್ಟು ತಿನ್ನುತ್ತಿದ್ದ.

ಮೂರು ತಿಂಗಳ ನಂತರ ಶಾಲೆ ಮುಚ್ಚಿತು. ಅಂದಿನ ಸಂಜೆ ಮನೆಯಲ್ಲಿ ಬ್ರಾಡ್‌ಫರ್ಡ್ ಎರಡು ಪುಸ್ತಕಗಳನ್ನು ಓದೆಂದು ಕೊಟ್ಟ. ಪೀಟರ್ ಅವುಗಳ ಹೆಸರುಗಳನ್ನು ಮೊದಲು ನೋಡಿದ. "ಎ ನ್ಯೂ ಪ್ರೈಮರ್ ಆಫ್ ಮೆಥಾಡಿಕಲ್ ಡೈರೆಕ್ಷನ್ ಟು ಅಟ್ಟೈನ್ ಟ್ರೂ ಸ್ಪೆಲ್ಲಿಂಗ್, ರೀಡಿಂಗ್ ಅಂಡ್ ರೈಟಿಂಗ್ ಆಫ್ ಇಂಗ್ಲಿಷ್", "ದಿ ಸೆಕ್ರೆಟರೀಸ್ ಗೈಡ್" – ಈ ಎರಡು ಪುಸ್ತಕಗಳೂ ಬ್ರಾಡ್‌ಫರ್ಡ್ ಮುದ್ರಿಸಿದವೇ.

ಛಳಿ ಕಾಯಿಸುವ ಒಳೆಯ ಬಳಿ ತೂಗು ಬಿಟ್ಟಿದ್ದ ಮೇಣದ ಬತ್ತಿಯ ಬೆಳಕಿಗೆ ಹತ್ತಿರವಾಗಿ ಕುರ್ಚಿಯೆಳೆದುಕೊಂಡು, ಪೀಟರ್ ಕೆಲವು ಪುಟಗಳನ್ನು ತಿರುವಿದ. "ಇದೇನಿವು ! ಕಾಗುಣಿತದ (ಸ್ಪೆಲ್ಲಿಂಗ್) ಪುಸ್ತಕಗಳು !" ನಿರಾಶೆಯಿಂದ ನುಡಿದ. ಮುದ್ರಕನ ಅಪ್ರೆಂಟಿಸ್ ಎಂದರೆ ದುಡಿತ, ಅಧ್ಯಯನ, – ಆಟಕ್ಕೆ ಬಿಡುವು ಮಾತ್ರ ಅಪರೂಪ ಎಂಬುದನ್ನು ಅರ್ಥಮಾಡಿಕೊಂಡ.

ಬ್ರಾಡ್‌ಫರ್ಡ್ ಪೀಟರನ ಮೇಲೆ ಬಾಗಿ ಸಿಡಿಗುಟ್ಟಿದ. "ನೋಡಿಲ್ಲಿ". ಆ ದಿನ ಬಂದಿದ್ದ ಕೆಲವು ವ್ಯವಹಾರದ ಪತ್ರಗಳನ್ನು ಪೀಟರಿಗೆ ತೋರಿಸಿದ. "ಈ ಜನದ ಕಾಗುಣಿತದ ಅಧ್ವಾನಕ್ಕೆ ಮಿತಿಯೇ ಇಲ್ಲ. ಒಬ್ಬ HAT ಎಂದು ಬರೆದರೆ, ಇನ್ನೊಬ್ಬ HATT ಎಂದು ಬರೆದಿದ್ದಾನೆ. ಒಬ್ಬನದು FIRST, ಇನ್ನೊಬ್ಬನದು FFIRST. TRIAL, TRYAL, TRYALE; FILE FYLE; MORSEL, MORCELL ಹೀಗೆ ಕಾಗುಣಿತ ಇಟ್ಟಾಡಿದೆ. ಇಂಗ್ಲಿಷ್ ಕಾಗುಣಿತದ ಈ ಅಧ್ವಾನವನ್ನು ಒಂದು ಹದಕ್ಕೆ, ವ್ಯವಸ್ಥೆಗೆ ತರಲು ನಾವು ಮುದ್ರಕರು ಪ್ರಯತ್ನಿಸುತ್ತಿದ್ದೇವೆ. ನೀನು ಮೊದಲು ತಪ್ಪಿಲ್ಲದೆ ಬರೆಯುವುದನ್ನೂ, ಮುದ್ರಿಸುವುದನ್ನೂ ಕಷ್ಟಪಟ್ಟು ಕಲಿಯಬೇಕು. ಅಂದರೆ, ನಿನ್ನ ಓದುಗರೂ ಕಲಿತಾರು. ಇದು ನಾವು ಮಾಡಬಹುದಾದ ದೊಡ್ಡ ಕಾರ್ಯ."

ಪೀಟರ್ ನಿಟ್ಟುಸಿರುಬಿಟ್ಟ. ಕಾಗುಣಿತ! ತಾನು ಮುದ್ರಕನಾದಾಗ – ಜಗತ್ತಿಗೆ ತಾನು ಸಲ್ಲಿಸಬಹುದಾದ ಇದಕ್ಕಿಂತ ಘನವಾದ ಕಾರ್ಯ ದೊರಕಲಾರದೆ?

---

# ಅಧ್ಯಾಯ ೫

## ಧೀರ ಪಾಲುಗಾರ

೧೭೧೦ ರಲ್ಲಿ ನ್ಯೂಯಾರ್ಕಿಗೆ ಬಂದ ಪೀಟರ್ ಜೆಂಗರ್ ಎಂಟು ವರ್ಷಗಳ ಕಾಲ ಅಪ್ರೆಂಟಿಸ್ ಆಗಿ ದುಡಿದ. ೨೧ ವರ್ಷ ವಯಸ್ಸು ತುಂಬಿದ ಮೇಲೆ, ಜೀವನೋಪಾಯಕ್ಕಾಗಿ ಮುದ್ರಣಾಲಯ ವೊಂದನ್ನು ಆರಂಭಿಸಲು ಮೇರಿಲ್ಯಾಂಡಿಗೆ ಹೋದ.

ಸರಿ ಸುಮಾರು ಮೂರು ವರ್ಷಗಳ ನಂತರ ವಿಧುರನಾಗಿ ವಾಪಸ್ಸಾದ. ಕೂಡಿಟ್ಟದ್ದ ಅಲ್ಪಗಳಿಕೆ ಕೂಡ ಕೈಬಿಟ್ಟಿತ್ತು. ಬ್ರಾಡ್‌ಫರ್ಡ್‌ನ ಮುದ್ರಣಾಲಯದ ಬಾಗಿಲಲ್ಲೆ ಕಾದು, ಕೆಲಸಕ್ಕಾಗಿ ಪ್ರಾರ್ಥಿಸಿದ.

ಮೊದಲು ಬ್ರಾಡ್‌ಫರ್ಡ್ ಕೈ ಕೊಡವಿ, ಇನ್ನೊಬ್ಬ ಕೆಲಸ ಗಾರನಿಗೆ ಸಂಬಳ ಕೊಡುವ ಚೈತನ್ಯ ತನಗಿಲ್ಲವೆಂದು ಕೊಸರಿದರೂ, ಜೆಂಗರಿನ ನೆರವು ನಿಜವಾಗಿಯೂ ಅಗತ್ಯವಿದ್ದುದರಿಂದ, ಅವನನ್ನು ಕೆಲಸಕ್ಕೆ ನೇಮಿಸಿಕೊಂಡ.

ಮೂರು ತಿಂಗಳ ಅನಂತರ ಪೀಟರ್ ಅನ್ನಾ ಕ್ಯಾಥರೀನಾ ಮೌರ್ಲಿ ಎಂಬ ಬಡ ಡಚ್ ಕನ್ಯೆಯನ್ನು ಮದುವೆಯಾದ. ನಗರದ ಜೀವನ ಮತ್ತೆ ಒಗ್ಗುವ ಮುನ್ನವೇ, ಪತ್ನಿ, ಅವಳಿಬ್ಬರು ಸೋದರಿ ಯರು ಮತ್ತು ಅವರ ತಾಯಿಯರೊಡನೆ ಚಿಕ್ಕದೊಂದು ಮನೆಯಲ್ಲಿ ಸಂಸಾರವಾರಂಭಿಸಿದ. ಪ್ರತಿ ಸಂಜೆ ನೆರೆಹೊರೆಯವರೆಲ್ಲ ಮನೆಯ ಮುಂದಿನ ಚಿಕ್ಕ ತೋಟದಲ್ಲಿ ಬಂದು ಸೇರುತ್ತಿದ್ದರು. ಮೊದಲ ವರ್ಷದ ಬಾಡಿಗೆ ಬಾಕಿ ಉಳಿದಿದ್ದರೂ ಅವನು ನಿಶ್ಚಿಂತನಾಗಿಯೇ ಇದ್ದ.

ಛಳಿಗಾಲದ ಒಂದು ಮಧ್ಯಾಹ್ನ ಗಲಾಟೆಯ ವ್ಯಕ್ತಿಯೊಬ್ಬ

ಮುದ್ರಣ ಶಾಲೆಗೆ ಬಂದ. ಆತನ ಹೆಸರು ಬೆಂಜಮಿನ್ ಫ್ರಾಂಕ್‌ಲಿನ್.

ಆ ತರುಣನ ವಯಸ್ಸು ೧೯ ಇರಬಹುದು. ಧರಿಸಿದ ಬಟ್ಟೆ ದಾರಿದ್ರ್ಯದ ಸಂಕೇತ. ರೊಟ್ಟಿಯೊಂದು ಜೇಬಿನಿಂದ ಹೊರಕ್ಕೆ ತಲೆಯೆತ್ತಿತ್ತು. ಆದರೂ ಆತ ತನಗೆ ಮುದ್ರಣದ ವಿಷಯವೆಲ್ಲ ಗೊತ್ತೆಂದೂ, ತಾನಾಗಲೇ ಒಂದು ಪುಸ್ತಕ ಬರೆದಿರುವುದಾಗಿಯೂ ಹೇಳಿದ. ತನಗೊಂದು ಕೆಲಸ ಕೊಡುವಂತೆ ಬ್ರಾಡ್‌ಫರ್ಡ್‌ನನ್ನು ಆಸಕ್ತಿಯಿಂದ ಕೇಳಿದ.

ಬಾಸ್ಟನ್ನಿನ ಪತ್ರಿಕೆಯೊಂದರ ಪ್ರಕಟನಕಾರ ತನ್ನ ಅಣ್ಣ; ಶಾಸನ ಸಭೆಯನ್ನು ಕುರಿತ ಕೆಲವು ಟೀಕೆಗಳ ಪ್ರಕಟನೆಗಾಗಿ ಅವನೀಗ ಜೈಲಿನಲ್ಲಿದ್ದಾನೆ; ಆದುದರಿಂದ ತಾನು ಅಲ್ಲಿಂದ ಪ್ರಯಾಣ ಮಾಡುವುದು ಲೇಸೆಂದು ಭಾವಿಸಿದುದಾಗಿ ಆ ತರುಣ ನುಡಿದ.

ಈ ಸುದ್ದಿ ಕೇಳಿದ ಬ್ರಾಡ್‌ಫರ್ಡ್‌ಗೆ ಭೂತ ಕಂಡಷ್ಟು ಗಾಭರಿಯಾಯಿತು. ಆತ ಧಸಕ್ಕನೆ ಕುಳಿತ. "ಫಿಲಿಡೆಲ್ಫಿಯದಲ್ಲಿನ ನಿಮ್ಮ ಮಗನ ಪತ್ರಿಕೆಯಲ್ಲಿ ನಮಗೆ ದೊರೆತ ಪ್ರಬಲ ಬೆಂಬಲಕ್ಕಾಗಿ ನಿಮಗೆ ನನ್ನ ವಂದನೆಗಳನ್ನು ಸಲ್ಲಿಸ ಬಯಸುತ್ತೇನೆ, ಸಾರ್. ಮೆಸಾಚ್ಯುಸೆಟ್ಸ್ ಅಧಿಕಾರಿಗಳು ಅಂಧ ಶ್ರದ್ಧೆಯವರು, ಕುಹಕಿಗಳು, ಪ್ರಜಾಪೀಡಕರು ಎಂದು ಆತ ಟೀಕಿಸಿದ್ದಾನೆ. ಮತ್ತೆ—" ಎಂದು ಫ್ರಾಂಕ್ಲಿನ್ ನುಡಿಯತೊಡಗಿದ.

ಬ್ರಾಡ್‌ಫರ್ಡ್ ಮಧ್ಯೆ ಬಾಯಿಹಾಕಿ, "ಏನು ಮಾಡೋದು. ನಾನು ಈಗಾಗಲೆ ಒಬ್ಬ ಕೆಲಸಗಾರನನ್ನು ನೇಮಿಸಿಕೊಂಡಿದ್ದೇನೆ." ಎಂದು ಜೆಂಗರನ ಕಡೆ ತಲೆಯಾಡಿಸಿದ. ಮಾತನ್ನು ಮುಂದುವರಿಸಿ, "ಹೇಗೋ ನನ್ನ ಮಗನ ಮೂರ್ಖತನವನ್ನು ನೀನು ಮೆಚ್ಚಿಕೊಂಡಿರುವುದರಿಂದ, ಫಿಲಿಡೆಲ್ಫಿಯದಲ್ಲಿ ನಿನಗೆ ಅನುಕೂಲವಾಗಬಹುದು. ಇತ್ತೀಚೆಗೆ ಅವನ ಪ್ರಧಾನ ಸಹಾಯಕನೊಬ್ಬ ಮೃತನಾದ ಎಂದ."

ನಕಾರಾತ್ಮಕ ಉತ್ತರ ಕೇಳಿದ ಫ್ರಾಂಕ್‌ಲಿನ್ ನಿರ್ವಿಣ್ಣನಾಗಿ, ಮಧ್ಯಾಹ್ನದ ಛಳಿಯಲ್ಲಿ ಹೊರಕ್ಕೆ ಸಾಗಿದ.

ಮರು ಭಾನುವಾರ ಜೆಂಗರ್, ಸತಿ ಸಮೇತನಾಗಿ, ಎಂದಿನಂತೆ

ಓಲ್ಡ್ ರಿಫಾರ್ಮ್ಡ್ ಚರ್ಚಿಗೆ ಹೋದ. ಸುಮ್ಮನೆ ಕೂಡುವ ಸ್ವಭಾವ ದವನಲ್ಲವಾದುದರಿಂದ ವಾದ್ಯದ ತಿದಿಯೊತ್ತುವ ಕೆಲಸವನ್ನು ತಾನಾಗಿಯೇ ಒಪ್ಪಿಕೊಂಡ. ವಾದ್ಯಗಾರ ಮನೆಗಳ ಮೇಲೆ ಕೈ ಆಡಿಸಿದಾಗ ನಾದ ಹೊರ ಬರಲು ಅಗತ್ಯವಾದ ಗಾಳಿಗಾಗಿ ತಿದಿ ಯೊತ್ತುವುದು ಅವನ ಕೆಲಸ. ದೊರಕುವ ವಾರ್ಷಿಕ ವೇತನ ಹನ್ನೆರಡು ಪೌಂಡುಗಳು.

ಚರ್ಚಿಗೆ ಹೋಗುವಾಗ ಪಕ್ಕದಲ್ಲಿ ಹೆಜ್ಜೆ ಹಾಕುತ್ತಿದ್ದ ತನ್ನ ಪತ್ನಿ ಕ್ಯಾಥರೀನ್ ಜೆಂಗರಳನ್ನು ನೋಡಿ ಉಬ್ಬುತ್ತಿದ್ದ. ಅವಳ ಸುವರ್ಣ ವರ್ಣದ ನಿಡುಗೂದಲನ್ನು ಚಿಕ್ಕದಾಗಿ ಕತ್ತರಿಸಿರು ತ್ತಿದ್ದುದರಿಂದ, ಬಿಳಿ ಲೇಸಿನ ಡಚ್ ಟೋಪಿಯಿಂದೀಚೆಗೆ ಕಾಣಬರು ತ್ತಿದ್ದುದು ತುಣುಕು ಕೂದಲು. ಇಟ್ಟಿಗೆ ಕೆಂಪು ಬಣ್ಣದ ಉಡುಪು, ಸದೃಢವಾದ ಶರೀರವನ್ನು ಬಿಗಿಯಾಗಿ ಅಪ್ಪಿದ ಬಾಡಿಸ್, ದೊಡ್ಡ ಗಂಟೆಯಂತಿದ್ದ ಲಂಗ, ಇವುಗಳನ್ನು ಧರಿಸಿ, ಪ್ರಾರ್ಥನಾ ಪುಸ್ತಕವನ್ನು ಸರಪಣಿಯ ಮೂಲಕ ಭುಜದಿಂದ ಇಳಿಬಿಟ್ಟು, ಗಂಡನ ಪಕ್ಕದಲ್ಲಿ ಸಾವಧಾನವಾಗಿ ಹೆಜ್ಜೆ ಹಾಕುತ್ತಿದ್ದಳು.

ಆಕೆಗೆ ಚರ್ಚಿನ ಮೇಲೆ ವಿಪರೀತವಾದ ಅಭಿಮಾನ. "ಸುದೀರ್ಘ ವಾದ ಪ್ರವಚನಗಳಾಗುವಾಗ ಮಕ್ಕಳು ಮಲಗಿಯೋ, ಗಲಾಟೆ ಮಾಡುತ್ತಲೋ ಕಾಲ ಕಳೆಯುವುದು, ಧರ್ಮವೆಂದರೇನೆಂದು ಅರಿಯದಿರುವುದೂ ವಿಷಾದಕರ ಸಂಗತಿಗಳು. ಅವರಿಗಾಗಿ ವಿಶೇಷ ತರಗತಿಗಳನ್ನು ಏರ್ಪಡಿಸಿ ಬೈಬಲ್ಲಿನ ಕಥೆಗಳನ್ನು ಕಲಿಸಬೇಕು" ಎಂದು ತನ್ನಂತೆ ಚರ್ಚಿಗೆ ಬಂದವರಿಗೆ ಆಗಾಗ ಹೇಳುತ್ತಿದ್ದಳು.

ಆಕೆಯ ಈ ಮಾತು ಕೆಲವರಿಗೆ ಹಿಡಿಸಿತು. ಭಾನುವಾರದ ಮಧ್ಯಾಹ್ನಗಳಲ್ಲಿ ತಮ್ಮ ಮಕ್ಕಳಿಗೆ ಚರ್ಚಿನಲ್ಲಿ ಆಕೆ ಪಾಠ ಹೇಳಲು ಅವರು ಸಮ್ಮತಿಸಿದರು. ಆಕೆ ತನ್ನ ಸಹಾಯಕ್ಕೆ ಇನ್ನೂ ಇಬ್ಬರು ಮೂವರು ತಾಯಿಯರನ್ನೂ ಒಪ್ಪಿಸಿದಳು. ಭಾನುವಾರದ ಶಾಲೆ ಮೊದಲು ಉಗಮವಾದದ್ದು ಹೀಗೆ. ಈ ಉಪಕ್ರಮವನ್ನು ಜಗತ್ತಿನ ಇತರ ಚರ್ಚುಗಳು ಅನಂತರ ಅನುಸರಿಸಿದವು.

ಕ್ಯಾಥರೀನ್ ತಂಗಿ ಉರ್ಸುಲಾ ಲಕ್ಷಣವಂತೆ. ವರ್ಲಿ ನಿಕ್ ಸಿಕ್ ಎಂಬ ಗಾಡಿ ಕಾರ್ಖಾನೆಯವನನ್ನು ಆಕೆ ಮದುವೆಯಾದಳು. ಆವನದು ಧೂಳು ತುಂಬಿದ ದೊಡ್ಡ ಷೆಡ್ಡಿನ ಕಾರ್ಖಾನೆ. ನಾನಾ ಸಾಮಾನುಗಳನ್ನು, ಕಸವನ್ನು ಒಯ್ಯುವ ಎರಡು ಗಾಲಿಗಳ ಗಾಡಿಗಳನ್ನು ತಯಾರಿಸುವ, ರಿಪೇರಿ ಮಾಡುವ ಕಾರ್ಖಾನೆಯದು. ಊರಿನಲ್ಲಿರಬಹುದಾದ ಗಾಡಿಗಳ ಸಂಖ್ಯೆಯನ್ನು ನೂರಕ್ಕೆ ಮಿತಿಗೊಳಿಸಿದ ನಗರದ ಶಾಸನ, ಸಾರಥಿಗಳು ಗಾಡಿಯಲ್ಲಿ ಕೂಡದೆ, ನಡೆದೇ ಹೋಗಬೇಕೆಂದೂ ವಿಧಾಯಕ ಮಾಡಿತ್ತು. ಗಾಡಿಗಳ ನಾಗಾಲೋಟವಿಲ್ಲದೆಯೇ, ನಗರದ ಸಂಚಾರ ಸಾಕಷ್ಟು ಅಪಾಯಕರವಾಗಿತ್ತು.

ಜೆಂಗರ್ ಒಂದು ಪೆನ್ನಿಯನ್ನೂ ಖರ್ಚುಮಾಡುತ್ತಿರಲಿಲ್ಲ. ತನ್ನ ವೇತನವನ್ನೆಲ್ಲ ಕ್ಯಾಥರೀನಳ ರಕ್ತವರ್ಣದ, ಶಕ್ತ ಕೈಗಳಲ್ಲಿ ಹಾಕಿ ಬಿಡುತ್ತಿದ್ದ. ಆಕೆಯದು ದಕ್ಷ ಆಡಳಿತ. ಆಕೆ ಸ್ವಲ್ಪ ಹಣ ಕೂಡಿಡುತ್ತಿದ್ದಾಳೆಂಬುದನ್ನೂ ಬೇಗ ಕಂಡುಕೊಂಡ. ಈ ಕ್ರಮ ರೂಢಿಗೆ ಬಂದುದು ಅವನ ಅದೃಷ್ಟ. ಬೇಗನೆ ಇಬ್ಬರು ಮಕ್ಕಳಾದರು. ಹಿರಿಯನಿಗೆ ಜಾರ್ಜ್ ಎಂದೂ, ಇನ್ನೊಬ್ಬನಿಗೆ ಪೈಟರ್ ಎಂದೂ ನಾಮಕರಣ ಮಾಡಿದರು.

ನ್ಯೂ ಜೆರ್ಸಿಗೆ ಸೇರಿದ ರಾರಿಟಾನ ಡಚ್ ಚರ್ಚೊಂದರಲ್ಲಾದ ಜಗಳವನ್ನು ಕುರಿತೇ ಎಲ್ಲೆಲ್ಲೂ ಚರ್ಚೆ ನಡೆದಿತ್ತು. ತಮ್ಮ ಪುರೋಹಿತನ ಬಗೆಗೆ ರಾರಿಟಾನಿನ ಜನತೆ ರೇಗಿದ್ದರು. ಧರ್ಮಬೋಧೆಯ ಕಾಲದಲ್ಲಿ, ನಾಲ್ಕು ಜನ ಎದ್ದು ನಿಂತು, ಸುಳ್ಳು ತತ್ವಗಳನ್ನು ಬೋಧಿಸುತ್ತಿರುವುದಾಗಿ ಆಪಾದಿಸಿದರು.

ಆತ ಆ ನಾಲ್ವರಿಗೂ ಬಹಿಷ್ಕಾರ ವಿಧಿಸಿದ. ಅಂದಿನಿಂದ ಅವರು ಯಾವ ಡಚ್ ಚರ್ಚಿಗೂ ಹೋಗಿ ದೇವತಾರ್ಚನೆ ಮಾಡುವಂತಿರಲಿಲ್ಲ. ಉತ್ಕಟ ಧರ್ಮಶ್ರದ್ಧೆಯು ಅವರಿಗೆ ಅದೊಂದು ಬಲವಾದ ಪೆಟ್ಟೆನಿಸಿತು. ಈ ಅನ್ಯಾಯ ನ್ಯೂ ಜೆರ್ಸಿ ಮತ್ತು ನ್ಯೂಯಾರ್ಕ್‌ಗಳಲ್ಲೆಲ್ಲ ಚರ್ಚಿತವಾಯಿತು. ಆದರೆ ಬಹುಮಂದಿಗೆ ಈ ಕಲಹದ ಮೂಲ

ತಿಳಿದಿರಲಿಲ್ಲ.

ಒಂದು ದಿನ ಸಂಜೆ ಪೀಟರ್ ಕೆಲಸದಿಂದ ಮನೆಗೆ ಹಿಂತಿರುಗಿದಾಗ, ಆತನ ಪತ್ನಿ ದೊಡ್ಡ ಡಚ್ ಹಸ್ತಪ್ರತಿಯೊಂದನ್ನು ಕೈಗಿತ್ತಳು. "ಇದನ್ನೋದಿ" ಎಂದು ಆಸಕ್ತಿಯಿಂದ ನುಡಿದಳು. "ಇದನ್ನು ಓದಿ ನೋಡುವಂತೆ ನನಗೆ ಹೇಳಿದರು. ಬ್ರಾಡ್‌ಫರ್ಡ್ ಮೂಲಕ ಮುದ್ರಿಸಲು ಸಾಧ್ಯವೇ ಎಂಬುದನ್ನೂ ತಿಳಿದುಹೇಳುವಂತೆ ಕೇಳಿದ್ದಾರೆ."

ಒಡನೆ ಪೀಟರ್ ಅದನ್ನು ಓದುತ್ತ ಕುಳಿತ. ಬಹಿಷ್ಕೃತರಾದ ನಾಲ್ವರೇ ಅದರ ಲೇಖಕರು. ತಮ್ಮ ನಂಬುಗೆಯೇನು, ಬೋಧಕನನ್ನು ತಾವು ಬಹಿರಂಗವಾಗಿ ಆಪಾದಿಸಿದುದೇಕೆ, ತಮ್ಮ ನಿಲುವೇ ಏಕೆ ಸರಿ – ಎಂಬುದನ್ನೆಲ್ಲ ಅವರು ಅದರಲ್ಲಿ ನಿರೂಪಿಸಿದ್ದರು.

ಓದುತ್ತಿದ್ದಂತೆ ಪೀಟರಿಗೆ ಉತ್ಸಾಹೋದ್ರೇಕವಾಯಿತು. "ಇದನ್ನು ನಮ್ಮ ಜನ ಸಂತೋಷದಿಂದ ಓದಿಯಾರು. ಯಾರು ನಿಜವಾದ ಧರ್ಮಪಾರಾಯಣರು ? ಈ ನಾಲ್ವರೇ ? ಅಥವಾ ನ್ಯೂ ಜೆರ್ಸಿಯ ಧರ್ಮಬೋಧಕನೇ ? ಎಂಬುದನ್ನು ಇದರಿಂದ ನಿರ್ಧರಿಸಿಯಾರು" ಎಂದು ನುಡಿದ.

ಮಾರನೆ ದಿನ ಪೀಟರ್ ಈಹಸ್ತಪ್ರತಿಯನ್ನು ತೋರಿಸಿದಾಗ ಬ್ರಾಡ್‌ಫರ್ಡ್ ತಲೆಯಲ್ಲಾಡಿಸಿದ. "ಮಗು, ನಾನು ಎಷ್ಟೋಸಾರೆ ಬೋಧಕರ ವಾದವಿವಾದಗಳನ್ನು ಅಚ್ಚು ಹಾಕಿದ್ದೇನೆ. ಆದರೆ ಇದು ಅಂಥದಲ್ಲ. ದೇವರಾಣೆ! ಈ ನಾಲ್ವರು ತಮ್ಮ ಬೋಧಕನ ಮೇಲೆ ತಿರುಗಿ ಬಿದ್ದಿದ್ದಾರೆ. ಆ ಬೋಧಕ ಇವರೆಲ್ಲರ ಮೇಲಧಿಕಾರಿಯೆಂದು ನೇಮಿತನಾದವನು! ಇಂಥ ಅನುಚಿತ ಪ್ರಸಂಗದಲ್ಲಿ ನಾನು ಸಿಕ್ಕಿಬೀಳಲಾರೆ."

"ಇದರಿಂದೇನು ತೊಂದರೆ?" ಪೀಟರ್ ಒತ್ತಿ ಕೇಳಿದ.

"ನನಗೆ ಅನುಭವವಾಗಿದೆಯಪ್ಪ. ನನಗ್ಗೊತ್ತು." ಎಂದು ಬ್ರಾಡ್‌ಫರ್ಡ್ ಎಚ್ಚರಿಕೆಯ ನುಡಿಯಾಡಿದ. "ಮುದ್ರಕನಾದವನು ಅಧಿಕಾರಿಗಳ ಮೇಲೆ ಬೀಳದಿರುವುದೇ ಲೇಸು."

"ನಾನು ಹುಟ್ಟುವುದಕ್ಕೆ ಮುಂಚೆ, ಫಿಲಿಡೆಲ್ಫಿಯಾದಲ್ಲಿ ನೀವು ಅನುಭವಿಸಿದ ತೊಂದರೆ ಇಂತಹುದೇ ಏನು?"

ಬ್ರಾಡ್‌ಫರ್ಡ್ ತೀಕ್ಷ್ಣವಾಗಿ ದಿಟ್ಟಿಸಿದ. "ಅದೆಲ್ಲ ಯೋಚನೆ ಈಗಬೇಡ" ಎಂದು ಗೊಣಗಿ ಅಲ್ಲಿಂದ ಕಾಲ್ದೆಗೆದ.

ಆ ಹಳೆಯ ಘಟನೆಯನ್ನು ಅರಿಯಬೇಕೆಂಬ ಕುತೂಹಲ ಪೀಟರಿನಲ್ಲಿ ಮೊದಲಿಗಿಂತ ಹೆಚ್ಚಾಯಿತು. ಅದೊಂದು ಪ್ರಮುಖವಾದ ಘಟನೆಯೇ. ತಾನಂತಹ ಪ್ರಸಂಗವನ್ನು ತಂದೊಡ್ಡಿಕೊಳ್ಳದಂತೆ ಎಚ್ಚರವಾಗಿರುವ ಸಲುವಾಗಿಯೂ ತಾನದೇನೆಂಬುದನ್ನು ತಿಳಿಯಲೇ ಬೇಕು.

ಆ ಸಂಜೆ, ಅವನ ಪತ್ನಿಯ ತಂಗಿ, ಮೈದುನ, ಅನೇಕಮಂದಿ ನೆರೆಹೊರೆಯವರು, ಆ ನಾಲ್ವರು ಅಪರಿಚಿತರೊಡನೆ ಆತನಿಗಾಗಿ ತೋಟ ದಲ್ಲಿ ಕಾದು ನಿಂತಿದ್ದರು.ಅವನ ಧ್ವನಿ ಕೇಳಿಸಿದೊಡನೆಯೇ ಕ್ಯಾಥರೀನ್ ಮನೆಯೊಳಗಿಂದ ಓಡಿ ಬಂದು ಹೊಸಬರ ಪರಿಚಯ ಮಾಡಿಕೊಟ್ಟಳು. ಅವರೇ ಆ ಹಸ್ತಪ್ರತಿ ಬರೆದ ನಾಲ್ವರು.

ಸಮಾಧಾನಚಿತ್ತರೂ, ವಿವೇಕಿಗಳೂ ಶ್ರದ್ಧಾಳುಗಳೂ ಆದ ರೈತರುಗಳಂತೆ ಅವರು ಕಂಡುಬಂದರು. ಆದರೆ ಅವರ ಮುಖಗಳು ಚಿಂತಾಮುದ್ರಿತವಾಗಿ ಜೋಲು ಬಿದ್ದಿದ್ದುವು. ಬಹಿಷ್ಕಾರದಿಂದ ಅವರಿಗೆ ಬಹಳ ಕಷ್ಟವಾಗಿತ್ತೆಂಬುದು ನೋಡಿದೊಡನೆಯೇ ಸ್ಪಷ್ಟವಾಗು ವಂತಿತ್ತು.

ಬ್ರಾಡ್‌ಫರ್ಡನ ನಕಾರದ ಉತ್ತರವನ್ನು ಅವರಿಗೆ ತಿಳಿಸುವುದು ಪೀಟರಿಗೆ ಬಹು ಪ್ರಯಾಸವೆನಿಸಿತು. ಕಂಗೆಟ್ಟ ಅವರು ದೀರ್ಘವಾಗಿ ನಿಟ್ಟುಸಿರುಬಿಟ್ಟು ತಲೆಯಾಡಿಸಿದರು.

ಆದರೆ ಕ್ಯಾಥರೀ಼ ಮುಷ್ಟಿ ಬಿಗಿಮಾಡಿದಳು, ತುಟಿ ಕಚ್ಚಿದಳು. "ಪೀಟರ್ ಜೆಂಗರ್! ನಾಳೆ ನೀನು ಕೆಲಸಕ್ಕೆ ಹೋದೊಡನೆಯೇ ಪುಸ್ತಕವನ್ನು ಮುದ್ರಿಸಲೇಬೇಕೆಂದು ಬ್ರಾಡ್‌ಫರ್ಡಿಗೆ ಹೇಳು. ನಿಜವಾದ ತತ್ವ ಬೋಧನೆ ಯಾರದು? ಈ ನಾಲ್ವರದೇ? ಬೋಧಕ ನದೇ? ನನಗೂ ಇನ್ನೂ ಗೊತ್ತಾಗಿಲ್ಲ. ಆದರೆ ಈ ಪುಸ್ತಕ ಮುದ್ರಿತ

ವಾಗದೆ ಜನ ಬುದ್ಧಿ ಉಪಯೋಗಿಸಿ ಈ ಪ್ರಶ್ನೆಯನ್ನು ಚರ್ಚಿಸುವು ದಾದರೂ ಹೇಗೆ ?"

ಪತ್ನಿಯ ಸ್ಥೈರ್ಯವನ್ನೂ ಧೈರ್ಯವನ್ನೂ ಪೀಟರ್ ಮೆಚ್ಚಿ ಕೊಂಡ. ಆಗಿನ ಪರಿಸ್ಥಿತಿ ಆಕೆಯ ಸೌಂದರ್ಯಕ್ಕೆ ವಿಶೇಷ ಕಳೆತಂದಿತ್ತು. ಹಿಂದೆಂದೂ ಕಾಣದಷ್ಟು ಸೌಂದರ್ಯವತಿಯಾಗಿ ಅವಳು ಶೋಭಿಸಿ ದಳು. "ಆದರೆ ಅಧಿಕಾರಿಗಳನ್ನು ಎದುರು ಹಾಕಿಕೊಳ್ಳುವುದು ಬ್ರಾಡ್ ಫರ್ಡಿಗೆ ಇಷ್ಟವಿಲ್ಲ" ಎಂದು ಪೀಟರ್ ವಿವರಿಸಿದ.

ಬಹಿಷ್ಕೃತರ ಪೈಕಿ ಒಬ್ಬ, ತೆಳುಶರೀರದ ಹಿರಿಯ ಡಚ್ ಮನುಷ್ಯ "ನಮಗಾಗಿ ನೀನೂ ಮತ್ತು ಜೆಂಗರ್ ತಾಪತ್ರಯಕ್ಕೆ ಒಳಗಾಗ ಬೇಕೆಂಬುದು ನಮ್ಮ ಅಪೇಕ್ಷೆಯಲ್ಲ" ಎಂದ. ಪೀಟರ್ ಎಂದೆಂದೂ ನೋಡಿರದಂಥ, ವ್ಯಸನ ಸಂತಪ್ತ ಕಣ್ಣುಗಳಿದ್ದ ಆತ, ಮತ್ತಷ್ಟು ಜೋಲು ಮುಖದಿಂದ ಪೀಟರನ ಕಡೆ ನೋಡಿದ. "ಆದರೆ ನಮಗಿರುವ ಒಂದೇ ಅವಲಂಬನ ಈ ಪುಸ್ತಕದ ಮುದ್ರಣ."

ಕ್ಯಾಥರೀ಼ ಸ್ವಲ್ಪಹೊತ್ತು ಯೋಚಿಸಿ, ಗಂಡನ ಕಡೆ ತಿರುಗಿದಳು. "ಹೇಗೂ ನಮ್ಮ ಹತ್ತಿರ ಕೂಡಿಟ್ಟ ಸ್ವಲ್ಪ ಹಣವಿದೆ. ಸಾಕಷ್ಟು ಕಾಗದ ಕೊಂಡು, ಅವನ ಮುದ್ರಣಾಲಯವನ್ನು ಉಪಯೋಗಿಸಿ, ಪುಸ್ತಕವನ್ನು ನೀನೇ ಮುದ್ರಿಸಿ ಪ್ರಕಟಿಸಲು ಅನುಮತಿಕೊಡುವಂತೆ ಬ್ರಾಡ್‌ಫರ್ಡ್‌ನನ್ನು ಕೇಳು"

ಮಾರನೆ ದಿನ ಜೆಂಗರ್ ಈ ಯೋಜನೆಯನ್ನು ಮುಂದಿಟ್ಟಾಗ ಬ್ರಾಡ್‌ಫರ್ಡ್ ತನ್ನ ಕಣ್ಣುಗಳನ್ನು ಅರೆಮುಚ್ಚಿದ. ಒಳ್ಳೆ ಪಳಗಿದ ತೋಳದಂತೆ ಆಗ ಕಂಡು ಬಂದ. ಈ ಸ್ವರೂಪದಲ್ಲಿ ಬ್ರಾಡ್‌ಫರ್ಡ್‌ನನ್ನು ಪೀಟರ್ ಎಂದೂ ಕಂಡಿರಲಿಲ್ಲ. "ನನ್ನ ಪಾಲುದಾರನಾಗಬೇಕೆಂಬುದು ನಿನ್ನ ಮಾತಿನ ಅರ್ಥವೇನು ?"

ಪೀಟರ್ ಸ್ವಲ್ಪ ಹಿಂದೆಗೆದ. "ಹಾಗೆಂದರೆ ಹೇಗೆ ?"

"ನೀನು ಕಾಗದ ಕೊಂಡು ಕೆಲಸಮಾಡಬೇಕು. ಮುದ್ರಣ ಯಂತ್ರ ಅಕ್ಷರಗಳು, ಮಸಿ ಇತ್ಯಾದಿ ನನ್ನವು. ಲಾಭದಲ್ಲಿ ಪಾಲು."

ಮತ್ತೆ ಪೀಟರ್ ಅಂಜಿದ. ಲಾಭವೇ ಬರದೇ ಹೋದರೆ?

ಇದೇ ಅವನ ಪ್ರಥಮ ವ್ಯಾವಹಾರಿಕ ಜೂಜು. ಅಧಿಕಾರಿಗಳ ವಿರುದ್ಧವೂ ಟೀಕೆಗಳನ್ನು ಬರೆದು ಪ್ರಕಟಿಸುವ ಅವಕಾಶಕ್ಕಾಗಿ ಮುದ್ರಣ ಸ್ವಾತಂತ್ರ್ಯ ಪಡೆಯುವ ಹೋರಾಟದಲ್ಲಿ ಮೊದಲ ಕದನವೂ ಇದೇ. ನಿಧಾನವಾಗಿ ಧೈರ್ಯಕೂಡಿಸಿಕೊಂಡ. "ನನಗೇನೂ ಅಂಜಿಕೆಯಿಲ್ಲ"

ಬ್ರಾಡ್‌ಫರ್ಡ್ ಕೈಚಾಚಿದ. ಪೀಟರ್ ಅದನ್ನು ಹಿಡಿದು ಕುಲುಕಿದ.

ಮಾರನೆ ಬೆಳಿಗ್ಗೆ ಕ್ಯಾಥರೀನ್ ಮತ್ತು ಪೀಟರ್ ತಮ್ಮ ಉಳಿತಾಯದ ಸಂದೂಕವನ್ನು ಕೊಡವಿದರು. ಅಂದೆಲ್ಲ ಅವರಿಬ್ಬರೂ ಗಂಭೀರವದನರಾಗಿದ್ದರು.

ಎರಡು ತಿಂಗಳ ಕಾಲ ಪೀಟರ್ ತೆರಪಿಲ್ಲದೆ ದುಡಿದ. ಬೇರೆ ಯಾವ ಕೆಲಸವನ್ನೂ ಮಾಡಲಿಲ್ಲವೆಂದು ಬ್ರಾಡ್‌ಪರ್ಡ್ ಸಿಡುಕಲಿಲ್ಲ. ತಾನು ಮಾಡುತ್ತಿರುವುದೇನೆಂಬುದು ವೃದ್ಧ ಮುದ್ರಕನಿಗೆ ತಿಳಿದಿರಬೇಕು. ಆ ಹೋರಾಟದಲ್ಲಿ ತೀವ್ರವಾದ ಆಸಕ್ತಿ ಬಲಿಯುತ್ತಿದ್ದುದು ಅವನಿಗೆ ಸ್ಪಷ್ಟವಾಗಿತ್ತು. ಜನ ಧಂಡಿಯಾಗಿ ಆ ಪುಸ್ತಕವನ್ನು ಕೊಂಡಾರು.ಆದರೆ ಅದೇ ಜನ ಅದರ ಮೇಲೆ ಆಕ್ಷೇಪಣೆಗಳನ್ನೆತ್ತಿದರೆ ? ಅದರ ಹೊಣೆಗಾರಿಕೆಯನ್ನು ಪಾಲುದಾರನ ಹೆಗಲಿಗೇರಿಸಬಹುದು.

ಪುಸ್ತಕ ಪ್ರಕಟವಾದ ಮೇಲೆ ಬಹು ಬೇಗ ಪ್ರತಿಗಳೆಲ್ಲ ಮಾರಾಟವಾದವು.

ನ್ಯೂಜೆರ್ಸಿಯ ಬೋಧಕ ನ್ಯೂಯಾರ್ಕಿಗೆ ಧಾವಿಸಿದ. ಮಳೆ ಬಿರುಗಾಳಿಯಲ್ಲೇ ದೋಣಿಯಲ್ಲಿ ನದಿದಾಟಿದ. ಜೆಂಗರನ ಬಾಗಿಲನ್ನು ಸಿಟ್ಟನಿಂದ ಬಡಿದು ಒಂದರ್ಧಗಂಟೆಹೊತ್ತು ಜೆಂಗರನನ್ನು ಬಯ್ದು ಶಪಿಸಿದ.

"ನಿನ್ನ ಅಕ್ಷರ ಜೋಡಿಕೆಯ ಹತಾರವನ್ನು ಜೇನುಗೂಡಿಗೆ ಚುಚ್ಚಿದ್ದೀಯ ! ನನ್ನ ಶಿಷ್ಯರಲ್ಲಿ ಮುಕ್ಕಾಲುಪಾಲು ಜನ ನಿನ್ನ ಪುಸ್ತಕವನ್ನು ಓದಿ, ನೆದರ್ಲೆಂಡ್ ಅಧಿಕಾರಿಗಳಿಗೆ ಪ್ರತಿಗಳನ್ನು ಕಳಿಸುತ್ತಿದ್ದಾರೆ.ಸಭೆಯೊಂದನ್ನೂ ಕರೆಯಲಾಗಿದೆ. ಗುಂಪಿನ ಗಮ್ಮತ್ತು

ನೋಡಬೇಕಿದ್ದರೆ ಶನಿವಾರ ರಾತ್ರಿಯ ಸಭೆಗೆ ನೀನೇ ಬಾ !"

ಆದರೆ ಪೀಟರ್ ಸಭೆಗೆ ಹೋಗಲೇ ಇಲ್ಲ. ಅದು ಸೇರುವ ಮುನ್ನವೇ ಬೋಧಕನೇ ಸೋತು, ನಾಲ್ವರ ಮೇಲಿನ ಬಹಿಷ್ಕಾರವನ್ನು ರದ್ದುಪಡಿಸಿದ. ಮಾರನೆ ಭಾನುವಾರ ಪ್ರವಚನ ಕಾಲದಲ್ಲಿ, " ಕ್ರಿಶ್ಚಿಯನ್ನರೆಲ್ಲರೂ ಒಬ್ಬರನ್ನೊಬ್ಬರು ಪರಸ್ಪರ ಪ್ರೀತಿಸಬೇಕು ಜಗಳವಾಡಬಾರದು " ಎಂದು ಸುಧೀರ್ಘ ಪ್ರವಚನ ಹೇಳಿದ.

' ಕ್ಲಗೇಟ್ ' ಎಂಬ ಶಿರೋನಾಮೆಯಿದ್ದ ಆ ಪುಸ್ತಕದ ಮೇಲೆ ಹೆಮ್ಮೆಯಿಂದ ಪೀಟರ್ ಬೆರಳಾಡಿಸಿದ. ಶಿರೋನಾಮೆಯ ಪುಟದ ಕೆಳಭಾಗದಲ್ಲಿ The Nieu-york, Gedrukt by wi!liam Bradford en J. Peter Zenger, 1725. ಎಂದಿತ್ತು.

ಜನತೆಗೆ ಕಾಗುಣಿತದ ಬೋಧನೆ ಮಾಡುವುದಕ್ಕಿಂತ ಇದು ಹೆಚ್ಚಿನ ಸಾಹಸ ಎನಿಸಿತು.

———

# ಅಧ್ಯಾಯ ೬

## ಪತ್ರಿಕಾ ಮುದ್ರಣದ ಅಪಾಯಗಳು

ಸಂದರ್ಭವಶಾತ್ ಇಬ್ಬರು ತರುಣರು ಒಟ್ಟಾಗಿ ಅಪ್ರೆಂಟಿಸ್ ಕೆಲಸ ಕೇಳಿಕೊಂಡು ಬ್ರಾಡ್‌ಫರ್ಡ್ ಮುದ್ರಣಾಲಯಕ್ಕೆ ಬಂದರು. ಸಾಕಷ್ಟು ಕೆಲಸವಿಲ್ಲದ್ದರಿಂದ ಅವರನ್ನು ಸೇರಿಸಿಕೊಳ್ಳುವಂತಿರಲಿಲ್ಲ.

ದಿನವೆಲ್ಲಾ ಸಿಡಿಮಿಡಿಗುಟ್ಟುತ್ತಿದ್ದ ಬ್ರಾಡ್‌ಫರ್ಡ್ "ಈ ತರುಣರನ್ನು ಕೈಬಿಡಲಾರೆ. ಇಬ್ಬರೂ ಒಳ್ಳೆ ಕೆಲಸಗಾರರಂತೆ ಕಾಣುತ್ತಾರೆ. ಅವರ ಅಪ್ಪಂದಿರೂ ಶುಲ್ಕ ತೆರಲು ಸಿದ್ಧವಿದ್ದಾರೆ. ಆದರೆ ಇಲ್ಲಿ ಸಾಕಷ್ಟು ಕೆಲಸವಿಲ್ಲ. ಮಾಡೋದೇನು ?" ಎಂದ.

ಪೀಟರ್ ಕತ್ತೆತ್ತಿ ಹೇಳಿದ. "ಫಿಲಿಡೆಲ್ಫಿಯಾದಲ್ಲಿ ನಿಮ್ಮ ಮಗ ನಡೆಸುತ್ತಿರುವಂತೆ ನೀವೂ ಒಂದು ಪತ್ರಿಕೆ ನಡೆಸಬಾರದೇಕೆ?"

ಬ್ರಾಡ್‌ಫರ್ಡ್ ಪೀಟರನ ಕಡೆ ತಿರುಗಿದ. "ಆ ಯೋಚನೆಯೂ ನನ್ನ ಮನಸ್ಸಿನಲ್ಲಿ ಬಹು ದಿನಗಳಿಂದ ಮಿಡಿಯುತ್ತಿದೆ."

ಆ ಪುಕ್ಕಲು ಮುದುಕ ಮುದ್ರಕನಿಗೆ ಧೈರ್ಯ ತುಂಬಲು ಪೀಟರ್ ಏನೇನೋ ಹೇಳಿದ.

ಮರುದಿನ ಬ್ರಾಡ್‌ಫರ್ಡ್ ಗವರ್ನರ್ ಬರ್ನೆಟ್‌ನನ್ನು ನೋಡಲು ಕಲ್ಲುಗೋಡೆಯ ಹಳೆ ಕೋಟೆಗೆ ಹೋದ. ರಾಜಮನ್ನಿತ ಮುದ್ರಕನೆಂದು ಸರಕಾರದಿಂದ ೫೦ ಪೌಂಡುಗಳ ವಾರ್ಷಿಕ ವೇತನ ತನಗೆ ಸಲ್ಲುತ್ತಿದ್ದುದರಿಂದ ಗವರ್ನರಿಗೆ ತನ್ನ ಯೋಜನೆಯನ್ನು ತಿಳಿಸಬೇಕಾದ್ದು ತನ್ನ ಕರ್ತವ್ಯವೆಂದು ಅವನು ಬಗೆದ.

ಒಂದೇ ವಾರದಲ್ಲಿ ಮುದ್ರಣ ಶಾಲೆಯಲ್ಲಿ ಸಡಗರ ತುಂಬಿತು. ಪ್ರತಿಯೊಬ್ಬ ಗಿರಾಕಿಯೂ ಹೊಸ ಪತ್ರಿಕೆಯ ವಿಷಯ ಪ್ರಸ್ತಾಪಿಸುತ್ತಿದ್ದರು. ಬ್ರಾಡ್‌ಫರ್ಡ್ ಮೊದಲು ಆ ಇಬ್ಬರು ಅಪ್ರೆಂಟಿಸ್‌ಗಳನ್ನು ಕೆಲಸಕ್ಕೆ ಸೇರಿಸಿಕೊಂಡ.

ಪತ್ರಿಕೆಯ ವಿಷಯದಲ್ಲಿ ಹೆಚ್ಚಿನ ಆಸಕ್ತಿವಹಿಸಿ ಮಾತ ನಾಡಲು ಮೊದಲು ಬಂದವನು ಸುಪ್ರೀಂ ಕೋರ್ಟ್ ಶ್ರೇಷ್ಠ ನ್ಯಾಯಾಧೀಶನ ಮಗ ಲೂಯಿಮಾರಿಸ್, ಜ್ಯೂನಿಯರ್. ಅಕ್ಟೋಬರ್ ತಿಂಗಳ ಒಂದು ದಿನ, ಛಳಿ ಬಿರುಗಾಳಿಯಲ್ಲಿ ಆ ತರುಣ ತನ್ನ ದೊಡ್ಡ ಕೋಟಿನ ಮೇಲಿನ ಮಳೆ ಹನಿಗಳನ್ನು ಒದರುತ್ತ ಮುದ್ರಣಾ ಲಯಕ್ಕೆ ಕಾಲಿಟ್ಟ. ೨೭ರ ಪ್ರಾಯ; ವಾರವೆರಡುವಾರಗಳಿಗೊಮ್ಮೆ ಗವರ್ನರ್ ಅಧ್ಯಕ್ಷತೆಯಲ್ಲಿ ಕೋಟೆಯಲ್ಲಿ ಸಭೆ ಸೇರಿ ಶಾಸನಗಳನ್ನು ಅನುಮೋದಿಸುವ, ವಸಾಹತಿನ ಆಡಳಿತಕ್ಕೆ ಸಂಬಂಧಿಸಿದ ಕ್ಲಿಷ್ಟ ವಿಷಯಗಳನ್ನು ಚರ್ಚಿಸುವ ಕಾರ್ಯಭಾರ ನಿರ್ವಹಿಸುತ್ತಿದ್ದ. ರಾಜ ಪ್ರತಿನಿಧಿ ಮಂಡಳಿಯ ಸದಸ್ಯನೂ ಹೌದು. ಅವನ ಆರಕ್ತ ತೆಳು ಮುಖದಲ್ಲಿ, ಜಾಣ್ಮೆ, ಉತ್ಸಾಹಗಳ ಕಳೆ ಹೊಳೆಯುತ್ತಿತ್ತು.

"ಬ್ರಾಡ್‌ಫರ್ಡ್" ಎಂದು ಆಸಕ್ತಿಯಿಂದ ಮಾತನ್ನಾ ರಂಭಿಸಿದ "ಪತ್ರಿಕೆ ಹೊರಡಿಸುವ ಯೋಚನೆ ಮಾಡಿದ್ದೀರೆಂದು ಕೇಳಿದೆ. ಸದಾಲೋಚನೆ.೬೦೦೦ ಜನರಿರುವ ಈ ಊರಿನಲ್ಲೊಂದು ಪತ್ರಿಕೆ ಇಲ್ಲದಿರುವುದು ಅಪಮಾನಕರ!"

"ತಮಗೂ ಸಮ್ಮತಿಯೆಂಬುದು ಸಂತೋಷದ ಸಂಗತಿ ಸರ್"

ಬ್ರಾಡ್‌ಫರ್ಡ್ ಮುಗುಳುನಗೆ ಸೂಸುತ್ತ ಉತ್ತರಿಸಿದ.

ಆ ತರುಣ ರಾಜಕಾರಣಿ ಜೇಬಿನಿಂದೆರೆಡು ಕಾಗದದ ಹಾಳೆ ಗಳನ್ನು ಹೊರತೆಗೆದು ಉತ್ಸಾಹದಿಂದ ನುಡಿದ: "ಪತ್ರಿಕೆಯನ್ನು ಸ್ವಾರಸ್ಯವಾಗಿ ನಡೆಸುತ್ತೀರೆಂದು ನಂಬುತ್ತೇನೆ ಸರ್. ಇಲ್ಲವಾದರೆ ಪತ್ರಿಕೆ ಹೊರಡಿಸಿ ಪ್ರಯೋಜನ ತಾನೆ ಏನು?"

ಆ ಮಾತಿನಿಂದ ವಿಸ್ಮಯಗೊಂಡ ಮುದ್ರಕ, ಧೀರ್ಘ ನಿಟ್ಟುಸಿರು ಬಿಟ್ಟು, ತನಗಾದ ಗಾಭರಿಯನ್ನು ಮರೆಮಾಚ ಲೆತ್ನಿಸಿದ.

"ಮೊದಲ ಸಂಚಿಕೆಯಲ್ಲೇ ಜನರ ಮೆದುಳಿಗೊಂದಿಷ್ಟು ಕೆಲಸ ಕೊಡುವ ಏನಾದರೂ ವಿಷಯದ ಪ್ರಸ್ತಾಪಮಾಡಿ. ನಾನು ಬರೆದ ಲೇಖನವಿದು" ಎನ್ನುತ್ತ, ಕೈಲಿದ್ದ ಎರಡು ಕಾಗದದ ಹಾಳೆಗಳನ್ನು

ಬ್ರಾಡ್‌ಫರ್ಡ್ ಕೈಗಿತ್ತ ಆ ತರುಣ. "ಇದನ್ನು ರಾಜಪ್ರತಿನಿಧಿ ಮಂಡಲದಲ್ಲಿ ಓದಿದೆ. ಅಲೆಕ್ಸಾಂಡರ್ ಬೆಂಬಲವಿತ್ತರು. ನ್ಯಾಯ ಮೂರ್ತಿ ಹ್ಯಾರಿಸ್ವ ವಿರೋಧಿಸಿದರು. ಅವರ ವಾದವಿವಾದಗಳನ್ನು ನೀವೇ ಖುದ್ದು ನೋಡಬೇಕಿತ್ತು!"

"ವಿಷಯವೇನೆಂದು ಕೇಳಬಹುದೇ ಸಾರ್?"

ಪೀಟರ್ ಧೈರ್ಯವಾಗಿಯೇ ಪ್ರಶ್ನೆ ಹಾಕಿದ.

"ವಿದೇಶಿ ಹಡಗುಗಳಲ್ಲಿ ಬರುವ ಎಲ್ಲಾ ಪದಾರ್ಥಗಳ ಮೇಲೂ ಕಡ್ಡಾಯವಾಗಿ ತೆರಿಗೆ ಹಾಕಬೇಕೆಂದು ಹೇಳಿದೆ. ಹೀಗಾದರೆ ಬರ್ಮುಡಾದ ಹಡಗುಗಳು ನಮ್ಮ ವ್ಯಾಪಾರಕ್ಕೆಲ್ಲ ಸೊನ್ನೆ ಸುತ್ತು ತ್ತಿರುವುದನ್ನು ತಪ್ಪಿಸಬಹುದು. ನನ್ನ ಪ್ರತಿಯೊಂದು ಮಾತನ್ನೂ ಲಕ್ಷ್ಯವಿಟ್ಟು ಗಮನಿಸಿ!" ಮಾರಿಸ್ ಉದ್ರೇಕದಿಂದ ಉತ್ತರವಿತ್ತ. ವಿಷಯದ ಪ್ರಸ್ತಾಪ ಮಾಡುತ್ತಿದ್ದಂತೆ ಅವನ ಧ್ವನಿ ತಾರಕಕ್ಕೆ ಏರುತ್ತಿತ್ತು. "ನಮ್ಮ ಸರಕಾರ ಈಗ ಈ ಕೆಲಸ ಮಾಡದಿದ್ದಲ್ಲಿ, ಇನ್ನು ಹತ್ತುವರ್ಷ ಕಳೆಯುವುದರೊಳಗೆ ನ್ಯೂಯಾರ್ಕ್ ಹಸಿವಿನಿಂದ ನರಳ ಬೇಕಾದೀತು!"

ಮೆಲ್ಲನೆದ್ದು, ತನ್ನ ಮುಂದಿನ ವಾಕ್ಯಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡಲು ಬಲಗೈಯನ್ನು ಗಾಳಿಯಲ್ಲಿ ಒತ್ತುತ್ತ ಬಾಯಿ ಬಿಚ್ಚುತ್ತಿರು ವಂತೆ, ಹೊರ ಬಾಗಿಲು ತೆರೆದ ಶಬ್ದ ಅವನ ಗಮನವನ್ನು ಸೆಳೆಯಿತು.

ಪೀಟರ್ ಮತ್ತು ಬ್ರಾಡ್‌ಫರ್ಡ್ ಕೂಡಲೆ ಬಾಗಿಲ ಕಡೆ ತಿರುಗಿದರು.

ಇಸ್ತ್ರಿ ಮಾಡಿದ ವಸ್ತ್ರಗಳಿಂದ ಅಲಂಕೃತನಾದ ಸದ್ಗೃಹಸ್ಥನೊಬ್ಬ ಚಿನ್ನದ ಹಿಡಿ ಹಾಕಿದ ಬೆತ್ತವನ್ನು ಹಿಡಿದು ಒಳಕ್ಕೆ ಪ್ರವೇಶಿಸಿದ. ಇಡಿ ನ್ಯೂಯಾರ್ಕ್ ನಗರದಲ್ಲಿ ಲೇಸ್ ಕಫ್ ಷರಟು ಧರಿಸುತ್ತಿದ್ದವನು ಅವನೊಬ್ಬನೇ. ಸುತ್ತೆಲ್ಲ ಒಮ್ಮೆ ನೋಡಿದ. ಅವನ ಅಸ್ಮಿತ ವದನ ದಲ್ಲಿನ ಕಂದು ಕಣ್ಣುಗುಡ್ಡೆಗಳು ಅಲ್ಲಾಡದೆ ಅಲ್ಲಿದ್ದುದನ್ನೆಲ್ಲ ಗಮನಿಸಿದವು.

"ನಾನಿನ್ನು ಬರುತ್ತೇನೆ" ತರುಣ ಮಾರಿಸ್ ತಟಕ್ಕನೆ

ಮಾತು ಮುಗಿಸಿದ.

"ನಿಮ್ಮ ಪತ್ರಿಕೆ ಯಶಸ್ವಿಯಾಗಬೇಕಾಗಿದ್ದರೆ. ನಾನು ಹೇಳಿದ ಹಾಗೆ ಮಾಡಿ." ಬ್ರಾಡ್‌ಫರ್ಡನ ಕೈಕುಲುಕಿ, ಪೀಟರ್ ಕಡೆಗೆ ಕೈ ಆಡಿಸಿ, ಆಗಂತುಕನ ಕಡೆ ತಿರುಗಿ, ಒರಟು ಧ್ವನಿಯಲ್ಲಿ "ನಮಸ್ಕಾರ!" ಎಂದೆಂದು ಹೊರಬಿದ್ದ.

ಲೇಸ್ ಕಫ್‌ನ ಆಗಂತುಕ, ನ್ಯಾಯಮೂರ್ತಿ ಹ್ಯಾರಿಸನ್. ಅವನೊಡನೆ ಮಾತನಾಡಲಿಷ್ಟಪಡದೆ ಪೀಟರ್, ಕೆಲಸದ ಕೊಠಡಿಗೆ ತೆರಳಿದ. ಮಾರಿಸ್‌ನಂತೆ ಹ್ಯಾರಿಸನ್ ಕೂಡ ರಾಜಪ್ರತಿನಿಧಿ ಮಂಡಲದ ಹನ್ನೆರಡು ಸದಸ್ಯರಲ್ಲೊಬ್ಬ. ಷರೀಫ್, ಸುಂಕದ ತನಿಖಾಧಿಕಾರಿ ಸ್ಥಾನಗಳಿಂದ ಈಗ ನೌಕಾ ನ್ಯಾಯಮಂದಿರದ ನ್ಯಾಯ ಮೂರ್ತಿ ಸ್ಥಾನಕ್ಕೆ ಏರಿದ್ದ. ಅವನ ಈ ಅಧಿಕಾರಾವಧಿಯಲ್ಲಿ ಆಗಲೆ ಎಷ್ಟೋ ಮಂದಿ ಕಳ್ಳ ಸಾಗಾಣಿಕೆಗಾರರು ಗಲ್ಲಿಗೇರಿದ್ದರು. ೪೦ ನೇ ವಯಸ್ಸಿನಲ್ಲಿ ರಿಕಾರ್ಡರ್ ಅಧಿಕಾರವನ್ನು ನಿರ್ವಹಿಸಿದ್ದ. (ಎಂದರೆ ನಗರದ ಕ್ರಿಮಿನಲ್ ಕೋರ್ಟುಗಳ ಶ್ರೇಷ್ಠನ್ಯಾಯಾಧಿಪತಿ) ಆದರೆ ಹಣವಂತನಲ್ಲ. ಬರುತ್ತಿದ್ದ ಶುಲ್ಕ ಅಲ್ಪ. ಆದಾಯದಲ್ಲಿ ಬಹು ಪಾಲನ್ನು ಬಟ್ಟೆಗಳ ಮೇಲೆ ಖರ್ಚು ಮಾಡುತ್ತಿದ್ದನೇನೋ.

ಮಾತು ಅರಳು ಹುರಿದ ಹಾಗೆ. "ಗವರ್ನರಿಗೆ ಸಮ್ಮತವಲ್ಲದ ವಿಷಯಗಳನ್ನೊಳಗೊಂಡ ಪತ್ರಿಕೆಯನ್ನು ನೀವು ಹೊರಡಿಸಲಿರುವಿರೆಂಬ ವದಂತಿಯನ್ನು ಕೇಳಿದೆ."

ಬ್ರಾಡ್‌ಫರ್ಡ್ ಬೆಚ್ಚಿ ಕಣ್ಣಿನ ರೆಪ್ಪೆಗಳನ್ನು ಪಟಪಟನೆ ಆಡಿಸಿದ. ತನ್ನ ಕೈಯಲ್ಲಿ ಇನ್ನೂ ಇದ್ದ ಮಾರಿಸ್‌ನ ಲೇಖನದ ಕಡೆಗೊಮ್ಮೆ ನೋಡಿದ. ತತ್‌ಕ್ಷಣ ಅದನ್ನು ಮಡಿಚಿ ಜೇಬಿಗೆ ಸೇರಿಸಿದ. "ಈ ನಗರದಲ್ಲಿ ವದಂತಿಗೆ ಬಲು ಬೇಗ ರೆಕ್ಕೆ ಬರುವಂತೆ ಕಾಣುತ್ತದೆ. ಏನು ಪ್ರಕಟಿಸಬೇಕೆಂಬುದನ್ನು ನಾನಿನ್ನೂ ನಿರ್ಧರಿಸಿಯೇ ಇಲ್ಲ, ಆಗಲೆ ವದಂತಿ. ನಿಮಗೀವಿಷಯವನ್ನು ತಿಳಿಸಿದವರಾರು?"

ನ್ಯಾಯ ಮೂರ್ತಿಯ ಕಣ್ಣುಗಳು ಸಿಟ್ಟನಿಂದ ಸಣ್ಣಗಾದವು. ಆದರೆ ತುಟಿಯ ಮೇಲೆ ಮುಗುಳುನಗೆ ಅರಳಿತು.

"ನಿಮಗೆ ಸಹಾಯ ಮಾಡಲು ನನಗೆ ತುಂಬಾ ಇಷ್ಟ. ಈಗತಾನೆ ಮಡಿಚಿ ನೀವು ಜೇಬಿಗೆ ಸೇರಿಸಿದ ಕಾಗದವನ್ನು ನನಗೆ ತೋರಿಸುವಿರಾದರೆ?" ನ್ಯಾಯ ಮೂರ್ತಿಯ ಕೈ ಮುಂದೆ ಚಾಚಿತು.

ಬ್ರಾಡ್‌ಫರ್ಡ್ ಹಿಂದೇಟು ಹಾಕಿದ. ನ್ಯಾಯಮೂರ್ತಿಯ ಮುಖದಲ್ಲಿ ಕೋಪ ಪ್ರತ್ಯಕ್ಷವಾಯಿತು.

"ನೀವೂ ನಿಮ್ಮ ಪಾಲುಗಾರರೂ ಈಗಾಗಲೆ ಅಧಿಕಾರಿಗಳಿಗೆ ಸಮ್ಮತವಲ್ಲದ ಒಂದು ಪುಸ್ತಕ ಪ್ರಕಟಿಸಿದೀರಿ. ರಾಜಮನ್ನಿತ ಮುದ್ರಕನೆಂಬ ಗೌರವವನ್ನು, ಅದರ ಜೊತೆ ಸಲ್ಲುವ ವಾರ್ಷಿಕವೇತನವನ್ನು ಕಳೆದುಕೊಳ್ಳಬೇಕೆಂಬುದು ನಿಮ್ಮ ಆಸೆಯಲ್ಲ ತಾನೆ?"

ಸಿಟ್ಟಿನ ಆವೇಶದಿಂದ ಬ್ರಾಡ್‌ಫರ್ಡನ ಮುಖ ಬಿಳಿಚಿಕೊಂಡಿತು ಮಾತಿಲ್ಲದೆ ಜೇಬಿನಿಂದ ಆ ಕಾಗದವನ್ನು ತೆಗೆದುಕೊಟ್ಟ.

ಬ್ರಾಡ್‌ಫರ್ಡನ ಶರಣಾಗತಿಯಿಂದ ಸಂತುಷ್ಟನಾದ ನ್ಯಾಯಮೂರ್ತಿ, ತನ್ನ ಬಂಗಾರದ ಹಿಡಿಯ ಬೆತ್ತವನ್ನು ಕೊಂಕುಳಿಗೆ ಸೇರಿಸಿ, ಮುಗುಳು ನಗೆ ಬೀರಿದ. ಆ ಕಾಗದವನ್ನು ಅಲಕ್ಷ್ಯವಾಗಿ ಬೆರಳುಗಳಿಂದ ಬಿಚ್ಚಿ ಕಣ್ಣು ಹಾಯಿಸಿ, ಪುಸ್ತಕ ತುಂಬಿದ ಪೆಟ್ಟಿಗೆಯೊಂದರ ಮೇಲಕ್ಕೆಸೆದ.

"ನನ್ನ ಊಹೆಯಂತೆಯೇ ಇದೆ....ನಮ್ಮ ಗವರ್ನರರ ನೀತಿಯೊಂದರ ಉಗ್ರ ಖಂಡನೆಯಿದು. ನೀವೇನಾದರೂ ಇದನು ಮುದ್ರಿಸಿದರೆ, ನಿಮ್ಮ ಭವಿಷ್ಯ ಹಾಳಾದಂತೆ!"

ಇನ್ನೊಂದು ಮಾತನ್ನೂ ಆಡದೆ ನ್ಯಾಯಮೂರ್ತಿ ಮುದ್ರಣಾಲಯದಿಂದ ಹೊರಕ್ಕೆ ಧಾವಿಸಿಬಿಟ್ಟ.

ಅವನು ಹೋದ ಮೇಲೆ ಬ್ರಾಡ್‌ಫರ್ಡ್ ಪೀಟರ್ ಕಡೆ ತಿರುಗಿ ದೃಢಮಾತುಗಳನ್ನು ಉಚ್ಚರಿಸಿದ. "ನಾನು ಪತ್ರಿಕೆಯನ್ನೇ ಹೊರಡಿಸದಂತೆ, ಬೆದರಿಕೆ ಹಾಕುತ್ತಿದ್ದಾನೆ! ಆಗಲಿ, ಈ ಸವಾಲನ್ನು ಒಪ್ಪಿಕೊಳ್ಳುತ್ತೇನೆ. ಮುಂದಿನ ಸೋಮವಾರವೇ ಮೊದಲ ಸಂಚಿಕೆ ಹೊರಬರುತ್ತದೆ!"

"ಅದೇ ಸರಿ" ಪೀಟರ್ ಹರ್ಷೋದ್ಗಾರ ಮಾಡಿದ.

"ಮಾರಿಸ್‌ನ ಲೇಖನವನ್ನು ಮುಖ ಪುಟದಲ್ಲೇ ಹಾಕೋಣ!"

"ಜೈಲಿಗೆ ಹೋಗಬೇಕಾಗುತ್ತದೆ. ಆ ಕೆಲಸ ಮಾತ್ರಾ ಬೇಡ ಪೀಟರ್. ನನಗೀಗಾಗಲೆ ೬೩ ವರ್ಷ. ಈ ಜಗತ್ತಿನಲ್ಲಿ ಸುಖವಾಗಿ ಬಾಳುವ ಮಾರ್ಗ ಆವುದೆಂದು ನಾನೀಗಾಗಲೇ ಅರಿತಿದ್ದೇನೆ"

"ಆದರೆ, ಬ್ರಾಡ್‌ಫರ್ಡ್! ಮಾರಿಸ್ ಹೇಳುವ ಮಾತು ನಿಜವಿರಬಹುದು, ಇನ್ನು ಹತ್ತು ವರ್ಷಗಳಲ್ಲಿ ನ್ಯೂಯಾರ್ಕ್ ಹಸಿವಿನ ಮಾರಿಗೆ ತುತ್ತಾಗಬಹುದು! ಮಂಡಲದ ಒಬ್ಬ ಸದಸ್ಯ ಇನ್ನೊಬ್ಬ ಸದಸ್ಯನ ಲೇಖನಕ್ಕೆ ಕತ್ತರಿ ಪ್ರಯೋಗ ಮಾಡಲೆಳೆಸುವುದು ಯಾವ ನ್ಯಾಯ?"

ಬ್ರಾಡ್‌ಫರ್ಡ್ ತಲೆಯಲ್ಲಾಡಿಸಿದ. "ಆ ಸಂಗತಿಯನ್ನು ಅವರಿಬ್ಬರೂ ತಮ್ಮ ತಮ್ಮಲ್ಲೇ ನಿರ್ಣಯಿಸಿಕೊಳ್ಳಲಿ. ಅವರಿಬ್ಬರೂ ಒಪ್ಪಿದ್ದನ್ನು ನಾನು ಪ್ರಕಟಿಸುತ್ತೇನೆ. ನನ್ನ ಪತ್ರಿಕೆಯಲ್ಲಿ ಗವರ್ನರ್ ಮೇಲಿನ ಟೀಕೆಗಳಿಗೆ ಎಡೆಯಿಲ್ಲ"

ಪೀಟರಿಗೆ ತನ್ನ ತಲೆಯ ಮೇಲೊಂದು ಮೂಟೆಯುರುಳಿ ತಲೆ ಸುತ್ತಿದಂತಾಯಿತು. ವ್ಯಸನವದನದಿಂದ ಕೆಲಸದ ಕೊಠಡಿಗೆ ಹಿಂತಿರುಗಿದ. ಫಿಲಿಡೆಲ್ಫಿಯದಲ್ಲಿ ಆಂಡ್ರ್ಯೂ ಬ್ರಾಡ್‌ಫರ್ಡ್ ನಡೆಸುತ್ತಿದ್ದ ಪತ್ರಿಕೆಯಂತಲ್ಲದೆ, ಇಲ್ಲಿನ ಪತ್ರಿಕೆ ಆಗಲೇ ಸ್ವಾರಸ್ಯ ರಹಿತವಾಗಿರುವಂತೆ ತೋರಿತು.

"ನಿಮಗಾಗಲೇ ಒಮ್ಮೆ ಅನುಭವವಾಗಿರಬೇಕು" ಪೀಟರ್ ಸಮಾಧಾನದ ಮಾತನಾಡಿದ.

ಬ್ರಾಡ್‌ಫರ್ಡ್ ಹೌದೆಂದು ತಲೆತೂಗಿದ.

"ಮತ್ತೊಮ್ಮೆ ತೊಂದರೆಗೆ ಸಿಕ್ಕುವುದು ನಿಮಗಿಷ್ಟವಿಲ್ಲ. – ಬಹುದಿನಗಳ ಕೆಳಗೆ ಫಿಲಿಡೆಲ್ಫಿಯಾದಲ್ಲಿ ಅನುಭವಿಸಿದಂತೆ"

ಬ್ರಾಡ್‌ಫರ್ಡನ ಕಣ್ಣುಗಳು ಪೀಟರ್ ಕಡೆ ಮಿಂಚಿದವು. ಪೀಟರಿಗೆ ಈ ವಿಷಯ ಎಷ್ಟು ಮಟ್ಟಿಗೆ ಗೊತ್ತಿರಬಹುದು ಎಂಬ ಆಲೋಚನೆ ಸುಳಿಯಿತು. ಮುದುಕ ಮಾತನಾಡಲೆಂದು ಪೀಟರ್ ಕಾದರೂ ಆತ ಬಾಯಿ ಬಿಡಲಿಲ್ಲ.

ಈಗಲೂ ಪ್ರಯೋಜನವಾಗಲಿಲ್ಲವಲ್ಲ ಎಂದು ಚಿಂತಿಸಿದ ಪೀಟರ್. ಮಾಲಿಕನ ಒಳಗುಟ್ಟು ಈಗಲಾದರೂ ಬಯಲಿಗೆ ಬಂದೀತೆಂದು ಭಾವಿಸಿದ್ದ.

ಮತ್ತೇನೋ ಆಲೋಚನೆ ಹೊಳೆಯಿತು. ಪೆಟ್ಟಗೆಯ ಮೇಲಿದ್ದ ಪ್ರಬಂಧವನ್ನು ಕೈಗೆತ್ತಿಕೊಂಡು "ಇದನ್ನು ಮನೆಗೊಯ್ದು ಓದಲೇ ಸಾರ್?" ಎಂದು ಪ್ರಶ್ನಿಸಿದ.

"ಓ, ಬೇಕೆನಿಸಿದರೆ ಅದನ್ನು ಬೆಂಕಿಗೂ ಹಾಕು" ಬ್ರಾಡ್‌ಫರ್ಡ್ ಭುಜ ಹಾರಿಸಿದ.

—— ——

# ಅಧ್ಯಾಯ ೭

## ಪತ್ರಿಕೆಯ ಜನನ

ನಗರದ ಮೊಟ್ಟ ಮೊದಲನೆಯ ಪತ್ರಿಕೆಯನ್ನು ಸ್ವಾಗತಿಸುವುದಕ್ಕಾಗಿ ೧೭೭೫ ನೇ ಇಸವಿ ನವೆಂಬರ್ ೧ ನೇ ತಾರೀಖು ಸೋಮವಾರ ಬೆಳಿಗ್ಗೆ ಬೈಬಲ್ ತೂಗು ಹಲಗೆಯ ಮುಂದೆ ಹ್ಯಾನೋವರ್ ಚೌಕದಲ್ಲಿ ಜನರ ಗುಂಪು ಸೇರಿತ್ತು.

ಬ್ರಾಡ್‌ಫರ್ಡ್ ಬಾಗಿಲು ತೆರೆದು "ನ್ಯೂಯಾರ್ಕ್ ಗೆಜೆಟ್" ಪತ್ರಿಕೆಯ ಒಂದಷ್ಟು ಪ್ರತಿಗಳನ್ನು ಹೊರ ಹಿಡಿದಾಗ, ಕೆಲಮಂದಿ ಜಯಘೋಷ ಮಾಡಿದರು. ಇಬ್ಬರು ಮೂವರು ಹುಡುಗರು ತಮ್ಮ ಟೋಪಿಯನ್ನು ಮೇಲಕ್ಕೆಸೆದು ಆತುಕೊಂಡರು. ಗುಂಪು ಮುಂದಕ್ಕೆ ನುಗ್ಗಿ ಬಂತು.

ಅರ್ಧ ಗಂಟೆ ನಂತರ, ಇಬ್ಬರು ಅಪ್ರೆಂಟಿಸ್‌ಗಳೂ ಹೆಜ್ಜೆ ಮುಳುಗುವಷ್ಟು ಉದುರಿದ ಎಲೆಗಳಿಂದ ತುಂಬಿದ್ದ ಬೀದಿಗಳಲ್ಲಿ ಓಡಿದರು. ಪತ್ರಿಕೆಗಳನ್ನು ಗಾಳಿಯಲ್ಲಿ ಬೀಸುತ್ತ, ಹರ್ಷೋದ್ಗಾರಗಳನ್ನು ಕೂಗುತ್ತ, ಇನ್ನೂ ಪತ್ರಿಕೆ ತಲುಪದೆ ಇದ್ದ ಚಂದಾದಾರರ ಮನೆಗಳಿಗೆ ಬೇಗ ಬೇಗನೆ ಪ್ರತಿಗಳನ್ನು ತಲುಪಿಸಿದರು.

ಮುದ್ರಣಾಲಯದಲ್ಲೆಲ್ಲ, ಈ ಸಂತೋಷದಲ್ಲಿ ಭಾಗಿಯಾಗದಿದ್ದವನು ಪೀಟರ್ ಜೆಂಗರ್ ಒಬ್ಬನೇ. ಪತ್ರಿಕೆಗಳನ್ನು ಮುದ್ರಿಸುತ್ತಿದ್ದಾಗ ಅನ್ಯಾಯವಾಗಿ ಕಾಲಹರಣಮಾಡುತ್ತಿರುವಂತೆ ಅವನಿಗನ್ನಿಸಿತು. ಅಂಜುಕುಳಿ ಬ್ರಾಡ್‌ಫರ್ಡನಿಗಾಗಿ ದುಡಿದು ಸೋತಿದ್ದ. "ನಾನೆಂದಾದರೂ ಸ್ವತಂತ್ರವಾಗಿ ಮುದ್ರಣಾಲಯವನ್ನು ಇಡಬಲ್ಲೆನಾದರೆ, ನನಗೆ ಯಾವುದು ಸಮ್ಮತವೋ ಅದನ್ನೇ ಮುದ್ರಿಸುತ್ತೇನೆ! ಇಂಥ ವ್ಯರ್ಥ ಪುರಾಣದ ಬದಲು, ನ್ಯೂಯಾರ್ಕಿನ ಜನರೂ

ಫಿಲಿಡೆಲ್ಫಿಯಾದ ಜನರಂತೆಯೇ ಸತ್ಯವನ್ನು ಓದಿ ತಿಳಿಯಲು ಅವಕಾಶ ವಾಗುತ್ತದೆ" ಎಂದು ಮನಸ್ಸಿನಲ್ಲೇ ಅಂದುಕೊಂಡ.

ಅವನಾಗಲಿ, ಇನ್ನೊಬ್ಬ ಕೆಲಸಗಾರನಾಗಲಿ ಅಂದಿನಷ್ಟು ಶ್ರಮ ವಹಿಸಿ ಹಿಂದೆಂದೂ ದುಡಿದಿರಲಿಲ್ಲ. ಹತ್ತುಗಂಟೆಯ ಹೊತ್ತಿಗೆ ಗಿರಾಕಿ ಇದ್ದುದಕ್ಕಿಂತಲೂ ಹೆಚ್ಚು ಪ್ರತಿ ಮುದ್ರಿಸಿದ್ದರು.

"ಪೀಟರ್, ಪೇಪರ್ ಕಳಚಿ, ಗೆಜೆಟ್ ಪ್ರತಿಗಳನ್ನು ತೆಗೆದು ಕೊಂಡು ಅಂಗಡಿಗಳಿಗೂ ಲಾಯರುಗಳ ಕಛೇರಿಗಳಿಗೂ ಹಂಚು. ಇನ್ನೂ ಚಂದಾದಾರರಾಗದಿರುವ ಮುಖ್ಯರ ಪಟ್ಟಿ ಇಲ್ಲಿದೆ. ಅವರೊಬ್ಬ ಬ್ಬರಿಗೂ ಒಂದೊಂದು ಮಾದರಿ ಪ್ರತಿ ಹೋಗಲಿ. ಯಾರನ್ನೂ ಮರೆಯುವುದು ಬೇಡ." ಎಂದು ಬ್ರಾಡ್‌ಫರ್ಡ್ ಸರಸರನೆ ನುಡಿದ.

ನವೆಂಬರ್ ತಿಂಗಳ ಸ್ವಚ್ಛ ಚುರುಕು ಹಗಲಿನಲ್ಲಿ ಜೆಂಗರ್ ಹೊರಹೊರಟ. ಸಮುದ್ರದ ಗಾಳಿ ಮುಖದ ಮೇಲೆ ಬೀಸಿದಾಗ ಅವನಿಗೆ ಬಹು ಹಿತವೆನಿಸಿತು.

ಪತ್ರಿಕೆಗಳನ್ನು ಹಂಚುತ್ತಾ ಬ್ರಾಡ್‌ವೇ ಸ್ಟ್ರೀಟಿನಲ್ಲಿ ತಮ್ಮ ಸುಂದರ ಮನೆಯ ಪಕ್ಕದಲ್ಲಿಯೇ ಇದ್ದ, ಸತಿ ಅಲೆಕ್ಸಾಂಡರಳ ಅಂಗಡಿಗೆ ಬಂದ. ನ್ಯೂಯಾರ್ಕಿನ ಪ್ರಮುಖ ವ್ಯಾಪಾರಿಗಳ ಸಂಖ್ಯೆ ಆಗ ಕೇವಲ ಹದಿನೈದು. ಆಪೈಕಿ ೯ ಜನ ಸ್ತ್ರೀಯರು. ಅಂಗಡಿಯಲ್ಲಿ ಹೊಸ ಬಟ್ಟೆಯ ವಾಸನೆ ತುಂಬಿತ್ತು. ಪೀಟರ್ ಗೆಜೆಟ್ಟಿನ ಪ್ರತಿ ಯೊಂದನ್ನು ಕೌಂಟರ್ ಮೇಲೆ ಇಟ್ಟು ತಳ್ಳಿದ.

ಸತಿ ಅಲೆಕ್ಸಾಂಡರ್ ಮುಗುಳು ನಗುತ್ತ "ಸಂತೋಷವಪ್ಪ. ಒಂದು ನಿಮಿಷ ಇರು. ಈ ಒಲೆಯ ಮುಂದೆ ಸ್ವಲ್ಪ ಬೆಂಕಿ ಕಾಯಿಸಿಕೋ. ನನ್ನ ಗಂಡನಿಗೆ ಇದನ್ನು ನೋಡಬೇಕೆಂಬ ಅಭಿಲಾಷೆ ಯಿದೆ ............ಜೇಂಸ್ !" ಎಂದಳು.

ಆಳೆತ್ತರದ ಗಜಿಬಿಜಿ ಮನುಷ್ಯನೊಬ್ಬ ಅಂಗಡಿಯೊಳಕ್ಕೆ ಗಜಿ ಬಿಜಿಯಾಗಿಯೇ ಸಾಗಿಬಂದ. ಆತನದು ಪ್ರಸನ್ನವದನ. ನೋಡು ತ್ತಿದ್ದಂತೆಯೇ ಪೀಟರನಿಗೆ ಅವನ ಬಗೆಗೆ ವಿಶ್ವಾಸ ಅಂಕುರಿಸಿತು. "ಹೊಸ ಪತ್ರಿಕೆಯೇನು !" ಅಲೆಕ್ಸಾಂಡರ್ ಸಂತೋಷ ವ್ಯಕ್ತಪಡಿಸಿದ

"ಎಳೆ ಮಗುವಿನ ಹಾಗೆ – ಹಲ್ಲಿಲ್ಲ ತಾನೆ!"

ಈ ವಿನೋದದ ಮಾತಿನಿಂದ ಪೀಟರಿನ ಮುಗುಳುನಗೆಗೆ ವಿಷಾದಬೆರೆತಿತು. "ಹೌದು ಸರ್, ಕಚ್ಚುವುದಿಲ್ಲವೆಂಬ ಭರವಸೆಯುಂಟು."

ಜೇಂಸ್ ಅಲೆಕ್ಸಾಂಡರನ ಶೊಬಚುತನ ಅವನ ಸಾಮರ್ಥ್ಯದ ಮೇಲೆ ಮುಸುಕೆಳೆದಂತಿತ್ತು. ಆತ ನ್ಯೂಯಾರ್ಕಿನ ಸುವಿಖ್ಯಾತ ಲಾಯರ್. ಅಷ್ಟೇ ಅಲ್ಲ ರಾಜಪ್ರತಿನಿಧಿ ಮಂಡಲದಲ್ಲೂ ಒಬ್ಬ ಸದಸ್ಯ.

ಬೀದಿ ಬಾಗಿಲು ತೆರೆಯಿತು. ಲೂಯ್ಯಿ ಮಾರಿಸ್ ಜೂನಿಯರ್ ಒಳಕ್ಕೆ ಹೆಜ್ಜೆ ಇಟ್ಟ. "ನಾಚಿಕೆಗೆಟ್ಟ ಈ ಹೊಲಸನ್ನು ನೋಡಿ" ಎಂದು ಗೆಜೆಟ್ಟಿನ ಪ್ರತಿಯೊಂದನ್ನು ಬೀಸುತ್ತ ನುಡಿದ.

ಈ ಇಬ್ಬರು ಗೆಳೆಯರೂ, ಒಟ್ಟಿಗೆ ಭೋಜನ ಮಾಡುತ್ತಾರೆ ಎಂದು ಜೆಂಗರ್ ಊಹಿಸಲು ಸಾಧ್ಯವೇ ಇರಲಿಲ್ಲ. ಮುದ್ರಣ ಶಾಲೆಯಲ್ಲಿ ತಾನು ಕಂಡ ತರುಣ ಮಾರಿಸ್, ಆಕಾರದಲ್ಲಿ ಅಲೆಕ್ಸಾಂಡರನ ಅರ್ಧದಷ್ಟೂ ಇರಲಿಲ್ಲ. ತರುಣ ರಾಜಕಾರಣಿಯ ಅರಕ್ತ ತೆಳುಮುಖದಲ್ಲಿ ಗಾಂಭೀರ್ಯ ತೀವ್ರತೆ ತುಂಬಿತ್ತು. ಅಲೆಕ್ಸಾಂಡರ್ ಮಾತ್ರಾ ಸದಾ ಸಂತೋಷಚಿತ್ತನಾಗಿರುವಂತೆ, ಬಿಡುವಿದ್ದವನಂತೆ ಕಾಣುತ್ತಿದ್ದ.

"ಪೀಟರ್ ಜೆಂಗರ್! ನಿನ್ನ ಸಮ್ಮುಖದಲ್ಲಿ ಆ ಮಾತನ್ನು ಹೇಳಿದುದಕ್ಕಾಗಿ ಕ್ಷಮಿಸು" ಎಂದು ಮಾರಿಸ್ ಬೆಂಕಿಯೊಲೆಯ ಮುಂದೆ ನಿಂತಿದ್ದ ಪೀಟರನನ್ನು ಕಂಡು ನುಡಿದ.

"ಅದಕ್ಕೇನು ಸಾರ್, ನನಗೂ ಬಹಳ ವೇದನೆಯಾಗಿದೆ ಅದರಿಂದ" ಪೀಟರ್ ಸಮಾಧಾನದ ಮಾತನಾಡಿದ.

ಒಬ್ಬರಾದಮೇಲೊಬ್ಬರ ಮುಖವನ್ನು ನೋಡಿದ ಪೀಟರನ ಮನಸ್ಸಿನಲ್ಲಿ ಏನೋ ಹೊಳೆಯಿತು. ಇಬ್ಬರೂ ಶ್ರೀಮಂತರು, ಪ್ರಭಾವಶಾಲಿಗಳು, ತನ್ನಂತೆಯೇ ಯೋಚಿಸುವವರು. ಅಂದರೆ ಅವರೇ ತನಗೊಂದು ಭಾರಿ ಅವಲಂಬನವಾಗಬಹುದು. ಸಹಾಯ ಮಾಡ

ಬಹುದು. ಜೇಬಿನೊಳಗಿಂದ ಹಸ್ತಪ್ರತಿಯನ್ನು ಹೊರಕ್ಕೆಳೆದು "ನನ್ನದೇ ಮುದ್ರಣಶಾಲೆ ಇದ್ದಿದ್ದರೆ, ಸಂತೋಷದಿಂದ ಈ ಲೇಖನ ವನ್ನು ಮುದ್ರಿಸುತ್ತಿದ್ದೆ" ಎಂದ.

ಅವರಿಬ್ಬರೂ ಜಗ್ಗನೆ ಅವನೆಡೆ ನೋಡಿದರು. ಇಬ್ಬರಿಗೂ ಅರ್ಥವಾಗಿರಬೇಕು ಎನ್ನಿಸಿತು ಪೀಟರಿಗೆ. ಒಂದು ನಿಮಿಷ ಕಾಲ ಯಾರೂ ತುಟಿ ಎರಡು ಮಾಡಲಿಲ್ಲ. ಅವನ ಸಲಹೆಯನ್ನು ಅವರು ಪರ್ಯಾಲೋಚಿಸುತ್ತಿರುವಂತೆ ತೋರಿತು. ಅವನೂ ಕಾದ. ಎಂಥಾ ನಿರ್ಧಾರಕ್ಕೆ ಬಂದಾರು ?

ಮೂವರೂ ಸ್ವಲ್ಪ ಹೆಚ್ಚು ಕಮ್ಮಿ ಸಮವಯಸ್ಕರು. ಬಾಹ್ಯ ಸ್ವರೂಪ ಮಾತ್ರ ಭಿನ್ನ. ಜೆಂಗರ್ ಕೆಲಸಗಾರನ ಉಡುಪನ್ನು ಧರಿಸಿದ್ದ. ತಲೆಯ ಮೇಲೆ ಮರಳು ಬಣ್ಣದ ಬೆತ್ತಲೆ ಕೂದಲು. ಉಳಿದಿಬ್ಬರೂ ಕಂದು ಬಣ್ಣದ ಸೂಟುಗಳನ್ನು ಹೆಚ್ಚು ಉದ್ದವಿಲ್ಲದ ಕುದುರೆ ಕೂದಲಿನ ಟೋಫನ್‌ಗಳನ್ನೂ ಧರಿಸಿದ್ದರು.

ಅವರಿಬ್ಬರೂ ತಮ್ಮ ಕೈಲಿದ್ದ ನ್ಯೂಯಾರ್ಕ್ ಗೆಜೆಟ್ಟಿನ ಪ್ರತಿ ಗಳನ್ನು ನೋಡುತ್ತಿದ್ದರು. ಪುಟಕ್ಕೆ ಎರಡು ಕಾಲಂಗಳು ; ೨೧ ಅಂಗುಲ ಅಗಲ ೧೨ ಅಂಗುಲ ಉದ್ದದ ನಾಲ್ಕು ಪುಟಗಳ ಪತ್ರಿಕೆ. ಇಂಗ್ಲೆಂಡಿ ನಿಂದ ಬಂದ ಸುದ್ದಿಗಳು–ರಾಜನಿಗೆ ಮತ್ತು ರಾಜಸಭೆಗೆ ಸೇರಿದವರಿಗೆ ಸಂಬಂಧಿಸಿದವು. ಯೂರೋಪಿನಿಂದ ಬಂದ ಯುದ್ಧದ ಸುದ್ದಿಗಳು. ಇತ್ತೀಚೆಗೆ ನ್ಯೂಯಾರ್ಕ್ ಬಂದರಿಗೆ ಬಂದ ಮತ್ತು ಅಲ್ಲಿಂದ ಹೊರಟ ಹಡಗುಗಳ ಪಟ್ಟಿ – ಇಷ್ಟು ಬಿಟ್ಟರೆ ಅದರಲ್ಲಿ ಇನ್ನೇನೂ ಇರಲಿಲ್ಲ.

"ಜೆಂಗರ್, ನಿನ್ನದೇ ಮುದ್ರಣ ಶಾಲೆ ನಿನಗೆ ಬೇಕಿದ್ದರೆ, ನೀನೊಂದನ್ನೇಕೆ ಆರಂಭಿಸಬಾರದು?" ಮಾರಿಸ್‌ಮೌನ ಮುರಿದು ಮಾತನಾಡಿದ.

ಪೀಟರಿಗೆ ಉಸಿರು ಬಂದಂತಾಯಿತು. ಕುತ್ತಿಗೆಗೆ ಕಾವೇರಿತು. ಮೈ ಬೆವರಿತು. "ನಾನು ನನ್ನ ಹೆಂಡತಿ ಈಗಾಗಲೇ ಯೋಚಿಸಿದ್ದೇವೆ. ಮುದ್ರಣ ಯಂತ್ರ, ಅಕ್ಷರ ಮೊಳೆಗಳು, ಮತ್ತಿತರ ಮುದ್ರಣ ಸಾಮಗ್ರಿಗಳನ್ನು ಲಂಡನ್ನಿನಿಂದ ತರಿಸಲು ೯೩ ಪೌಂಡು ಬೇಕು."

ಅದನ್ನು ಪಡೆದ ಭರವಸೆ ತನಗಿಲ್ಲ ಎನ್ನುವಂತೆ ಭುಜ ಹಾರಿಸಿದ.

"ದುಡ್ಡೇನಾದರೂ ಕೂಡಿಟ್ಟಿದೆಯೇನು?" ಮಾರಿಸ್ ಕೇಳಿದ.

"ಅರ್ಧದಷ್ಟು ಕೊಡಬಲ್ಲೆ" ಪೀಟರ್ ತನ್ನ ಸ್ಥಿತಿ ಒಪ್ಪಿಕೊಂಡ.

"ಓ, ಅಲೆಕ್ಸಾಂಡರ್, ಇನ್ನುಳಿದ ಅರ್ಧವನ್ನು ನಾನು ಸಾಲವಾಗಿ ಕೊಡುತ್ತೇನೆ" ವ್ಯವಹಾರ ಇತ್ಯರ್ಥವಾಯಿತೇನೋ ಎನ್ನುವಂತೆ ಮಾರಿಸ್ ಎದ್ದು ಹೊರಡಲನುವಾದ. ಐವತ್ತು ಪೌಂಡುಗಳೆಂದರೆ ಒಂದೆರಡು ಕುದುರೆಗಳ ಬೆಲೆ, ಅವನಿಗೆ ಅದೇನು ಅಂತಹ ಗಣನಾರ್ಹ ಹಣವಲ್ಲ.

ಜಿಪುಣತನಕ್ಕೆ ಹೆಸರಾದ ಸ್ಕಾಟ್‌ಲೆಂಡಿನವನಾದ ಅಲೆಕ್ಸಾಂಡರ್ ಮನಃ ಪೂರ್ತಿ ನಕ್ಕ. "ನನ್ನ ಹಣ ಖರ್ಚುಮಾಡುವುದರಲ್ಲಿ ನೀನು ಗಟ್ಟಿಗ!"

ಮಾರಿಸ್ ತನ್ನ ಸ್ನೇಹಿತನನ್ನು ಹತ್ತಿರಕ್ಕೆ ಬರುವಂತೆ ಕೈ ಬೀಸಿ, ಜೆಂಗರ್ ಕಡೆ ತಿರುಗಿ, "ಅಲೆಕ್ಸಾಂಡರನೊಡನೆಯೂ ನನ್ನ ತಂದೆಯೊಡನೆಯೂ ಈ ವಿಷಯ ಮಾತನಾಡುತ್ತೇನೆ. ಮುದ್ರಣ ಸಲಕರಣೆಗಳಿಗೆ ಆರ್ಡರ್ ಕೊಟ್ಟುಬಿಡು. ಸ್ವತಂತ್ರ ಪತ್ರಿಕೆಯಿಲ್ಲದೆ ನ್ಯೂಯಾರ್ಕಿನ ಬಾಯಿ ಕಟ್ಟಿದೆ. ಸತ್ಕಾರ್ಯಕ್ಕಾಗಿ ನನ್ನಲ್ಲಿ ಐವತ್ತು ಪೌಂಡುಗಳು ದೊರೆಯಲಾರವೆಂದು ಯಾರೂ ಹೇಳರು." ಎಂದ. ಪೀಟರ್ ಬಳಿಗೆ ಇದ್ದಕ್ಕಿದ್ದಂತೆ ಬಂದು "ಆ ನನ್ನ ಲೇಖನ ಕೊಡು ಇಲ್ಲಿ. ಮಂಡಳದ ಇನ್ನೊಬ್ಬ ಸದಸ್ಯನೊಡನೆ ಆ ವಿಷಯ ಪ್ರಸ್ತಾಪಿಸಿದ್ದೇನೆ. ದೀರ್ಘವಾಗಿಯೂ ಚುರುಕಾಗಿಯೂ ಬರೆಯಬೇಕೆಂದಿದ್ದಾನೆ ಅವನು. ಜೆಂಗರ್ ಪತ್ರಿಕೆಯನ್ನು ಕುರಿತು ಜನ ಚರ್ಚಿಸುವಂತಾಗಬೇಕು. ಅಂತಹ ಬರವಣಿಗೆಯನ್ನು ಕೊಡುತ್ತೇನೆ!"

---

# ಅಧ್ಯಾಯ ೮

## ಸ್ವಂತ ಮುದ್ರಣಾಲಯ

ಫೆಬ್ರವರಿ ತಿಂಗಳ ಮೊದಲವಾರಕ್ಕೆ ಪೀಟರಿಗೆ ಬ್ರಾಡ್‌ಫರ್ಡ್ ಮುದ್ರಣಾಲಯದ ಋಣಾನುಬಂಧ ತಪ್ಪಿಹೋಯಿತು. ಹೊಸ ಸಾಹಸದ ಚಿಂತೆ ಅವನನ್ನು ಕಾಡತೊಡಗಿತು. ವ್ಯಾಪಾರ ಗಿಟ್ಟದಿದ್ದರೆ ಅವನೂ ಅವನ ಕುಟುಂಬವೂ ಹೊಟ್ಟೆಗಿಲ್ಲದೆ ನರಳಬೇಕಾಗುವುದು.

ಪೀಟರನನ್ನು ಬೀಳ್ಕೊಡಲು ಸತಿ ಬ್ರಾಡ್‌ಫರ್ಡ್ ಪ್ರಯಾಸದಿಂದ ಬಂದಳು. ಗಂಡನಷ್ಟೇ ವಯಸ್ಸಿನ ಆಕೆ ಅನಾರೋಗ್ಯದಿಂದ ಕಂದಿದ್ದಳು. ಪೀಟರ್ ಪ್ರೀತಿಯಿಂದ ಅವಳ ಸುತ್ತ ಕೈ ಹಾಯಿಸಿದ. ತನ್ನ ತಾಯಿಗಿಂತಲೂ ಹೆಚ್ಚಿನ ವಾತ್ಸಲ್ಯದಿಂದ ಆಕೆಯನ್ನು ಕಂಡುಕೊಂಡಿದ್ದ.

ಬೀಳ್ಕೊಡುಗೆಯ ಕಾಲದಲ್ಲಿ ಕೆಲವು ಬುದ್ಧಿವಾದದ ಮಾತುಗಳನ್ನು ಬ್ರಾಡ್‌ಫರ್ಡ್ ಹೇಳಿದ “ನೀನು ಜೈಲಿಗೆ ಹೋದರೆ ಆಶ್ಚರ್ಯವಿಲ್ಲ! ಇಂದಿನಂತೆ ವಿವೇಕ ಶೂನ್ಯಮಾರ್ಗದಲ್ಲಿ ಹೆಜ್ಜೆ ಹಾಕಿದರೆ ಹಾಗಾಗುವುದು ಖಚಿತ. ನಿನ್ನ ಕಛೇರಿಗೆ ಬರಬಹುದಾದ ವಿವಾದಗ್ರಸ್ತ ರಾಜಕೀಯ ಲೇಖನಗಳನ್ನು ಪ್ರಕಟಿಸುತ್ತ ಹೋದರೆ, ಕರಾರು ಬಂಧಿತ ಸೇವಕರೂ, ಅಪ್ರೆಂಟಿಸ್‌ಗಳೂ, ದರಿದ್ರ ಕೆಲಸಗಾರರೂ ದಂಗೆಯೆದ್ದು ತಮ್ಮ ಮಾಲಿಕರುಗಳ ಮನೆಗಳಿಗೇ ಬೆಂಕಿ ಇಟ್ಟಾರು. ವಿವೇಕವನ್ನು ಮರೆಯಬೇಡ ಮಗು! ಸಾವಧಾನವಾಗಿ ಹೆಜ್ಜೆಹಾಕು”

ಜೆಂಗರ್ ಬಾಡಿಗೆಗೆ ತೆಗೆದುಕೊಂಡ ಚಿಕ್ಕ ಅಂಗಡಿ ನಗರ ಭವನದ ಬಳಿ ಸ್ಮಿತ್ ಬೀದಿಯಲ್ಲಿತ್ತು. (ಆ ಬೀದಿಗೆ ಈಗ ವಿಲಿಯಂ ಬೀದಿ ಎಂದು ಹೆಸರಿಡಲಾಗಿದೆ. ಮೈಡನ್ ಗಲ್ಲಿ ಮತ್ತು ಸೆಲ್ಡ್ ಬೀದಿಗಳ ನಡುವಿನ ಗೃಹಶ್ರೇಣಿ ಇರುವ ಜಾಗದಲ್ಲಿ ಆ ಅಂಗಡಿಯಿತ್ತು)

ಮರುದಿನ ಪೀಟರ್, ತನ್ನ ತಮ್ಮ ಬಡಗಿ ಜಾನ್ ಸಹಾಯದಿಂದ ಮುದ್ರಣಾಲಯವನ್ನು ಜೋಡಿಸಿದ. ತರುಣ ಮಾರಿಸ್ ತನ್ನ ಶ್ವೇತ ವರ್ಣದ ಚಿಕ್ಕ ಕೈಗಳಲ್ಲಿ ವಿಸ್ತರಿಸಿದ ಲೇಖನದ ಹಸ್ತಪ್ರತಿಯನ್ನು ಹಿಡಿದು ಬೀಸುತ್ತ ಧಾವಿಸಿ ಬಂದ.

"ಬರೆಹಗಾರನ ಹೆಸರು ಹಾಕದೆ ಲೇಖನವನ್ನು ಪ್ರಕಟಿಸಬೇಕಾಗಿದೆ!" ಎಂದು ವಿಷಾದ ಸೂಚಿಸಿದ. "ನನ್ನ ಗೆಳೆಯ ಇದರಲ್ಲಿನ ಬಹುತೇಕ ಅಂಶಗಳನ್ನು ನಮ್ಮ ಶತ್ರುಗಳಿಂದಲೇ ಸಂಗ್ರಹಿಸಿದ. ಸಂಗ್ರಹಿಸಬೇಕಾದ ಇತರ ಅಂಶಗಳು ಇನ್ನೂ ಇವೆ; ಆದ್ದರಿಂದ ಲೇಖನ ಬರೆದವರ ಹೆಸರನ್ನು ಗೋಪ್ಯವಾಗಿಡಬೇಕಾದುದವಶ್ಯ."

ಜೆಂಗರ್ ಆ ಪ್ರಬಂಧವನ್ನು ಜೋಡಿಸಿದಾಗ ಅದು ೩೬ ಪುಟಗಳಷ್ಟು ಬೆಳೆಯಿತು. ಇಡೀ ನ್ಯೂಯಾರ್ಕ್ ನಗರವನ್ನೇ ಆ ಲೇಖನ ಬಡಿದೆಬ್ಬಿಸಿತು. ನೂರಾರು ಮಂದಿ ಅದರ ಪ್ರತಿಗಳನ್ನು ಕೊಳ್ಳಲು ಜೆಂಗರನ ಅಂಗಡಿಗೆ ಬಂದರು. ಆದರೆ ಯಾವ ಗುಂಪೂ ಯಾವ ಮನೆಗೂ ಬೆಂಕಿ ಇಡಲಿಲ್ಲ.

ಕೆಲಕಾಲ ಜೆಂಗರನ ವ್ಯಾಪಾರ ಯಶಸ್ವಿಯಾಗಿಯೇ ನಡೆಯಿತು. ಕ್ಯಾಥರೀನನ ಚರ್ಚ್ ಗೆಳೆಯರು ನಾಲ್ಕು ಡಚ್ ಪುಸ್ತಕಗಳನ್ನೂ, ಡಚ್ ಧರ್ಮಬೋಧಕನೊಬ್ಬನ ಪ್ರವಚನಗಳ ಇಂಗ್ಲಿಷ್ ಭಾಷಾಂತರ(" ದಿ ಅಡೋರಬಲ್ ವೇಸ್ ಆಫ್ ಗಾಡ್ ")ವೊಂದನ್ನು ಮುದ್ರಣಕ್ಕಾಗಿ ತಂದುಕೊಟ್ಟರು.

ಪೀಟರೊಬ್ಬನೇ ಮಾಡಲಾಗದಷ್ಟು ಕೆಲಸವಿತ್ತು. ಅಂತೆ ಕ್ಯಾಥರೀನ್ ಕೂಡ ಕೆಲಸಕ್ಕೆ ನಿಂತಳು. ಮನೆಗೆಲಸದಿಂದ ಬಿಡುವಾದಾಗಲೆಲ್ಲ ಪುಸ್ತಕ ಹೊಲಿಯುವುದರಲ್ಲಿ ನಿರತವಾಗಿ ಪುಸ್ತಕಗಳನ್ನು ಬೈಂಡು ಮಾಡುವ ರಹಸ್ಯವನ್ನು ಕಲಿಯತೊಡಗಿದಳು. ಬಹು ಬೇಗ ಕೆಲಸ ಕಲಿಯಬಲ್ಲ ಆಕೆಯ ಸಾಮರ್ಥ್ಯ ಕಂಡು ಪೀಟರ್ ಆಶ್ಚರ್ಯಪಟ್ಟ. ವರ್ಷ ಮುಗಿವ ಹೊತ್ತಿಗೆ ಆಕೆ ಅಕ್ಷರ ಜೋಡಣೆ, ಹಾಗೂ ಮುದ್ರಣ ಒಂದನ್ನು ಬಿಟ್ಟು, ಉಳಿದೆಲ್ಲ ಮುದ್ರಣಾಲಯದ ಕೆಲಸಗಳನ್ನೂ ಕಲಿತಿದ್ದಳು.

ತಮ್ಮ ಜಾನ್ ಕೂಡ ತನ್ನ ವೃತ್ತಿಯಲ್ಲಿ ಏಳಿಗೆಗೆ ಬಂದ. ಕೊಡಿಟ್ಟ ಅಲ್ಪ ಸ್ವಲ್ಪ ಹಣದಿಂದ ಉದ್ಯೋಗಕ್ಕೆ ಅವಶ್ಯವಾದ ಹತಾರಗಳನ್ನು ಕೊಂಡು, ತನ್ನದೇ ಚಿಕ್ಕ ಫರ್ನಿಚರ್ ಕಾರ್ಖಾನೆಯನ್ನು ಆರಂಭಿಸಿದ. ತನ್ನ ಬೆಳೆಯುತ್ತಿದ್ದ ಕುಟುಂಬಕ್ಕೆ ಅಗತ್ಯವಾದ ಎರಡು ಹೊಸ ಕುರ್ಚಿಗಳಿಗೂ, ದೊಡ್ಡದೊಂದು ಊಟದ ಮೇಜಿಗೂ ಪೀಟರ್ ಆರ್ಡರ್ ಕೊಟ್ಟ.

ಅವನ ತಾಯಿ ಅನೇಕ ವರ್ಷಗಳ ಹಿಂದೆಯೇ ಇಹಲೋಕ ತ್ಯಜಿಸಿದ್ದಳು. ಅವನ ತಂಗಿಗೆ ಆಗ ೨೧ ವರ್ಷ. ಪೀಟರನ ಅನುದ್ರೇಕ ಸ್ವಭಾವದ ಗೆಳೆಯ ಫ್ರೆಡ್ ಬೆಕ್ಕರನ್ನು ಮದುವೆಯಾಗಲು ಆಕೆ ಕಟ್ಟಕಡೆಗೆ ಸಮ್ಮತಿಸಿದ್ದಳು. ಫ್ರೆಡ್ ಮತ್ತು ಕ್ಯಾಥಿ ಚಿಕ್ಕ ಹೋಟೆಲೊಂದನ್ನು ಇಟ್ಟರು. ಅಲ್ಲಿಗೆ ಬರುತ್ತಿದ್ದವರೆಲ್ಲ ಬಡವರು. ಒಂದಷ್ಟು ಬೀರ್ ಕುಡಿಯುವುದಕ್ಕೂ, ರಾಜಕೀಯ ಚರ್ಚೆ ಮಾಡುವುದಕ್ಕೂ ಅವರು ಅಲ್ಲಿಗೆ ಬರುತ್ತಿದ್ದರು.

ಪೀಟರನ ಕಷ್ಟದೆಸೆ ಆರಂಭವಾಯಿತು. ಹೆಚ್ಚು ಜನ ಹೊಸ ಮುದ್ರಕನಿಗೆ ಕೆಲಸ ಕೊಡಲಿಲ್ಲ. ಅವನ ಕೆಲಸ ಬಲು ನಿಧಾನ. ಕಾಗುಣಿತದ ತಪ್ಪುಗಳೂ ಇರುತ್ತಿದ್ದವು. ಪುಸ್ತಕಗಳ ಕಟ್ಟು (ಬೈಂಡಿಂಗ್) ಕೂಡ ಚೆನ್ನಾಗಿರುತ್ತಿರಲಿಲ್ಲ. ಮಾರಿಸ್ ಕುಟುಂಬ ಮಾತ್ರ ಅವನ ಕೈ ಬಿಡಲಿಲ್ಲ. ಶ್ರೇಷ್ಠ ನ್ಯಾಯಮೂರ್ತಿ ಲ್ಯೂಯಿ ಮಾರಿಸ್ ಒಂದು ಸ್ವಾರಸ್ಯವಾದ ಸರಕಾರಿ ಹಸ್ತಪ್ರತಿಯನ್ನು ಮುದ್ರಣಕ್ಕಾಗಿ ಗುಲಾಮನೊಬ್ಬನ ಕೈಯಲ್ಲಿ ಕಳಿಸಿದರು. ನ್ಯೂಯಾರ್ಕಿನಲ್ಲಂತೂ ಮಾಟಗಾತಿಯರಿಲ್ಲವೆಂದು ಸಾರಿ ಹೇಳುವ, ಮಾಟಗಾತಿಯರನ್ನು ಕುರಿತ ಕೋರ್ಟಿನ ಅಭಿಪ್ರಾಯವೇ, ಅದರಲ್ಲಿದ್ದ ವಿಷಯ.

ಈ ಸಂಗತಿ ಎಲ್ಲರಿಗೂ ಸ್ವಾರಸ್ಯವಾಗಿ ಕಂಡಿತು. ಜೆಂಗರ್ ಅನೇಕ ಪ್ರತಿಗಳ ಮಾರಾಟ ಮಾಡಿದ.

ಅನೇಕ ವರ್ಷಗಳವರೆಗೆ ಅವನ ಮುದ್ರಣ ವರ್ಷಕ್ಕೊಂದು ಪುಸ್ತಕ ಅಷ್ಟೆ. ಅದು ಬಿಟ್ಟರೆ ಭೂಮಿ ಕರಾರು ಪತ್ರ, ಒಪ್ಪಂದ

ಪತ್ರಗಳಂತಹ ಹಲ ಕೆಲವು ಚಿಲ್ಲರೆ ಕೆಲಸಗಳು. ಕುಟುಂಬದ ಸಂಖ್ಯೆ ಏರುತ್ತಿದ್ದಂತೆ, ಆದಾಯ ಇಳಿಯುತ್ತಿತ್ತು.

ಚರ್ಚು ವಾದ್ಯದ ತಿದಿ ಒತ್ತುವ ಕೆಲಸವನ್ನು ತಪ್ಪದೆ ಮುಂದು ವರಿಸಿಕೊಂಡು ಬಂದಿದ್ದ ಪೀಟರಿಗೆ, ಸ್ವಲ್ಪ ಹೆಚ್ಚಿನ ಸಂಬಳ ಕೊಡಲು ಚರ್ಚ್ ಅಧಿಕಾರಿಗಳು ಸಮ್ಮತಿಸಿದರು. ಅವನ ಗೆಳೆಯ ಹೆಂಡ್ರಿಕ್ ಮೈಕೇಲ್ ಕುಕ್, ವಾದ್ಯಗಾರನಾಗಿ ಸೇರಿದಾಗ, ಪೀಟರಿಗೆ ವಾದನವನ್ನು ಹೇಳಿಕೊಡತೊಡಗಿದ. ತಾನೂ ವಾದ್ಯಗಾರನಾಗುವ ದಿನಗಳನ್ನು ಪೀಟರ್ ಎದುರುನೋಡುತ್ತಿದ್ದ.

೧೭೩೪ರ ಸೆಪ್ಟೆಂಬರ್ ತಿಂಗಳ "ಅಮೆರಿಕನ್ ವೀಕ್ಲಿ ಮರ್ಕ್ಯುರಿ" ಯಲ್ಲಿ ಪ್ರಕಟವಾದ ಸುದ್ದಿಯೊಂದು ಪೀಟರನ್ನು ಬಡಿದೆಬ್ಬಿಸಿ, ನಿಲ್ಲಿಸಿತು. ಹ್ಯಾಟನ್ನು ತಲೆಗೇರಿಸಿಕೊಂಡು ತನ್ನ ಹಳೆಯ ಮಾಲಿಕ ಬ್ರಾಡ್‌ಫರ್ಡ್ ಬಳಿಗೆ ಧಾವಿಸಿದ.

ಮುದುಕ ಮುದ್ರಕನ ಮಗ, ಆಂಡ್ರ್ಯೂ ಬ್ರಾಡ್‌ಫರ್ಡ್ ಜೈಲಿನಲ್ಲಿದ್ದ. ಬೆಂಜಮಿನ್ ಫ್ರಾಂಕ್‌ಲಿನ್ ಮತ್ತು ಅವನ ಗೆಳೆಯರು ಬರೆದಿದ್ದ "ಬ್ಯುಸಿ ಬಾಡಿ ಪೇಪರ್ಸ್" ಎಂಬ ಲೇಖನ ಮಾಲೆಯನ್ನು ಅವನು ಪ್ರಕಟಿಸುತ್ತಿದ್ದ. ಈ ಪೈಕಿ ಒಂದು ಲೇಖನ ಸ್ವಾತಂತ್ರ್ಯ ವನ್ನು ಎತ್ತಿ ಹಿಡಿದು ವಂಶಪಾರಂಪರ್ಯವಾದ ಅಧಿಕಾರ ವರ್ಗಾವಣೆ ಯನ್ನು ವಿರೋಧಿಸಿತ್ತು. ಅದನ್ನು ಬರೆದವರು ಲಾಂಗ್ ಐಲೆಂಡಿನ ರೆವರೆಂಡ್ ಡಾ|| ಕ್ಯಾಂಬೆಲ್ ; ಪೀಟರನ ಮಿತ್ರರು. ಆ ಲೇಖನ ದಿಂದ ಬೆಚ್ಚಿಬಿದ್ದ ಅಧಿಕಾರಿಗಳು ಆಂಡ್ರ್ಯೂ ಬ್ರಾಡ್‌ಫರ್ಡ್‌ನನ್ನು ಬಂಧಿಸಿ ಜೈಲಿಗೆ ಹಾಕಿದ್ದರು.

ಪೀಟರ್, ಹ್ಯಾನೋವರ್ ಚೌಕದಲ್ಲಿ ಬೈಬಲ್ ಹಲಗೆ ತೂಗುತ್ತಿದ್ದ ಮುದ್ರಣಾಲಯದ ಬಾಗಿಲೊಳಗೆ ತೂರಿ, ಬ್ರಾಡ್‌ಫರ್ಡ್ ನನ್ನು ಕಂಡು "ನಿಮ್ಮ ಮಗನ ಸುದ್ದಿ. ಬಹಳ ವಿಷಾದಕರ—" ಎಂದ.

ಬ್ರಾಡ್‌ಫರ್ಡ್ ಮಧ್ಯೆ ಬಾಯಿಹಾಕಿದ. "ಬಾ, ಪೀಟರ್. ಪರಿಸ್ಥಿತಿ ಅಷ್ಟೇನೂ ಕೆಟ್ಟಿಲ್ಲ. ಆಂಡ್ರ್ಯೂ ಬುದ್ಧಿವಂತ. ಅರ್ಧ

ಗಂಟೆಯ ಕೆಳಗೆ ಬಂದ ಕಾಗದವಿದು. ತನ್ನ ಬಿಡುಗಡೆ ಕುರಿತು ಈಗಾಗಲೇ ಅವನು ಅಧಿಕಾರಿಗಳೊಂದಿಗೆ ಮಾತನಾಡಿದ್ದಾನೆ." ಹವಾ ತಂಪಾಗಿದ್ದರೂ ಬ್ರಾಡ್‌ಫರ್ಡ್ ಗಾಳಿಹಾಕಿಕೊಳ್ಳುತ್ತಿದ್ದ. "ಅದೃಷ್ಟ ಚೆನ್ನಾಗಿತ್ತು. ಈ ಪ್ರಸಂಗ ನಿನಗೊಂದು ಎಚ್ಚರಿಕೆಯಾಗಲಿ!"

ಈ ಪ್ರಸಂಗವನ್ನು ಹೇಗೆ ಗ್ರಹಿಸಬೇಕೆಂಬುದನ್ನು ಅರಿಯದೆ ಜೆಂಗರ್ ಅನುದ್ರಿಕ್ತನಾಗಿ ಹಿಂತಿರುಗಿದ. ತಾನು ಬಂಧಿತನಾದಾಗ ಹೀಗೆ ಅಧಿಕಾರಿಗಳೊಡನೆ ವ್ಯವಹರಿಸಬಹುದೆ? ಅಥವಾ ತನಗೆ ಶಿಕ್ಷೆಯಾದೀತೆ?



ಒಂದು ತಿಂಗಳನಂತರ, ಕೆಲಸವಿಲ್ಲದ ಒಂದು ದಿನ, ನಿದ್ರಾ ಮುದ್ರಿತ ಕಣ್ಣುಗಳಿಂದ "ಪೆನ್ಸಿಲ್‌ವೇನಿಯಾ ಗೆಜೆಟ್" ಪತ್ರಿಕೆಯನ್ನು ಓದುತ್ತಿದ್ದಾಗ, ಅದನ್ನು, ಹೊಸ ಪ್ರಕಾಶಕನಾಗಿ ಬೆಂಜಮಿನ್ ಫ್ರಾಂಕಲಿನ್ ಕೊಂಡಿರುವನೆಂಬ ಸುದ್ದಿಯ ಕಡೆ ಅವನ ಗಮನ ಹೋಯಿತು. ಮೊದಲ ಪುಟ ಹೀಗೆಂದು ಆರಂಭವಾಗಿತ್ತು. "ಪ್ರೆನ್ಸಿಲ್ವೇನಿಯಕ್ಕೊಂದು ಒಳ್ಳೆ ಪತ್ರಿಕೆ ಬೇಕು ಎಂದು ಬಹುಕಾಲದಿಂದ ಬಯಸುತ್ತಿರುವವರು ಅನೇಕ ಮಂದಿ ಇದ್ದಾರೆ..........."

ಜೆಂಗರಿಗೆ ವಿಸ್ಮಯವಾಯಿತು. ಎಚ್ಚೆತ್ತವನಂತೆ ಮೈ ಬಿಚ್ಚಿ, ಹೆಂಡತಿಯನ್ನು ಕೂಗಿದ. "ಕ್ಯಾಥರೀನ್. ಬಾ, ಕೇಳಿಲ್ಲಿ!" ಕಿರಿಗುಟ್ಟುತ್ತಿದ್ದ ಮಹಡಿ ಮೆಟ್ಟಲುಗಳನ್ನಿಳಿದು ಅವಳು ಬಂದಳು. ಪೀಟರ್ ಆ ಸುದ್ದಿಯನ್ನು ಓದಿದ. ಆಕೆ ನಕ್ಕಳು. "ಆಂಡ್ರ್ಯೂ ಬ್ರಾಡ್‌ಫರ್ಡ್‌ನ ಅಮೆರಿಕನ್ ಮರ್ಕ್ಯೂರಿಗಿಂತ ಉತ್ತಮ ಪತ್ರಿಕೆ ಬೇಕೆಂದು ಪೆನ್ಸಿಲ್ವೇನಿಯಾ ಜನ ಬಯಸುತ್ತಿದ್ದರೆ, ಇಲ್ಲಿ, ಅವನ ತಂದೆ ಅಂಜುಕುಳಿ ಬ್ರಾಡ್‌ಫರ್ಡ್‌ನ ಸತ್ವಹೀನ "ನ್ಯೂಯಾರ್ಕ್ ಗೆಜೆಟ್" ಗಿಂತ ಉತ್ತಮವಾದ ಪತ್ರಿಕೆ ಬೇಕೆಂದು ಇನ್ನೆಷ್ಟು ಮಟ್ಟಿಗೆ ನ್ಯೂಯಾರ್ಕ್ ಜನ ಬಯಸುತ್ತಿದ್ದಾರೆಂಬುದನ್ನು ಊಹಿಸಿನೋಡು!"

"ಸಾಕಷ್ಟು ಹಣವಿದ್ದಿದ್ದರೆ, ನಾನೊಂದನ್ನು ಮುದ್ರಿಸುತ್ತಿದ್ದೆ" ಜೆಂಗರ್ ಉತ್ಸಾಹದಿಂದ ನುಡಿದ.

ಕಾಥರೀನ್ ಪೀಟರನ ಕೈಯಲ್ಲಿದ್ದ ಪತ್ರಿಕೆಯನ್ನು ತನ್ನ ಕೈಗೆ

ತೆಗೆದುಕೊಂಡು, ಮಹಡಿಯ ಕೆಳ ಮೆಟ್ಟಲ ಮೇಲೆ ಹೋಗಿ ಕುಳಿತು, ತನ್ನ ಚಿಕ್ಕ ಮುಷ್ಟಿಯನ್ನು ಕೆನ್ನೆಗೆ ಒತ್ತು ಕೊಟ್ಟುಕೊಂಡು, ಓದ ತೊಡಗಿದಳು.

"ಆ ಮನುಷ್ಯನ ಅರ್ಥವೇ ನನಗಾಗಿಲ್ಲ" ಪೀಟರ್ ಕೊರಗಿದ. "ಫ್ರಾಂಕಲ್ರ್ಲಿ, ತರುಣ ಬ್ರಾಡ್‌ಫರ್ಡಿಗೆ ಪ್ರೈಪೋಟಿಯಾಗಿ ಫಿಲಿಡೆಲ್ಫಿಯದಲ್ಲಿ ಮುದ್ರಣಾಲಯವೊಂದನ್ನು ನಡೆಸುತ್ತಿದ್ದಾನೆ. ನಾನಿಲ್ಲಿ–ನ್ಯೂಯಾರ್ಕಿನಲ್ಲಿ, ಬ್ರಾಡ್‌ಫರ್ಡಿಗೆ ಪ್ರೈಪೋಟಿಯಾಗಿ ಮುದ್ರಣಾಲಯ ನಡೆಸುತ್ತಿದ್ದೇನೆ. ನಮ್ಮಿಬ್ಬರಿಗೂ ಇರುವ ವ್ಯತ್ಯಾಸವೆಂದರೆ ಫ್ರಾಂಕ್‌ಲ್ರಿ ಯಶಸ್ವಿ, ನಾನಲ್ಲ!" ನಿಟ್ಟುಸಿರುಬಿಟ್ಟ. "ಫ್ರಾಂಕ್‌ಲ್ರಿ ನನಗಿಂತಲೂ ಹತ್ತು ವರ್ಷ ಚಿಕ್ಕವನು"

"ನಿರಾಶೆಪಡಬೇಡ". ಕ್ಯಾಥರೀನ್ ಪತ್ರಿಕೆಯ ಪುಟ ತಿರುವುತ್ತ ನುಡಿದಳು. "ಒಂದು ದಿನ ನಾನೂ ನೀನೂ ಇಂಥದೊಂದು ಪತ್ರಿಕೆ ಹೊರಡಿಸುತ್ತೇವೆ! ಅದು ಇಷ್ಟೇ ಚುರುಕಾಗಿರುತ್ತದೆ. ಎಂಥೆಂಥ ಸುದ್ದಿ ಸ್ವಾರಸ್ಯವಾಗಿರುತ್ತವೆಂಬುದು ಈ ಫ್ರಾಂಕ್‌ಲ್ರಿಗೆ ಖಚಿತವಾಗಿ ಗೊತ್ತು. ಇಲ್ಲಿ ನೋಡು." ಆಕೆ ಪತ್ರಿಕೆಯನ್ನು ಗಂಡನಿಗೆ ತಂದುಕೊಟ್ಟಳು. "ಬಾಸ್ಟನ್ನಿನಲ್ಲಿ ನಡೆಯುತ್ತಿರುವ ರಾಜಕೀಯ ಹೋರಾಟ ಕುರಿತು ನೇರ ಕಟು ಟೀಕೆಗಳಿಂದ ಬರವಣಿಗೆ ಆರಂಭಿಸಿದ್ದಾನೆ. ಪತ್ರಿಕೆಯನ್ನು ಇಲ್ಲಿ, ನಮ್ಮ ಅಂಗಡಿಯಲ್ಲಿ ಮಾರೋಣ! ಪ್ರತಿವಾರವೂ ಅದನ್ನು ಅಧ್ಯಯನ ಮಾಡೋಣ! ಅವನು ಪತ್ರಿಕೆಯನ್ನು ಹೇಗೆ ನಡೆಸುತ್ತಾನೆ ಎಂಬುದನ್ನು ನಾವೂ ಕಲಿಯಬಹುದು!"

———

# ಅಧ್ಯಾಯ ೯

## ಹೊಸ ಗವರ್ನರರ ಮೊದಲ ಮಾತುಗಳು

ಪೀಟರಿಗೆ ವಾದ್ಯಪಾಠಗಳನ್ನು ಹೇಳಿಕೊಡುತ್ತಿದ್ದ ಅವನ ಗೆಳೆಯ ಹೆನ್ರಿಕ್ ಮೈಕೇಲ್ ಕುಕ್, ೧೭೩೧ ರಲ್ಲಿ ಹೊಸದಾಗಿ ಕಟ್ಟಿದ ಡಚ್ ಚರ್ಚಿಗೆ ವಾದನಗಾರನಾಗಿ ಹೋದದ್ದರಿಂದ, ಅವನಿದ್ದ ವಾದನಗಾರನ ಸ್ಥಾನ ಪೀಟರಿಗೆ ಸಿಕ್ಕಿತು. ಪ್ರಬಲವಾದ ಆ ವಾದ್ಯದ ಮೇಲೆ ಅವನಿಗೆ ತುಂಬ ಅಭಿಮಾನ; ಬಲವಾದ ತನ್ನ ಕೈ ಬೆರಳುಗಳನ್ನು, ದಪ್ಪ ಶಬ್ದ ಮಾಡುವ ಮನೆಗಳ ಮೇಲೆ ಒತ್ತುತ್ತಿದ್ದ.

ನ್ಯೂಯಾರ್ಕಿನ ಗವರ್ನರ್ ಮೃತನಾದ. ಇಂಗ್ಲೆಂಡಿನ ದೊರೆ ಅವನ ಸ್ಥಾನಕ್ಕೆ ಇನ್ನೊಬ್ಬನನ್ನು ನೇಮಿಸುವ ಹೊತ್ತಿಗೆ ಅನೇಕ ತಿಂಗಳುಗಳು ಕಳೆದವು. ಈ ಮಧ್ಯೆ ಪ್ರತಿನಿಧಿ ಮಂಡಲದ ಸದಸ್ಯ ರಿಪ್ ವ್ಯಾನ್‌ಡಾಂ ತಾತ್ಕಾಲಿಕ ಗವರ್ನರಾಗಿ ಕೆಲಸ ಮಾಡಬೇಕಾಯಿತು. ಶ್ರಮ ಸಾಧ್ಯವಾದ ಕೆಲಸವಾದರೂ, ಕೈತುಂಬ ಸಂಬಳ.

ಈ ರಾಜಕೀಯ ಪರಿವರ್ತನೆಗಳನ್ನು ಪೀಟರ್ ಗಮನಿಸುತ್ತಿದ್ದ. ಗವರ್ನರಾಗಿದ್ದ ವೃದ್ಧ ಡಚ್ ಮನುಷ್ಯನ ಬಗೆಗೆ ಅಭಿಮಾನವಿದ್ದರೂ, ಈ ಬದಲಾವಣೆ ತನ್ನ ಮೇಲೆ ನೇರ ಪರಿಣಾಮವುಂಟುಮಾಡೀತೆಂದು ಅವನು ಚಿಂತಿಸಲಿಲ್ಲ. ಜೆಂಗರ್ ವ್ಯಾನ್‌ಡಾಂನ ವ್ಯಾಪಾರದ ಕಾಗದಗಳನ್ನು ಮುದ್ರಿಸಿಕೊಟ್ಟಿದ್ದ. ಕೆಳ ಬ್ರಾಡ್‌ವೆಯ ಪಶ್ಚಿಮದಲ್ಲಿದ್ದ ಅವನ ಸೌಕಾಕ್ಷೇತ್ರಕ್ಕೂ ಆಗಾಗ್ಗೆ ಹೋಗಿದ್ದ. ಇತ್ತೀಚೆಗೆ ವ್ಯಾನ್‌ಡಾಂನ ಪ್ರಥಮ ಮೊಮ್ಮಗನ ಕ್ರಿಸ್ತೀಕರಣ ಕಾಲದಲ್ಲಿ, ತಮಾಷೆಗಾಗಿ ಜೋಗುಳವೊಂದನ್ನು ಬಾರಿಸಿದ್ದ.

ಕಟ್ಟ ಕಡೆಗೆ ಹೊಸ ಗವರ್ನರ್ ಬರುವನೆಂಬ ಸುದ್ದಿಕೇಳಿ ೧೭೩೨ ರ ಜುಲೈ ೩೧ ರ ಸಾಯಂಕಾಲ ಪೀಟರ್ ಕುತೂಹಲದಿಂದ

ಬಂದರು ಕಟ್ಟೆಗೆ ಧಾವಿಸಿದ. ಬೇಸಿಗೆಯ ಅಂದು ಅಸಂಖ್ಯಾತ ನಕ್ಷತ್ರಗಳು ಮಿನುಗುಟ್ಟುತ್ತ, ಆಕಾಶದಲ್ಲೆಲ್ಲ ಮೆದು ಬೆಳಕನ್ನು ಚೆಲ್ಲಿದ್ದವು. ವಿಸ್ತಾರವಾದ ಬಂದರಿನ ಕಡೆಗೆ, ತಂಪಾದ ಕುಳಿರ್ ಗಾಳಿ ಬೀಸಿ ಸೇವಕರ ಮತ್ತು ಗುಲಾಮರ ಕೈಲಿದ್ದ ದೀವಿಗೆಗಳ ಕುಡಿಗಳನ್ನು ಹೊಯ್ದಾಡಿಸುತ್ತಿತ್ತು.

ಪೀಟರ್ ಮುಂಚಿತವಾಗಿಯೇ ಆ ಸ್ಥಳಕ್ಕೆ ಬಂದಿದ್ದುದರಿಂದ, ಮುಂದುಗಡೆ ಅಧಿಕಾರಿಗಳ ಜೊತೆ ನಿಂತಿದ್ದ ವೃದ್ಧ ನೌಕಾನಿರ್ಮಾಪಕನಿಗೆ ಸಮೀಪದಲ್ಲಿಯೇ ನಿಲ್ಲಲೆಡೆ ದೊರಕಿಸಿದ್ದ. ಕಲ್ಲಿನ ಬಂದರು ಕಟ್ಟೆಯೆಡೆಗೆ ಸಾಗಿಬರುತ್ತಿದ್ದ ದೊಡ್ಡ ಯುದ್ಧದ ಹಡಗಿನ ರಪಗುಟ್ಟುವ ಹಾಯಿ ಪಟಗಳನ್ನೂ, ಹಡಗಿನಿಂದ ಬೀರುತ್ತಿದ್ದ ಬೆಳಕಿನ ಕಿರಣಗಳನ್ನೂ ಎಲ್ಲರೂ ಕುತೂಹಲದಿಂದ ವೀಕ್ಷಿಸುತ್ತಿದ್ದರು.

"ನನಗೇಕೋ ನಡುಕ. ಕಾರಣ ನಾನೇ ಅರಿಯೆ" ವೃದ್ಧ ರಿಪ್ ವ್ಯಾನ್‌ಡಾಂ ಹೇಳುತ್ತಿದ್ದುದು ಪೀಟರಿಗೂ ಕೇಳಿಸಿತು. ರಾಜ ಪ್ರತಿನಿಧಿ ಮಂಡಲದ ಅಧ್ಯಕ್ಷನ ವಯಸ್ಸು ೭೨. ವೃದ್ಧಾಪ್ಯದಿಂದ ಬೆನ್ನು ಸ್ವಲ್ಪ ಬಾಗಿತ್ತು. ಆದರೂ ಸಿಪಾಯಿಯಂತೆ ದುಂಡು ದುಂಡಾಗಿದ್ದ. ಆವನ ಹದಿಮೂರು ತಿಂಗಳ ಗವರ್ನರ್ ಅಧಿಕಾರ ಅಂದಿನ ರಾತ್ರೆ ಮುಕ್ತಾಯವಾಗಲಿತ್ತು. ಆತನ ಆಡಳಿತ ಕಂಡು, ನ್ಯೂಯಾರ್ಕಿನ ಜನ ಬೆಕ್ಕಸ ಬೆರಗಾಗಿದ್ದರು. ಇತರರಂತೆ ತೆರಿಗೆ ದಾರರ ಖರ್ಚಿನಲ್ಲಿ ಶ್ರೀಮಂತನಾಗುವ ಹವ್ಯಾಸಕ್ಕೆ ಆತ ಕೈ ಹಾಕಿರ ಲಿಲ್ಲ. ನಾವಿಕರೂ, ಬಂದರು ಕಟ್ಟೆ ಕೆಲಸಗಾರರೂ ಆ ದೊಡ್ಡ ಮರದ ಹಡಗನ್ನು ಕಟ್ಟೆಗೆ ಕಟ್ಟಿ, ಸೇತುವೆ ಹಲಗೆಯನ್ನು ಇಳಿಬಿಡುತ್ತಿದ್ದಂತೆ, ಸ್ವಾಗತ ಸಮಿತಿಯವರಾದ ಪ್ರತಿನಿಧಿ ಮಂಡಲದ ಸದಸ್ಯರೂ, ವರ್ತಕರೂ ಒತ್ತಾಗಿ ನಿಂತು ಆಸಕ್ತಿಯಿಂದ ನೋಡುತ್ತಿದ್ದರು.

ದಂಡೆಗೆ ಮೊದಲು ಬಂದವರು ಹನ್ನೆರಡು ಮಂದಿ ಸೈನಿಕರು. ಸೇತುವೆ ಹಲಗೆಯ ತುದಿಗೆ ಬಂದ ಅವರು ಬಂದೂಕಗಳನ್ನು ಹೆಗಲಿಗೇರಿಸಿ, ಎರಡು ಸಾಲಾಗಿ ನಿಂತರು. ಅವರ ನಡುವೆ ಗಿಡ್ಡ ದೇಹದ ದಪ್ಪ ಮನುಷ್ಯನೊಬ್ಬ ಸಾಗಿ ಬಂದ. ಹಿಡಿಸದಷ್ಟು ಬಿಗಿಯಾದ,

ಕೆಂಪು ಸೈನಿಕ ಸಮವಸ್ತ್ರ ಅವನನ್ನು ಅಲಂಕರಿಸಿತ್ತು. ಆತ ಠೀವಿಯಿಂದ, ಗೆದ್ದವನಂತೆ ಮುಂಚಾಚಿ ಸರಸರನೆ ಬಂದರಿಗೆ ಬಂದ. ಈತನೇ ಹೊಸ ಗವರ್ನರ್ ವಿಲಿಯಂ ಕಾಸ್ಬಿ ಎಂದು ಪೀಟರ್ ಸುಲಭವಾಗಿ ಊಹಿಸಿದ.

ಅವನ ಸತಿ ಮತ್ತು ಗಂಡು ಮಕ್ಕಳು ಬಿಲ್ಲಿ ಮತ್ತು ಹೆನ್ರಿ (ಕೆದರಿದ ಮುಖ, ದೊಡ್ಡ ಶರೀರ) ಮತ್ತು ೧೬ ಮತ್ತು ೮ ವರ್ಷಗಳ ಇಬ್ಬರು ಲಕ್ಷಣವಂತ ಹೆಣ್ಣು ಮಕ್ಕಳೂ ತಂದೆಯನ್ನು ಹಿಂಬಾಲಿಸಿ ಬಂದರು. ಹೆಂಗಸರ ಗುಡಾರದಂತಹ ಲಂಗಗಳು ಅವರುಗಳ ಪಾದಗಳನ್ನು ಮುಚ್ಚಿದ್ದುದರಿಂದ ಅವರು ಗಾಲಿಗಳ ಮೇಲೆ ಉರುಳಿ ಬರುತ್ತಿರುವಂತೆ ಕಂಡುಬಂತು.

ಸತಿ ಕಾಸ್ಬಿ ಸದ್ಗೃಹಿಣಿಯಂತೆ, ಆದರೆ ಮುಂಗೋಪದ ಸ್ವಭಾವದವಳಂತೆ ಕಂಡು ಬಂದಳು. ಆಕೆ ಪ್ರಭಾವಶಾಲಿಯಾದ ಅರ್ಲ್ ಆಫ್ ಹ್ಯಾಲಿಫಾಕ್ಸನ ಸೋದರಿಯೆಂದು ಜೆಂಗರ್ ಕೇಳಿದ್ದ. ಅವಳ ಪಕ್ಕದಲ್ಲಿ ಚಿಕ್ಕದೊಂದು ನಾಯಿ ಬೊಗಳುತ್ತ ಬರುತ್ತಿತ್ತು. ರೇಷ್ಮೆಯ ಸಣ್ಣ ಹುರಿಯಿಂದ ಆಕೆ ಅದನ್ನು ಹಿಡಿದಿದ್ದಳು.

ಅಲ್ಲಿದ್ದವರಲ್ಲೆಲ್ಲ ಅತ್ಯಂತ ಹೆಚ್ಚು ಕಾಲದಿಂದ ಪ್ರತಿನಿಧಿ ಮಂಡಳದ ಸದಸ್ಯನಾಗಿದ್ದ ಅಲೆಕ್ಸಾಂಡರ್ ಮುಂದೆ ಬಂದು, ಮಾಮೂಲಿ ಸ್ವಾಗತದ ಮಾತುಗಳನ್ನಾರಂಭಿಸಿದ ; "ಮಹಾಸ್ವಾಮಿ, ತಮಗೆ ಈ ಸಮಿತಿ ಸುಸ್ವಾಗತನನ್ನು..........."

ಮಾತಿನ ಮಧ್ಯೆ ಕಾಸ್ಬಿ ಅರಚಿದ: "ನಿಮ್ಮನ್ನು ಮಾತನಾಡಿಸುವವರೆಗೂ ನೀವು ಮಾತನಾಡಕೂಡದು!"

ಆಳೆತ್ತರದ ನ್ಯಾಯವಾದಿಯ ಮುಖದಲ್ಲಿ ವ್ಯಗ್ರತೆ ಉಕ್ಕಿತು. ಆದರೆ ಆತ ಹಿಂದಕ್ಕೆ ಹೆಜ್ಜೆ ಹಾಕಲಿಲ್ಲ.

ಹೊಸ ಗವರ್ನರ್ ತನ್ನ ಕೈ ಮುಷ್ಟಿಗಳನ್ನು ಹಿಂದಕ್ಕಿಟ್ಟು ಎದೆಯನ್ನು ಮುಂಚಾಚಿ, ರಿಪ್ ವ್ಯಾನ್ ಡಾಂ ಕಡೆ ತಿರುಗಿ, "ನೀವು ಪ್ರತಿನಿಧಿ ಮಂಡಳದ ಅಧ್ಯಕ್ಷರಲ್ಲವೆ! ಆ ವಿಷಯ ನನಗಾಗಲೆ ತಿಳಿಸಿದ್ದಾರೆ" ಎಂದು ಅಬ್ಬರಿಸಿದ.

ವ್ಯಾನ್ ಡಾಂ ಸಾಂಪ್ರದಾಯಕವಾಗಿ ಶರೀರ ಬಾಗಿಸಿ ನಮಸ್ಕರಿಸಿದ. "ಮಹಾಸ್ವಾಮಿಯವರ ಆಗಮನದಿಂದ ನಮಗೆಲ್ಲ ತುಂಬು ಗೌರವಸಂದಿದೆ"

"ಸರಿ, ಸರಿ, ಒಳ್ಳೆಯದು." ಕಾಸ್ಟಿ ಆಗ ಹೆಚ್ಚು ಸ್ನೇಹ ಪರವಾಗಿ ನುಡಿದ. "ನೀವು ತಾತ್ಕಾಲಿಕ ಗವರ್ನರ್ ಆಗಿ ಕೆಲಸ ಮಾಡಿದೀರಿ – ಆತನ ನಿಧನಾನಂತರದಿಂದ. ಅದೇ – ಆತನ ಹೆಸರು.............."

"ನನ್ನ ಚೈತನ್ಯಕ್ಕೆ ಸಾಧ್ಯವಿದ್ದಷ್ಟು ಮಟ್ಟಿಗೆ, ಜನತೆಯ ಶಾಂತಿಯುತ ಹಾಗೂ ರಾಜಭಕ್ತಿ ಪೂರ್ಣ ಸಹಕಾರದಿಂದ ಕೆಲಸ ಮಾಡಿದೇನೆ, ಮಹಾಸ್ವಾಮಿ"

ಕಾಸ್ಟಿ ಇನ್ನೂ ಸ್ನೇಹಪರನಾದ. "ಆ ಅವಧಿಗೆ ನೀವೂ ನಿಮ್ಮ ಪ್ರತಿನಿಧಿ ಮಂಡಲಿಯೂ, ನನ್ನ ಸಂಬಳದ ವ್ಯವಸ್ಥೆ ಮಾಡಿದೀರಷ್ಟೆ."

ಜೆಂಗರ್‌ಗೆ ವಿಸ್ಮಯವೆನಿಸಿತು. ವೃದ್ಧ ರಿಪ್ ವ್ಯಾನ್‌ಡಾಂ ಬಾಯಿ ಬಾಯಿ ಬಿಡುತ್ತಿದ್ದ. ಹತ್ತಿರ ನಿಂತಿದ್ದ ಇತರ ಅಧಿಕಾರಿಗಳ ಕಡೆಯಿಂದ ಪ್ರತಿಭಟನೆಯ ಮಾತುಗಳು ಕೇಳಿ ಬಂದವು. ವೃದ್ಧ ವ್ಯಾನ್ ಬಾಯಿಬಿಟ್ಟ. "ಮಹಾಸ್ವಾಮಿ, ನಿಮ್ಮ ಸಂಬಳ ಇಂದಿನಿಂದ ಆರಂಭವಾಗುತ್ತದೆ!" ಎಂದು ಬೆಚ್ಚಿ ನುಡಿದ.

"ಏನಿದು ಹೊಲಸು!" ಹೊಸ ಗವರ್ನರ್ ಅಬ್ಬರಿಸಿದ. ದೀವಿಗೆಯ ಬೆಳಕಿನಲ್ಲಿ ಅವನ ಮುಖಕ್ಕೆ ಕೆಂಪಡರಿದುದು ಕಂಡು ಬಂತು.

"ನನ್ನ ಬಳಿ ಅವಿವೇಕದ ಮಾತುಗಳಿಗೆ ಸ್ಥಳವಿಲ್ಲ!"

ಅವನ ಕೋಪ ವ್ಯಾನ್‌ಡಾಂನ ಛಲವನ್ನು ಹೆಚ್ಚಿಸಿತು.

"ಮಹಾಸ್ವಾಮಿ, ನೀವು ಅಧಿಕಾರ ವಹಿಸಿಕೊಳ್ಳುವ ಮುಂಚಿನ ಅವಧಿಗೆ ಸಂಬಳ ನಿರೀಕ್ಷಿಸಬಾರದು!"

"ಕೆಲಸಕ್ಕೆ ಮುನ್ನ?" ಕಾಸ್ಟಿ ಗುಡುಗಿದ. ಮುಷ್ಟಿ ಹಿಡಿದು ಅಲ್ಲಿಂದಿಲ್ಲಿಗೆ ದಪದಪನೆ ಹೆಜ್ಜೆ ಹಾಕತೊಡಗಿದ. "ಕೆಲಸಕ್ಕೆ ಮುನ್ನ?

ನಾನು ಮಾಡುತ್ತಿದ್ದುದಾದರೂ ಏನು? ಪಾರ್ಲಿಮೆಂಟಿನಲ್ಲಿ ಸಕ್ಕರೆ ಮಸೂದೆಯ ವಿರುದ್ಧ, ಈ ಪ್ರಾಂತ್ಯಕ್ಕಾಗಿ, ಅಭಿಪ್ರಾಯ ರೂಢನೆ ಮಾಡುತ್ತಿದ್ದುದು ನಿನಗೆ ತಿಳಿಯದೆ? ಆಗೇನು ಮಣ್ಣು ಹೊರುತ್ತಿದ್ದೆನೆ! ನನ್ನ ಸೇವೆಗೆ ಪ್ರತಿಫಲ ಸಲ್ಲಲೇಬೇಕು. ಈ ಮಾತು ಖಚಿತ." ಕಾಲನ್ನೊಮ್ಮೆ ದಪ್ಪೆನ್ನಿಸಿ, ರೋಮಾವೃತ ಮುಷ್ಟಿಯನ್ನು ಅಪ್ಪಳಿಸಿದ. "ಈ ಅಧ್ವಾನ ಕಟ್ಟಡ ಗವರ್ನರರ ಅರಮನೆಯೇನು!" ಮತ್ತೊಮ್ಮೆ ಅಬ್ಬರಿಸಿ ಹೆಜ್ಜೆ ಹಾಕಿದ.

---



# ಅಧ್ಯಾಯ ೧೦

## ಹೋರಾಟಗಾರರ ಸಭೆ

ವೃತ್ತ ಪತ್ರಿಕೆಗಳನ್ನು ಕೊಳ್ಳುವುದಕ್ಕೂ ಹರಟೆಕೊಚ್ಚುವುದಕ್ಕೂ ಸ್ನೇಹಿತರೂ, ಬಂಧುಗಳೂ ಜೆಂಗರನ ಮುದ್ರಣಾಲಯಕ್ಕೆ ಬರುತ್ತಿದ್ದರು. ಅನೇಕ ವದಂತಿಗಳು ಅವನ ಕಿವಿಗೆ ಬೀಳುತ್ತಿದ್ದವು. ಹೊಸ ಗವರ್ನರ ವರ್ತನೆಗಳಿಂದ ಬಹುತೇಕ ಬಡವರೆಲ್ಲ ಬೆದರಿದ್ದರು.

ರೈತನೊಬ್ಬನ ಗಾಡಿ ರಸ್ತೆಯಲ್ಲಿ ನಿಂತಿತ್ತು. ಅದೇ ಮಾರ್ಗದಲ್ಲಿ ಗವರ್ನರ್, ಗಾಡಿಯಲ್ಲಿ ಕುಳಿತು ಬಂದಾಗ ತನಗೆ ಅಡ್ಡವಾಗಿ ನಿಲ್ಲಿಸಿದ್ದಾನೆಂದು ರೇಗಿ, ಆ ಗಾಡಿಯ ರೈತನನ್ನು ಛಾಟಿಯಿಂದ ಬಾರಿಸುವಂತೆ ತಮ್ಮ ಸಾರಥಿಗೆ ಆಜ್ಞಾಪಿಸಿದು. ಬಾಯಿ ನೀರು ಕೇಳುವಷ್ಟು ಏಟು ತಿಂದರೂ, ಅನಂತರ ಪ್ರತಿಭಟನೆ ಸಲ್ಲಿಸುವುದಕ್ಕೆ ಕೂಡ ಅವನಿಗವಕಾಶವಿರಲಿಲ್ಲ. ಗವರ್ನರನ್ನು ಬಂಧನ – ವಿಚಾರಣೆಗಳಿಗೆ ಗುರಿಪಡಿಸುವಷ್ಟು ಆ ಚೈತನ್ಯ ಬಡ ರೈತನಿಗೆಲ್ಲಿಂದ ಬರಬೇಕು? ಬ್ರಾಡ್‌ಫರ್ಡ್‌ನ ಪತ್ರಿಕೆ ಈ ಸಂಗತಿಯನ್ನು ಪ್ರಕಟಿಸಲಿಲ್ಲ. ಅಂತೆ; ಅದು ಬಹು ಜನರಿಗೆ ಗೊತ್ತಾಗಲೂ ಇಲ್ಲ.

ಇಂಡಿಯನ್ನರ ಭೂಮಿಗೆ ಸಂಬಂಧಿಸಿದ ವರ್ಗಾವಣೆ ಪತ್ರವೊಂದನ್ನು ಗವರ್ನರ್ ಕಾಪ್ಬಿ ಕದ್ದು, ಸುಟ್ಟು ಹಾಕಿದ. ಕಾನೂನಿನ ರೀತ್ಯ ಅರ್ಜಿ ಹಾಕಿದವರಿಗೆ ಹೊಸ ಭೂಮಿಯನ್ನು ಮಂಜೂರು ಮಾಡುವಾಗ ಅವರಿಂದ ಮೂರನೆ ಒಂದು ಭಾಗದಷ್ಟು ನೆಲವನ್ನು ತನ್ನ ಹೆಸರಿಗೆ ಬರೆಸಿಕೊಳ್ಳುತ್ತಿದ್ದ; ಈ ರೀತಿ ರಹಸ್ಯವಾಗಿ ಭಾರಿ ಎಸ್ಟೇಟುಗಳನ್ನು ಸಂಪಾದಿಸಿದ. ಈ ಅಂಶ ಕೂಡ ಬ್ರಾಡ್‌ಫರ್ಡ್‌ನ ಗೆಜೆಟ್ಟನಲ್ಲಿ ಬೆಳಕು ಕಾಣಲಿಲ್ಲ.

೯೦೦ ಪೌಂಡುಗಳನ್ನು ವಾಪಸ್ ಮಾಡುವಂತೆ ರಿಪ್ ವ್ಯಾ

ಡಾಂಗೆ ಕೇಳಿಕೆ ಹೋಯಿತು. ಆತ ಗವರ್ನರಾಗಿದ್ದ ಕಾಲದಲ್ಲಿ ಒಟ್ಟು ಪಡೆದ ಸಂಬಳದ ಅರ್ಧದಷ್ಟು ಮೊತ್ತವದು. ದೊಡ್ಡದೊಂದು ಮನೆ ಕೊಳ್ಳಲು ಸಾಲುವಷ್ಟು ಹಣ. ವ್ಯಾನ್ ವಾಪಸ್ ಕೊಡಲು ಸ್ಪಷ್ಟವಾಗಿ ನಿರಾಕರಿಸಿದ.

ವ್ಯಾನ್ ಡಾಂ ತನಗಷ್ಟು ಹಣ ಕೊಡಬೇಕು ಎಂದರೆ, ನ್ಯೂಯಾರ್ಕಿನ ಯಾವ ಜ್ಯೂರಿಯೂ ನಂಬುವುದಿಲ್ಲವೆಂದು ಗವರ್ನರಿಗೂ ಗೊತ್ತಿತ್ತು. ಅಂತೆ ಹೊಸ ಕೋರ್ಟೊಂದನ್ನು ರಚಿಸಿದ. ಜ್ಯೂರಿಗಳಿಲ್ಲದೆ, ವ್ಯಾಡಾಂನ ವಿಚಾರಣೆ ನಡೆಸುವಂತೆ ಆಜ್ಞಾಪಿಸಿದ.

ರಿಪ್‌ವ್ಯಾಗ್ ಡಾಂನ ಅಂಗಡಿ ಮನೆಯೊಂದರಲ್ಲಿ ಹೊಸದಾಗಿ ನಾಟಕ ಶಾಲೆಯೊಂದು ಆರಂಭವಾಯಿತು. ಪೀಟರ್ ಮತ್ತು ಕ್ಯಾಥರೀನ್ ಕೆಳ ತರಗತಿಯಲ್ಲಿ ಕುಳಿತು, ಬಹು ಆಸಕ್ತಿಯಿಂದ ರಂಗದ ಕಡೆ ನೋಡುತ್ತಿದ್ದರು. ನ್ಯೂಯಾರ್ಕ್ ನಗರದ ಬಹು ಪಾಲು ಜನರಂತೆ, ಅವರೂ ಎಂದೂ ನಾಟಕ ನೋಡಿರಲಿಲ್ಲ, ನಾಟಕ ಮಂದಿರದೊಳಕ್ಕೆ ಕಾಲಿಟ್ಟಿರಲಿಲ್ಲ. ಮಂದಿರ ಕಿಕ್ಕಿರಿದಿತ್ತು. ಅಂತೆ ಊರಿನವರೆಲ್ಲ ಅಲ್ಲಿ ನೆರೆದಿದ್ದಾರೆಂದು ಅವರು ಭಾವಿಸಿದರು. ಆದರೆ ಗವರ್ನರಿಗೇ, ಅಲ್ಲಿ ಆಸನದ ವ್ಯವಸ್ಥೆ ಮಾಡಿರಲಿಲ್ಲ. ಶ್ರೀಮಂತರೂ, ಸಮಾಜದಲ್ಲಿ ಗಣ್ಯರೂ ಆಗಿದ್ದ ಕೆಲವು ಮಂದಿ ಅಧಿಕಾರಿಗಳೂ, ನ್ಯೂಯಾರ್ಕಿನ ಪ್ರಥಮ ನಾಟಕ ಶಾಲೆಯ ಆರಂಭದ ದಿನದಂದು ಗೈರುಹಾಜರಾಗಿದ್ದರು. ಜೆಂಗರ್ ಹೀಗೇಕೆ? ಎಂದು ಯೋಚಿಸಿದ. ಇವರೆಲ್ಲ ವ್ಯಾಡಾಂ ವಿರುದ್ಧ ಪಕ್ಷ ವಹಿಸಿದರೇ? ಹೇಗೆತಾನೆ ಸಾಧ್ಯ?

ಆದರೆ, ಗವರ್ನರ್ ಕಾಸ್ಬಿಗೆ ಸ್ನೇಹಿತರಿದಾರೆಂಬುದು, ಇದರಿಂದ ಸ್ಪಷ್ಟವಾಯಿತು. ಇಂಥ ಸಮಾರಂಭಕ್ಕೂ ಬಾರದಿರುವಷ್ಟು ಕೋಪ ಅವರಿಗುಂಟಾಗಿರುವ ಸಂಗತಿಯನ್ನು ಯೋಚಿಸಿದಾಗ ಸಹಜವಾಗಿಯೇ ಪೀಟರಿಗೆ ಗಾಭರಿಯಾಯಿತು.

ಈ ಘಟನೆಗಳ ಪರಿಣಾಮ ತನ್ನ ಮೇಲೆ ಹೇಗಾದೀತೆಂಬುದನ್ನು ಪೀಟರ್ ಊಹಿಸತೊಡಗಿದ. ರಾಜಕೀಯ ಹೋರಾಟಕ್ಕೆ ಮುದ್ರಣಕಾರನೊಬ್ಬ ಬೇಕೇಬೇಕು.

ರಂಗದ ಪರದೆ ಮೇಲಕ್ಕೇರಿತು. ಎಂದೂ ನಾಟಕ ನೋಡದಿದ್ದ ಪೀಟರ್ ದಂಪತಿಗಳಿಗೆ, ರಂಗಮಂದಿರದ ಮೇಲೆ ಹೆಣ್ಣು ಗಂಡುಗಳ ಓಡಾಟ, ಸಂಭಾಷಣೆ ಅತಿವಿಚಿತ್ರವೆನಿಸಿತು. ಅಂದಿನ ನಾಟಕ "ರಿಕ್ರೂಟಿಂಗ್ ಆಫೀಸರ್" ಎಂಬ ಇಂಗ್ಲೆಂಡಿನ ಪ್ರಹಸನ. ನಾಟಕ ಅರ್ಥವಾಗಿ ಅವರಿಗೆ ಆಸಕ್ತಿ ಕೆರಳುವ ಹೊತ್ತಿಗೆ ಮೊದಲ ಅಂಕ ಮುಗಿದೇ ಹೋಗಿತ್ತು. ಆದರೆ ಕೆಲ ದೃಶ್ಯಗಳು ತುಂಬಾ ತಮಾಷೆ ಯಾಗಿದ್ದು ಅವರೂ ನಗುತ್ತಿದ್ದರು.

ವಿರಾಮ ಕಾಲದಲ್ಲಿ ಪ್ರೇಕ್ಷಕರಲ್ಲಿ ಅರ್ಧಜನ ಆಸನ ಬಿಟ್ಟೆದ್ದು ಅಡ್ಡಾಡುತ್ತಿದ್ದರು. ತಮ್ಮ ಗೆಳೆಯರನ್ನು ನೋಡಿ ನಗುತ್ತ ಕ್ಷೇಮ ಲಾಭ ವಿಚಾರಿಸುತ್ತಿದ್ದರು. ಎಲ್ಲರಿಗಿಂತ ಎತ್ತರವಾಗಿ ನಿಂತು, ಒಬ್ಬರಾದಮೇಲೊಬ್ಬರೊಂದಿಗೆ ಪಿಸುಗುಟ್ಟುತ್ತಿದ್ದ ನ್ಯಾಯವಾದಿ ಅಲೆಕ್ಸಾಂಡರನ್ನು ಜೆಂಗರ್ ಗಮನಿಸಿದ. ಅವನಿಗೆ ಆಶ್ಚರ್ಯವೆನಿಸಿತು. ಕತ್ತು ಹೊರಳಿಸಿದಾಗ ವ್ಯಾನ್ಡಾಂ ಕೂಡ ಅದೇ ಕೆಲಸ ಮಾಡು ತ್ತಿದ್ದುದು ಕಂಡು ಬಂತು.

ಸತಿಯೊಡನೆ ಪೀಟರ್ ಹೆಜ್ಜೆ ಹಾಕಿದಾಗ ವ್ಯಾನ್ಡಾಂ ನಮಸ್ಕರಿಸಿದ. ಅವನ ಸುಕ್ಕಿದ ದುಂಡು ಮುಖದಲ್ಲಿ ಕಳವಳವಿತ್ತು. "ಆ ಸುದ್ದಿ ಗೊತ್ತೇನು?" ಹಿರಿಯ ನೌಕಾ ನಿರ್ಮಾಪಕ ಡಚ್ ಭಾಷೆಯಲ್ಲಿ ಪ್ರಶ್ನೆ ಹಾಕಿದ.

ಪೀಟರ್ ಗೊತ್ತೆಂದು ತಲೆ ಹಾಕಿದ. ಗವರ್ನರ್ ಕಾಸ್ಬಿ ಆಜ್ಞಾಪಿಸಿದ್ದ ಜ್ಯೂರಿ ಇಲ್ಲದ ಕೋರ್ಟಿನ ವಿಷಯ ಕುರಿತು ದಿನವೆಲ್ಲ ಗಿರಾಕಿಗಳು ಚರ್ಚಿಸಿದ್ದರು.

"ನಿನ್ನ ಅಭಿಪ್ರಾಯವೇನು?" ವ್ಯಾನ್ಡಾಂ ಒತ್ತಿ ಕೇಳಿದ.

ತನ್ನ ಸುತ್ತ ನೆರೆದಿದ್ದವರಲ್ಲಿ ಬಹು ಮಂದಿಗೆ ಡಚ್ ಭಾಷೆ ಗೊತ್ತಿರಬಹುದಾದ್ದರಿಂದ, ಪೀಟರ್ ಮೆಲ್ಲಗೆ ಉತ್ತರವಿತ್ತ. "ಜ್ಯೂರಿ ಗಳಿಗೆ ಅವಕಾಶ ಕಲ್ಪಿಸಬಾರದೇಕೆ? ಅವನಿಗೆ ಹಣ ಕೊಡುವಂತೆ ಅವನ ಕೋರ್ಟು ನಿಮ್ಮನ್ನು ಒತ್ತಾಯಪಡಿಸುವುದು ಕೇವಲ ಪ್ರಜಾ ಹಿಂಸೆ!"

ವೃದ್ಧ ಅವನ ಕೈ ಹಿಡಿದುಕೊಂಡ. "ನಮ್ಮ ಕಡೆ ಬರುವವರ ಸಂಖ್ಯೆಯನ್ನು ಎಣಿಸುತ್ತಿದ್ದೇವೆ. ನಾವೆಲ್ಲ ಒಗ್ಗೂಡಬೇಕು!" ಮುಂದಿನ ಅಂಕದ ಪರದೆ ಮೇಲೇಳುವ ಮುನ್ನ, ಇನ್ನೊಬ್ಬನೊಡನೆ ವಿಚಾರ ವಿನಿಮಯ ಮಾಡಲು ಆತ ಸರಸರನೆ ತೆರಳಿದ.

---

# ಅಧ್ಯಾಯ ೧೧

## ಧೀರ ಮುದ್ರಣಕಾರ

ವಿಪರೀತ ಅಪಾಯಕಾರಿಯಾಗಿ ಕಂಡು ಬಂದ ಈ ಹೊಸ ಕೋರ್ಟಿನ ನ್ಯಾಯಾಧೀಶರುಗಳೂ, ಸುಪ್ರೀಂ ಕೋರ್ಟಿನ ನ್ಯಾಯ ಮೂರ್ತಿಗಳೇ. ಆದರೆ ಶ್ರೇಷ್ಠ ನ್ಯಾಯಮೂರ್ತಿ ಮಾರಿಸ್‌ನ (ಅಲೆಕ್ಸಾಂಡರನ ಗೆಳೆಯನ ತಂದೆ) ಸಲಹೆಯನ್ನು ಮಾತ್ರ ಈ ಸಂದರ್ಭದಲ್ಲಿ ಪಡೆದಿರಲಿಲ್ಲ.

ಗವರ್ನರ್ ಕಾಸ್ಬಿ, ವ್ಯಾಂಡಾಂ ಮೇಲೆ ಮೊಕದ್ದಮೆ ಹೂಡಿ, ಅದರ ವಿಚಾರಣೆಗೆ ಈ ಕೋರ್ಟನ್ನು ಉಪಯೋಗಿಸಿಕೊಳ್ಳಲೆಳಿಸಿದಾಗ, ಶ್ರೇಷ್ಠ ನ್ಯಾಯಮೂರ್ತಿ ಮಾರಿಸ್, ಈ ಕ್ರಮವನ್ನು ಉಗ್ರವಾಗಿ ಖಂಡಿಸಿದರು. ಚುನಾಯಿತ ಜನತಾ ಶಾಸನ ಸಭೆಯ ಅಭಿಮತದ ವಿರುದ್ಧ, ಗವರ್ನರ್ ಮತ್ತು ಪ್ರತಿನಿಧಿ ಮಂಡಲ ಈ ಕೋರ್ಟಿನ ನೇಮಕ ಮಾಡಿರುವುದು ಅಕ್ರಮವೆಂದು, ನ್ಯಾಯಾಧೀಶನ ಸ್ಥಾನದಿಂದಲೇ ವಾದಿಸಿ, ಕೋರ್ಟನ್ನೇ ವಿಸ್ಮಯಗೊಳಿಸಿದರು. ತಮ್ಮ ಮಾತನ್ನು ಮುಗಿಸುತ್ತ "ಅಂತೆ, ದೇವರ ದಯೆಯಿಂದ, ಪ್ರಾಂತ್ಯದ ಶ್ರೇಷ್ಠ ನ್ಯಾಯಮೂರ್ತಿಯಾದ ನಾನು ಈ ವಿಷಯದಲ್ಲಿ ಅವರಿಗೆ ವಿಧೇಯನಾಗಿರಲಾರೆ" ಎಂದು ಸ್ಪಷ್ಟವಾಗಿ ನುಡಿದರು.

ಇದ್ದಕ್ಕಿದ್ದಂತೆ ಎದ್ದು ಕೋರ್ಟಿನಿಂದಾಚೆಗೆ ನಡೆದರು.

ಮರುದಿನ ಬೆಳಿಗ್ಗೆ ಪೀಟರ್ ಮತ್ತು ಕ್ಯಾಥರೀನ್ ಬ್ರಾಡ್ ಫರ್ಡ್‌ನ "ನ್ಯೂಯಾರ್ಕ್ ಗೆಜೆಟ್"ಅನ್ನು ಅತ್ಯಾಸಕ್ತಿಯಿಂದ ಓದಿದರು. ನಿರೀಕ್ಷಿಸಿದಂತೆ, ಶ್ರೇಷ್ಠ ನ್ಯಾಯಮೂರ್ತಿಗಳು ಗವರ್ನರ ಅನ್ಯಾಯವನ್ನು ಎದುರಿಸಿದ ಸುದ್ದಿ ಅದರಲ್ಲಿರಲಿಲ್ಲ.

ಕ್ಯಾಥರೀನ್ ಆ ಸತ್ವ ಹೀನ ಪತ್ರಿಕೆಯನ್ನು, ಅತ್ತ ಎಸೆದು

ತನ್ನ ಚಿಕ್ಕ ಮಗಳಿಗೊಂದು ಕೋಟು ಹೊಲಿಯ ತೊಡಗಿದಳು. "ಈಗ ಶ್ರೇಷ್ಠ ನ್ಯಾಯ ಮೂರ್ತಿಗಳು ಗವರ್ನರರ ವಿರುದ್ಧ ಪಕ್ಷವನ್ನು ವಹಿಸಿರುವುದರಿಂದ, ಹೊಸ ಘಟನೆಗಳು ಆರಂಭವಾಗುವುದು ಖಚಿತ. ಗವರ್ನರ ಉದ್ದೇಶವೇನೆಂಬುದು ಜನಗಳಿಗೆ ಗೊತ್ತಾಗಬೇಕೆಂಬ ಅಪೇಕ್ಷೆ ಅವರುಗಳಿಗೆ ಇದ್ದೇ ಇದೆ. ಅವರಿಗಾಗಿ ಪತ್ರಿಕೆ ಆರಂಭಿಸು ವಂತೆ ನಿನ್ನನ್ನು ಕೇಳಿಲ್ಲವೇನು ?"

"ನಾವೇ ಸೂಚಿಸಬಹುದು" ಪೀಟರ್ ಆಸೆಯಿಂದ ನುಡಿದ. ಚರ್ಮದ ದೊಡ್ಡ ಏಪ್ರನ್ನನ್ನು ಮೈಗೆ ಕಟ್ಟಿಕೊಂಡು, ಸ್ಮಿತವದನನಾಗಿ ಮುದ್ರಣ ಯಂತ್ರದ ಹಿಡಿಗೆ ಕೈ ಹಾಕಿದ. "ಅಂತೂ ಈಗ ನಮ ಗೊಂದು ಅವಕಾಶ ಲಭ್ಯವಾಗುವಂತಿದೆ !"

ಸಂಜೆ ಬಹು ಹೊತ್ತಾದ ಮೇಲೆ ಅಲೆಕ್ಸಾಂಡರ್, ಮುದ್ರಣಾಲ ಯದಲ್ಲಿ ಇನ್ನೂ ದೀಪ ಉರಿಯುತ್ತಿದ್ದುದನ್ನು ಕಂಡು, ತಡವರಿಸುತ್ತ ಒಳಕ್ಕೆ ಬಂದ. ಕಿರಿ ಹೊತ್ತಿಗೆಯಾಗಿ ಜೆಂಗರ್ ಸಿದ್ಧಗೊಳಿಸುತ್ತಿದ್ದ ಶ್ರೇಷ್ಠ ನ್ಯಾಯಮೂರ್ತಿಯ ಭಾಷಣದ ಮುದ್ರಿತ ಪ್ರತಿಯೊಂದನ್ನು ನೋಡಬೇಕೆಂದು ಕೇಳಿದ.

ಅವನ ಹಿಂದೆಯೇ ಲ್ಯೂಯಿ ಮಾರಿಸ್, ಜ್ಯೂನಿಯರ್ ಕೂಡ ಸರಸರನೆ ಬಂದ. ನಗರ ಭವನದಲ್ಲಿ ಸೇರಿದ್ದ ಶಾಸನ ಸಭೆಯ ಉಪಸಮಿತಿಯ ಅಧಿವೇಶನವೊಂದನ್ನು ಮುಗಿಸಿಕೊಂಡು, ಅದೇ ತಾನೆ ಅಲ್ಲಿಂದ ಬಂದಿದ್ದ. ಈ ಉಪಸಮಿತಿ ಹೊಸ ಕೋರ್ಟಿನ ವಿರುದ್ಧ ಅಭಿಮತವಿತ್ತಿತ್ತು.

ಮೂವತ್ತು ನಾಲ್ಕರ ಪ್ರಾಯದ ಮಾರಿಸ್ ಜೆಂಗರ್‌ಗಿಂತ ಒಂದು ವರ್ಷ ಚಿಕ್ಕವನು. ಮೇಧಾವಿ – ಅವನ ವಾಸ ವೆಸ್ಟ್ ಚೆಸ್ಟರ್ ಕೌಂಟಿಯಲ್ಲಿ. ಅವನ ಕುಟುಂಬವೆಂದರೆ ರೂಪವಂತ ಪತ್ನಿ, ೬ ವರ್ಷದ ಮಗ. ತನ್ನ ತಂದೆಯ ಭಾರಿ ಎಸ್ಟೇಟಿನಲ್ಲಿ ಅವನದೇ ಆಡಳಿತ. ಕಾನೂನು ವಿಧಾಯಕನೂ ಅವನೇ, ನ್ಯಾಯಾಧೀಶನೂ ಅವನೇ. ಕಟು ಟೀಕೆ ಮಾಡಿದನೆಂದು ಹೊರ ತಳ್ಳಲ್ಪಟ್ಟದ್ದರಿಂದ, ರಾಜಪ್ರತಿನಿಧಿ ಮಂಡಳದ ಸದಸ್ಯತ್ವ ಕೈಬಿಟ್ಟಿತ್ತು. ಆದರೆ ಬಹು

ಬೇಗ ಶಾಸನ ಸಭೆಗೆ ಮತ್ತೆ ಚುನಾಯಿತನಾಗಿದ್ದ.

ಬಂದವರನ್ನು ವಿನಯದಿಂದ ಸ್ವಾಗತಿಸಲು ಪೀಟರ್ ಎದ್ದು ನಿಂತು ಎರಡು ಕುರ್ಚಿಗಳ ಧೂಳು ಕೊಡವಿದ. ಇವರೂ ತನ್ನಂತೆಯೇ ಪತ್ರಿಕೆಯ ವಿಷಯವನ್ನು ಮನಸ್ಸಿನಲ್ಲಿಟ್ಟುಕೊಂಡು, ತನ್ನಭಿಪ್ರಾಯ ಕೇಳಲು ಬಂದಿದಾರೇನೋ ಎಂದು ಯೋಚಿಸಿದ.

ಎಂದಿನಂತೆ ತಟ್ಟನೆ, ಸ್ಪಷ್ಟವಾಗಿ ಮಾರಿಸ್, "ಇಂದು ಹಡಗಿನಲ್ಲಿ ನಿನಗೆ ಬಂದ ಪತ್ರಗಳನ್ನು ನಾನು ನೋಡಬಹುದೆ?" ಎಂದು ತನ್ನ ಗೆಳೆಯನನ್ನು ಪ್ರಶ್ನಿಸಿದ. ಮೇಲೆ ಮಕ್ಕಳ ಕೊಠಡಿಯಲ್ಲಿ ಹೊಲಿಯುತ್ತಿದ್ದ ಕ್ಯಾಥರೀನ್ ಗಂಡು ಧ್ವನಿಗಳು ಕೇಳಿಸಿದೊಡನೆ, ಹಳೆಯ ಮೆಟ್ಟಲುಗಳನ್ನಿಳಿದು ಕೆಳಕ್ಕೆ ಬಂದಳು.

"ನನ್ನ ಲಂಡನ್ ಗೆಳೆಯನಿಂದ ಉತ್ತರ ಬಂದಿದೆ" ಅಲೆಕ್ಸಾಂಡರ್ ಜೇಬಿನೊಳಗಿಂದ ಪತ್ರವನ್ನು ಹೊರತೆಗೆಯುತ್ತ ಉತ್ತರಿಸಿದ. ಚಿಂತಾಕ್ರಾಂತ ವದನದಿಂದ ತಲೆಯಾಡಿಸಿದ."

"ಈ ಕಾಸ್ಬಿ ಐರ್ಲೆಂಡಿನ ರಾಜ ವಂಶಜನೊಬ್ಬನ ಹತ್ತನೆ ಮಗನಂತೆ"

"ಹತ್ತನೆ ಮಗ!" ಪೀಟರ್ ಆಶ್ಚರ್ಯ ಚಕಿತನಾದ. "ಅಂದರೆ ಬಡತನ ಕಾಡುತ್ತಿರಬೇಕು"

ಅಲೆಕ್ಸಾಂಡರ್ ಮಾತು ಮುಂದುವರಿಸಿದ. "ಕೆಲಕಾಲದ ಹಿಂದೆ, ಮೆಡಿಟರೇನಿಯನ್ ಸಮುದ್ರದಲ್ಲಿರುವ ಮಿನೋರ್ಕಾ ದ್ವೀಪದ ಗವರ್ನರಾಗಿದ್ದ"

"ಇಲ್ಲಿಗಿಂತ ಅಲ್ಲಿ ಉತ್ತಮ ಗವರ್ನರಾಗಿದ್ದನೇನು?"

"ತನ್ನ ಮಟ್ಟಿಗೆ ಚೆನ್ನಾಗಿದ್ದ." ಅಲೆಕ್ಸಾಂಡರ್ ಜಿಗುಪ್ಸೆಯಿಂದ ಉತ್ತರಿಸಿದ. "ಒಬ್ಬ ಭಾರಿ ಸ್ಪ್ಯಾನಿಷ್ ವರ್ತಕನೊಡನೆ ಕಲಹಕ್ಕಿಳಿದ. ಅವನು ಒಂದು ಹಡಗು ತುಂಬ ನಶ್ಯ ತರಿಸಿದ್ದ; ಅದರ ಬೆಲೆ ೯೦೦೦ ಪೌಂಡು. ಕಾಸ್ಬಿ ಆ ನಶ್ಯವನ್ನೆಲ್ಲ ವಶಪಡಿಸಿಕೊಂಡು ಮಾರಿಬಿಟ್ಟ. ಆ ರೀತಿ ಪಡೆದ ಹಣವನ್ನು ಬಟ್ಟೆ, ಮದ್ಯ, ಹೊಸಗಾಡಿಗಳ ಮೇಲೆ ಖರ್ಚುಮಾಡಿದ. ಆದರೆ ಮಿನೋರ್ಕಾ ದ್ವೀಪದ ಜನರು ಲಂಡನ್ನಿಗೆ ದೂರು ಕಳಿಸಿದರು. ಆಗ ಕಾಸ್ಬಿಯ ಅಕ್ರಮ ಲಂಡನ್ ಅಧಿಕಾರಿಗಳಿಗೆ

ಸ್ಪಷ್ಟವಾಗಿ ಅವರು ಅವನನ್ನು ವಾಪಸ್ ಕರೆಸಿದರು!"

ತರುಣ ಮಾರಿಸ್ ಘರ್ಜಿಸಿದ: "ಇಂಥವನನ್ನು ನಮ್ಮ ಗವರ್ನರಾಗಿ ಕಳಿಸಿದಾರಲ್ಲ! ಏಕೆ?"

ಕ್ಯಾಥರೀನ್ ತನ್ನ ಅಭಿಪ್ರಾಯವನ್ನಿತ್ತಳು: "ನಿಮ್ಮ ಪ್ರಶ್ನೆಗೆ ಉತ್ತರವನ್ನು ನಾನು ಊಹಿಸಬಲ್ಲೆ. ಪ್ರಾಯಶಃ ಅವನಿಗೆ ಪ್ರಭಾವ ಶಾಲಿ ಮಿತ್ರಬಳಗವಿರಬೇಕು"

"ಹೌದು. ನ್ಯೂ ಕ್ಯಾಸಲ್ಲಿನ ಡ್ಯೂಕ್" ಅಲೆಕ್ಸಾಂಡರ್ ತನಗೆ ಬಂದಿದ್ದ ಪತ್ರದಿಂದ ಓದಿದ. "ಮತ್ತೆ ಗ್ರಾಫ್ಟ್ಯನ್ ಡ್ಯೂಕ್. ಇದರ ಮೇಲೆ ಕಾಸ್ಬಿ ಅರ್ಲ್ ಆಫ್ ಹ್ಯಾಲಿಫಾಕ್ಸ್ ದೊರೆಯ ವಸಾಹತು ಶಾಖೆಯ ಕಾರ್ಯದರ್ಶಿಯಾಗಿದ್ದ."

ಮಾರಿಸ್ ನುಡಿದ: "ಹಾಗಾದರೆ ಇವನನ್ನು ತೊಲಗಿಸುವುದು ಬಹು ಕಷ್ಟ. ಇಲ್ಲಿ ಇನ್ನು ಸ್ವಲ್ಪ ಎಚ್ಚರಿಕೆಯಿಂದ ವರ್ತಿಸಲೂ ಬಹುದು. ಅಂಥ ಸ್ನೇಹಿತರಿರುವಾಗ—!"

ಜೆಂಗರ್ ಪ್ರಶ್ನಿಸಿದ: "ಅವನ ಸ್ವಭಾವ ಎಂಥದು ಎಂದು ಯೋಚಿಸುತ್ತಿದ್ದೇನೆ. ಬಹು ಬುದ್ಧಿವಂತನೇನು?"

"ಇಲ್ಲಿ ಕೇಳಿ" ಅಲೆಕ್ಸಾಂಡರ್ ಪತ್ರದಿಂದ ಓದಿದ, ಜೆಂಗರ್ ಮೇಣದ ಬತ್ತಿಯನ್ನು ಕಾಗದದ ಮೇಲೆ ಬೆಳಕು ಬೀಳುವಂತೆ ಹಿಡಿದ. "ಕರ್ನಲ್ ಕಾಸ್ಬಿಗೂ ಶಾಲೆಗೂ ಬಹುದೂರ. ಬುದ್ಧಿವಂತನೇನೂ ಅಲ್ಲ. ವ್ಯವಹಾರ ಜ್ಞಾನ ಕೂಡ ಇಲ್ಲ. ಬಲವೇ ನ್ಯಾಯ ಎಂಬುದವನ ನಂಬುಗೆ. ಅವನ ಒಂದೇ ಧ್ಯೇಯ ಧನಸಂಗ್ರಹಣ. ಅವನಿಗೆ ಗೊತ್ತಿರುವ ಒಂದೇ ಜಾಣತನ ಬಲಪ್ರಯೋಗ. ದರ್ಪಿಷ್ಟ, ಠೇಂಕಾರ, ಠೀವಿ ಹೆಚ್ಚು. ಹಿಂಸಾ ಮನೋಭಾವ ಅದರ ಮೇಲೆ ನಿಗ್ರಹ ಎಳ್ಳಷ್ಟೂ ಇಲ್ಲ."

ತರುಣ ಮಾರಿಸ್ ಗಲ್ಲಾದ ಮೇಲೆ ಮುಷ್ಟಿಯಿಂದ ಗುದ್ದಿದ. "ನ್ಯೂಯಾರ್ಕಿನ ರಾಜಪ್ರತಿನಿಧಿ, ನಮ್ಮ ಮೇಲೆ ನಮ್ಮ ಆಸ್ತಿ ಪಾಸ್ತಿಗಳ ಮೇಲೆ ಅವನಿಗೆ ಪೂರ್ಣಾಧಿಕಾರ!"

ಅಲೆಕ್ಸಾಂಡರ್ ಮುದ್ರಕನ ಕಡೆ ತಿರುಗಿದ. "ಇತ್ತೀಚಿನ

ಘಟನೆಯ ಬಗೆಗೆ ನಿನ್ನ ಅಭಿಪ್ರಾಯವೇನು ? ಗವರ್ನರ್ ಕಾಸ್ಬಿ ಶ್ರೇಷ್ಠ ನ್ಯಾಯಮೂರ್ತಿಯನ್ನು ಹೊರತಳ್ಳಿದ್ದಾನೆ "

ಜೆಂಗರ್ ತನಗನಿಸಿದ್ದನ್ನು ಮುಚ್ಚುಮರೆಯಿಲ್ಲದೆ ಹೇಳಿದ : "ಇದು ನನಗರ್ಥವಾಗದು" ನ್ಯಾಯವಾದಿ ವಿವರಿಸಿದ: "ಅಂದರೆ ಇನ್ನು ಮುಂದೆ, ನೀನೋ, ನಾನೋ ಮತ್ತಾರೋ ಗವರ್ನರಿಗೆ ಬೇಡವೆನಿಸಿದರೆ, ಅಂಥವರನ್ನು ಸುಳ್ಳು ಆಪಾದನೆಯ ಮೇಲೆ ಬಂಧಿಸಿಸಬಹುದು. ನಾವು ನಿರಪರಾಧಿಗಳೆಂದು ಋಜುವಾತು ಪಡಿಸಲೆತ್ನಿಸಿದರೆ, ಆತ ನ್ಯಾಯಾಧೀಶನಿಗೆ 'ಈತ ಅಪರಾಧಿಯೆಂದು ತೀರ್ಮಾನಿಸು, ಇಲ್ಲವಾದರೆ ನಿನ್ನ ಕೆಲಸಕ್ಕೇ ಊನ!' ಎಂದು ಬೆದರಿಕೆ ಹಾಕಬಹುದು."

ಹೊಲಿಯುತ್ತಿದ್ದ ಪತ್ನಿ ತನ್ನ ಕಡೆ ಏನೋ ಸನ್ನೆಮಾಡುತ್ತಿರುವುದನ್ನು ಜೆಂಗರ್ ನೋಡಿದ. ಮನಸ್ಸಿನಲ್ಲಿದ್ದುದನ್ನು ವ್ಯಕ್ತಪಡಿಸಬೇಕಾದ ಕಾಲ ಬಂದಿತ್ತು. ಪತ್ರಿಕಾ ಪ್ರಕಟನೆ ಅಪಾಯಕಾರಿ, ಜೊತೆಗೆ ಬಿಡುವಿಲ್ಲದ ಕೆಲಸ ಎಂದೂ ಲೆಖ್ಖಹಾಕಿದ. ಕಡೆ ಘಳಿಗೆಯೇ ಮೌನ ತಾಳಿದ. ಆದರೆ ಕ್ಯಾಥರೀನ್‌ನ ನೀಲಿ ಕಣ್ಣುಗಳು ಅವನನ್ನೇ ದಿಟ್ಟಿಸುತ್ತಿದ್ದವು. ತಾನೇನು ಮಾಡುತ್ತಿದೇನೆಂಬುದನ್ನು ಅರಿಯುವ ಮುನ್ನವೇ, ಬಾಯಿ ಬಿಚ್ಚಿದ: "ನ್ಯೂಯಾರ್ಕಿನ ಜನತೆಯನ್ನು ಎಚ್ಚರಿಸುವಂತಹ ಪತ್ರಿಕೆ ಇಲ್ಲದೆ ಇರುವುದೊಂದು ದೊಡ್ಡ ದೋಷ."

ತರುಣ ಮಾರಿಸ್ ಅವಿಶ್ರಾಂತನಾಗಿ ಅಲ್ಲಿಂದಿಲ್ಲಿಗೆ ಹೆಜ್ಜೆ ಹಾಕುತ್ತಿದ್ದವನು, ಇದ್ದಕ್ಕಿದ್ದಂತೆ ನಿಂತ. "ಈ ಗವರ್ನರನ್ನು ಓಡಿಸಲು ಅಥವಾ ಸರಿಯಾಗಿಯಾದರೂ ವರ್ತಿಸುವಂತೆ ಮಾಡಲು ಆತನ ವಿರುದ್ಧದ ಹೋರಾಟಕ್ಕೆ, ನಾವೊಂದು ಹೊಸ ರಾಜಕೀಯ ಪಕ್ಷ ಕಟ್ಟಲಿದ್ದೇವೆಂಬ ಸಂಗತಿಯನ್ನು ನೀನು ಕೇಳಿರಬೇಕು. ನಮ್ಮದು 'ಪಾಪ್ಯುಲರ್ ಪಾರ್ಟಿ' ಜನತಾ ಸ್ವಾತಂತ್ರ್ಯದ ಸಂರಕ್ಷಣೆಯೇ ನಮ್ಮ ಧ್ಯೇಯ. ನಾಯಕತ್ವಕ್ಕೆ ಅಲೆಕ್ಸಾಂಡರ್ ಚುನಾಯಿತನಾಗಿದ್ದಾನೆ." ಎಂದ.

"ಅಭಿನಂದನೆಗಳು!" ಸತಿ ಜೆಂಗರ್ ಘೋಷಿಸಿದಳು "ನಮ್ಮ ಬೆಂಬಲ ನಿಮಗಿದೆ, ಖಚಿತ."

ಅಲೆಕ್ಸಾಂಡರ್ ಭುಜ ಮೇಲಕ್ಕೆತ್ತಿದ. ದೃಢನಿರ್ಧಾರಸೂಚಕ

ವಾಗಿ ಔಡು ಕಚ್ಚಿದ. ಆಕೆಯನ್ನು ಗಂಭೀರವಾಗಿ ವಂದಿಸಿದ. "ನಿಮ್ಮ ಬೆಂಬಲ ನಮಗವಶ್ಯ. ನಮ್ಮ ಪಕ್ಷಕ್ಕೊಂದು ಪತ್ರಿಕೆ ಬೇಕು."

ಮಾರಿಸ್ ಖಚಿತ ಮಾತುಗಳಲ್ಲಿ ಕೇಳಿದ, "ನಮಗಾಗಿ ಎಂದಿನಿಂದ ಪತ್ರಿಕೆ ಮುದ್ರಿಸ ಬಲ್ಲೆ? ಈ ಸರಕಾರದ ವಿರುದ್ಧ ಜನ ರಕ್ಷಣೆಗಾಗಿ ನಮಗೊಂದು ಪತ್ರಿಕೆ ಬೇಕು!"

ಅಲೆಕ್ಸಾಂಡರ್ ಸಮ್ಮತಿಯಿಂದ ತಲೆ ಅಲ್ಲಾಡಿಸಿದ.

ತನ್ನ ದೊಡ್ಡ ಕೈಗಳು ಆಗಲೆ ಕೆಲಸ ನಿರ್ವಹಿಸುತ್ತಿರುವಂತೆ ಜೆಂಗರ್ ಭಾವಿಸಿದ. "ನಾನು ಸ್ವಲ್ಪ ಹಣ ಕೂಡಿಸಿಟ್ಟಿದೀನಿ" ಎಂದು ಸೂಕ್ಷ್ಮವಾಗಿ ನುಡಿದ.

ಮಾರಿಸ್ ಹೆಗಲು ಹಾರಿಸಿದ. "ಓ, ಆ ವಿಷಯವೇ! ಅಲೆಕ್ಸಾಂಡರ್ ಸಂಪಾದಕನಾಗುವುದಾದರೆ, ಹಣ ನಾನು ಕೊಡುತ್ತೇನೆ. ಕೈಯಲ್ಲಿ ಹ್ಯಾಟು ಹಿಡಿದು ಎಲ್ಲೆಡೆ ಹೋಗುತ್ತೇನೆ. ವಾನ್‌ಡಾಂ ೧೦ ಪೌಂಡ್ ಕೊಡಬಲ್ಲರು. ನಮ್ಮ ತಂದೆಯೂ ಅಷ್ಟೆ. ಪಾಪ್ಯುಲರ್ ಪಾರ್ಟಿಯ ನಾಯಕರೆಲ್ಲರೂ ಚಂದಾ ಹಾಕಿಯಾರು"

ಜೆಂಗರ್ ಮತ್ತೊಂದು ಕೇಳಿಕೆ ಮುಂದಿಟ್ಟ. "ಪ್ರತಿ ವಾರ ಪತ್ರಿಕೆ ಮುದ್ರಿಸಬೇಕಾದರೆ, ನನಗೊಬ್ಬ ಕೆಲಸಗಾರ ಬೇಕು."

ಅಲೆಕ್ಸಾಂಡರ್ ಸ್ವಲ್ಪ ಹೊತ್ತು ಯೋಚಿಸಿದ. "ಫಿಲಿಡೆಲ್ಫಿಯಾದಲ್ಲಿರುವ ನನ್ನ ಗೆಳೆಯ ಆಂಡ್ರ್ಯೂ ಹ್ಯಾಮಿಲ್ಟನ್ನಿಗೆ ಕಾಗದ ಬರೆಯುತ್ತೇನೆ. ತನಗೊಬ್ಬ ಖ್ಯಾತ ಮುದ್ರಕ ಸನ್ಮಿತ್ರನಿದ್ದಾನೆಂದು ಅವನು ತಿಳಿಸಿದ್ದ. ಆತನ ಹೆಸರು ಬೆಂಜಮಿನ್ ಫ್ರಾಂಕ್‌ಲಿನ್. ಅವರಿಬ್ಬರೂ ಸೇರಿ ನಮಗೊಬ್ಬ ಸಹಾಯಕ ಕೆಲಸಗಾರನನ್ನು ಒದಗಿಸಬಹುದು."

ಪತ್ರಿಕಾ ಮುದ್ರಣ ತನ್ನನ್ನು ತೀವ್ರ ಕಷ್ಟಕ್ಕೆ ಸಿಕ್ಕಿಸಬಹುದೆಂಬುದು ಜೆಂಗರ್‌ಗೆ ತಿಳಿದಿತ್ತು. ನ್ಯಾಯಮೂರ್ತಿ ಹ್ಯಾರಿಸನ್ ಬ್ರಾಡ್‌ಫರ್ಡ್‌ಗೆ ಎಚ್ಚರಿಕೆಯಿತ್ತುದನ್ನು ತಾನೇ ಕಂಡಿದ್ದ.

ಜೆಂಗರ್ ಕಳವಳಗೊಂಡ. ಮೊದಲ ದಿನ ತಾನೇನು ಮುದ್ರಿಸಬಹುದು? ಗವರ್ನರ್ ತನಗೇನು ಮಾಡಬಹುದು? ಅದೂ ಈಗ– ಗವರ್ನರ್ ಕಾಸ್ಬಿ ನ್ಯಾಯಾಧೀಶರಿಗೇ ಆಜ್ಞೆ ಮಾಡುವ ಸ್ಥಿತಿಯಲ್ಲಿರುವಾಗ.

# ಅಧ್ಯಾಯ ೧೨

## ವೆಸ್ಟ್ ಚೆಸ್ಟರ್ ಚುನಾವಣೆ

ಶಾಸನ ಸಭೆಯ ವೆಸ್ಟ್ ಚೆಸ್ಟರ್ ಕೌಂಟಿ ಸದಸ್ಯನೊಬ್ಬ ಮೃತನಾದನೆಂದೂ, ಖಾಲಿಯಾದ ಆ ಸ್ಥಾನಕ್ಕೆ ವಿಶೇಷ ಚುನಾವಣೆ ನಡೆಸಲು ಗವರ್ನರ್ ಕಾಸ್ಬಿ ಆಜ್ಞೆ ಹೊರಡಿಸಬೇಕಾಗಿದೆಯೆಂದೂ ತಿಳಿಸಲು ಅಲೆಕ್ಸಾಂಡರ್ ಜೆಂಗರನ ಮುದ್ರಣಾಲಯಕ್ಕೆ ಬಂದ.

ಅಲೆಕ್ಸಾಂಡರನ ವಾತ್ಸಲ್ಯ ಪೂರ್ಣ ಮುಖ ಉದ್ರೇಕದಿಂದ ಇನ್ನಷ್ಟು ಸುಕ್ಕುಗಟ್ಟಿತ್ತು. “ನಮ್ಮ ಪಾಪ್ಯುಲರ್ ಪಾರ್ಟಿಯ ಬಲ ಪರೀಕ್ಷೆಗೆ ಇದು ಪ್ರಥಮ ಅವಕಾಶ! ಸುಪ್ರೀಂ ಕೋರ್ಟಿನ ಶ್ರೇಷ್ಠ ನ್ಯಾಯಾಧೀಶನನ್ನು ಹೊರ ತಳ್ಳಿದ ಕಾಸ್ಬಿಗೆ ಈ ಚುನಾವಣೆಯಲ್ಲಿ ಉತ್ತರ ನೀಡೋಣ. ಶ್ರೇಷ್ಠ ನ್ಯಾಯಮೂರ್ತಿ ಮಾರಿಸರನ್ನೇ ವೆಸ್ಟ್ ಚೆಸ್ಟರ್‌ನಿಂದ ಚುನಾವಣೆಗೆ ನಿಲ್ಲುವಂತೆ ಒಪ್ಪಿಸೋಣ. ಕಾಸ್ಬಿಯೂ ಉಮೇದುವಾರನೊಬ್ಬನನ್ನು ನಿಲ್ಲಿಸಲಿದ್ದಾನೆ. ಅವನ ಕಡೆಯವರು ಅವನ ಸ್ಪರ್ಧಿ, ಶಾಲಾ ಉಪಾಧ್ಯಾಯನಾಗಿರುವ ಫಾಸ್ಟರ್‌ಗೆ ಓಟು ಕೊಡಲಿ. ನ್ಯಾಯಾಧೀಶರುಗಳು ಗವರ್ನರಿಗೆ ವಿಧೇಯರಾಗಿರಕೂಡದೆಂದು ಆಶಿಸುವವರೆಲ್ಲ ನ್ಯಾಯಮೂರ್ತಿ ಮಾರಿಸ್‌ಗೆ ಓಟುಮಾಡುತ್ತಾರೆ!”

ನ್ಯಾಯವಾದಿ ಅಲೆಕ್ಸಾಂಡರ್ ತನ್ನ ಕೈಗಿತ್ತ ಹಸ್ತಪ್ರತಿಗಳನ್ನು ಜೆಂಗರ್ ಒಮ್ಮೆ ಅವಲೋಕಿಸಿದ: “ಮಾರಿಸ್ ಪರವಾದ ಈ ಹಸ್ತ ಪತ್ರಿಕೆಯನ್ನು ಮೊದಲು ಮುದ್ರಿಸಿಕೊಡುತ್ತೇನೆ.”

“ಮತ್ತೆ ಪತ್ರಿಕೆ ಹೊರಡಿಸುವುದಕ್ಕೂ ಇದೇ ಸರಿಯಾದ ಸಂದರ್ಭ!” ಅಲೆಕ್ಸಾಂಡರ್ ನುಡಿದ. “ಈ ವಾರ ಮುಗಿಯುವುದರೊಳಗೆ ಫಿಲಿಡೆಲ್ಫಿಯದಿಂದ ಸಹಾಯಕ ಕೆಲಸಗಾರನೊಬ್ಬನನ್ನು ಕರೆಸು

ತ್ತೇನೆ. ಬ್ರಾಡ್‌ಫರ್ಡ್ ತನ್ನ ಹಳ್ಳಿಲ್ಲದ ಗೆಜೆಟ್ಟಿನಲ್ಲಿ ಈ ಚುನಾವಣೆಯ ವಿಷಯಕ್ಕೆಡೆ ಕೊಡುವುದೇ ಇಲ್ಲವೆಂಬುದು ಖಚಿತ. ನ್ಯೂಯಾರ್ಕ್ ಜನತೆಗೆ ಈ ಅಂಶ ಗೊತ್ತಾಗಬೇಕು. ಅದರ ಅರ್ಥ ಏನೆಂಬುದನ್ನು ಅವರು ಅರಿತುಕೊಳ್ಳಬೇಕು !"

೧೭೩೩ ರ ಅಕ್ಟೋಬರ್ ೨೯ ರಂದು ನ್ಯಾಯಮೂರ್ತಿ ಮಾರಿಸ್ ಮತ್ತು ಅವನ ಬೆಂಬಲಿಗರು (ಈಗ ಮೌಂಟ್‌ವರ್ನನ್ ಎಂಬ ಹೆಸರು ಪಡೆದ) ಈಸ್ಟ್ ಚೆಸ್ಟರ್‌ಟನ್‌ನ ಗ್ರೀನ್ ಗ್ರಾಮದಲ್ಲಿ ವೈಭವದಿಂದ ಬಂದಿಳಿದರು. ಗವರ್ನರ್ ಕಾಸ್ಬಿ ಏನಾದರೂ ತೊಂದರೆ ಮಾಡಬಹುದೆಂದು ಊಹಿಸಿ, ಹಿಂದಿನ ಮಧ್ಯ ರಾತ್ರಿಯೇ ಬಂದು ಠಾಣ್ಯ ಹಾಕಿದ್ದ ಆ ಐವತ್ತು ಜನ ಬೆಳಗಾದೊಡನೆಯೇ ವಿಜಯಘೋಷಣೆ ಮಾಡುತ್ತ ಕುದುರೆಗಳನ್ನು ಹತ್ತಿ ಮೆರವಣಿಗೆ ಹೊರಟರು. ಊರಿನ ಬೀದಿಗಳಲ್ಲಿ ಹೊರಟ ಮೆರವಣಿಗೆಯಲ್ಲಿ ೩೦೦ ಮಂದಿ ಸವಾರರಿದ್ದರು. ಹಿಂದೆ ಯಾವ ಚುನಾವಣೆ ಕಾಲದಲ್ಲೂ, ಒಬ್ಬ ಸದಸ್ಯನಿಗಾಗಿ ಇಷ್ಟೊಂದು ಮಂದಿ ಮೆರವಣಿಗೆ ಹೊರಟುದನ್ನು ಕಂಡಿರದಿದ್ದ ಅಲ್ಲಿನ ಜನತೆ, ಅದನ್ನು ಆಸಕ್ತಿಯಿಂದ ವೀಕ್ಷಿಸಿದರು.

ಸೇಂಟ್ ಪಾಲ್ ಚರ್ಚ್ ಎದುರಿನ ಮೂರು ಹೋಟೆಲುಗಳು ಹಸಿರು ತೋರಣಗಳಿಂದ ಕಂಗೊಳಿಸುತ್ತಿದ್ದವು. ಜೋಸೆಫ್ ಫೌಲರ್ ಮತ್ತು ಜೈಲ್ಸ್‌ನ ಹೋಟೆಲುಗಳಲ್ಲಿ ಅಗಾಧ ಸಿದ್ಧತೆಯಾಗಿತ್ತು. ಹತ್ತಿರದ ತನ್ನ ಮಾರಿಸಾನಿಯೂ ಎಸ್ಟೇಟಿನಿಂದ ಮಾರಿಸ್ ಆಹಾರ ಪದಾರ್ಥಗಳನ್ನೂ, ಮದ್ಯವನ್ನೂ, ಅಡಿಗೆಯವರನ್ನೂ ಕಳಿಸಿದ್ದ. ಅವನ ನೆರೆಯವರು ಕೆಲವರೂ ಅದೇ ಕೆಲಸ ಮಾಡಿದ್ದರು. ಹಿಂದಿನ ಹಿಮ ರಾತ್ರಿಯಲ್ಲಿ ಕುದುರೆ ಸವಾರಿಯ, ಪಹರೆ ಕಾರ್ಯಗಳಿಂದ ಬಳಲಿದ್ದ ಆ ಓಟುದಾರರು ಹಸಿದಿದ್ದು ಸುಖಭೋಜನ ಮಾಡಿದರು.

ಸುಮಾರು ಹನ್ನೊಂದು ಗಂಟೆಯ ಸಮಯದಲ್ಲಿ "ಮಿಯ್ಯಾವ್" ಕೂಗುಗಳು ಕೇಳಿ ಬಂದು, ಹೋಟೆಲುಗಳಲ್ಲಿದ್ದವರೆಲ್ಲರ ಗಮನ ಸೆಳೆಯಲ್ಪಟ್ಟಿತು. ಜೆಂಗರ್ ಕೈಲೊಂದು ಮಾಂಸ ಮೆತ್ತಿದ ದೊಡ್ಡ ರೊಟ್ಟಿಯ ತುಂಡನ್ನು ಹಿಡಿದು, ಕಿಟಕಿಯೊಂದರ ಮೂಲಕ ಇಣುಕಿ

ನೋಡಿದ. ಗವರ್ನರ್ ಕಾಸ್ಬಿಯ ಉಮೇದುವಾರ ಗಲ್ಲಿಯೊಂದರಲ್ಲಿ ಕುದುರೆಯೇರಿ ಬರುತ್ತಿದ್ದ. ಪೂರ್ವದಿಂದ ಬರುತ್ತಿದ್ದ ಅವನ ಹಿಂದೆ ಸವಾರರ ತಂಡವೊಂದಿತ್ತು.

ಗವರ್ನರನ ಸ್ಪರ್ಧಿಯಾದ ಈ ವಿಲಿಯಂ ಫಾಸ್ಟರ್ ವೆಸ್ಟ್‌ಚೆಸ್ಟರ್ ಚರ್ಚಿಗೆ ಸೇರಿದ ಶಾಲೆಯೊಂದರ ಬಡ ಉಪಾಧ್ಯಾಯ. ಅದು ಹೇಗೋ ೧೦೦ ಪಿಸ್ಟೋಲ್‌ಗಳಷ್ಟು ಹಣವನ್ನು ಹೊಂಚಿ, ಗವರ್ನರಿಗೆ ಲಂಚವಾಗಿ ಕೊಟ್ಟು ಆ ಕೌಂಟಿ ಕೋರ್ಟಿನ ಗುಮಾಸ್ತೆ ಸ್ಥಾನವನ್ನು ಗಿಟ್ಟಿಸಿದ್ದ. ಈಗ ಶಾಸನ ಸಭೆಗೆ ಚುನಾಯಿತನಾಗಬೇಕೆಂಬ ಹಂಬಲ ಅವನನ್ನು ಕಾಡುತ್ತಿತ್ತು. (ಪಿಸ್ಟೋಲ್ ಸ್ಪಾನಿಷ್ ನಾಣ್ಯ ನ್ಯೂಯಾರ್ಕಿನಲ್ಲಿ ಹೆಚ್ಚಾಗಿ ಚಲಾವಣೆಯಲ್ಲಿತ್ತು. ಒಂದು ಪಿಸ್ಟೋಲ್ ಸುಮಾರು ನಾಲ್ಕು ಡಾಲರುಗಳಿಗೆ ಸಮ.)

ಬೆಚ್ಚಿದ ಜೆಂಗರ್ ಮಾಂಸದ ತುಂಡನ್ನು ಎತ್ತಿಹಾಕಿದ. ಇಲ್ಲಿ ನಡೆಯುವುದನ್ನೆಲ್ಲ ತನ್ನ ಪತ್ರಿಕೆಗೆ ವರದಿಮಾಡಬೇಕಾಗಿರುವುದನ್ನು ಜ್ಞಾಪಿಸಿಕೊಂಡು, ಪೂರ್ಣ ವಿವರಗಳನ್ನು ಅರಿಯುವ ಸಲುವಾಗಿ ಹೊರಕ್ಕೆ ನಡೆದ. ಅದು ಅವನು ಸಲ್ಲಿಸಲಿದ್ದ ಮೊದಲ ವರದಿ. ಅಂತೆ ತಾನು ಅಮೂಲ್ಯ ಕಾರ್ಯಭಾರ ಹೊತ್ತಿರುವುದಾಗಿ ಭಾವಿಸಿದ. ಹಾಗೆಯೇ ಸ್ವಲ್ಪ ಮಟ್ಟಿಗೆ ದಿಕ್ಕು ತೋಚದಂತೆಯೇ ಆದ. ಏನೇನನ್ನು ಮುದ್ರಿಸುವ ಧೈರ್ಯವನ್ನು ತಾನು ತಾಳಬಹುದು? ಗವರ್ನರಿಗೆ ಒಪ್ಪಿಗೆಯಿಲ್ಲದ ಸಂಗತಿಗಳನ್ನು ಮುದ್ರಿಸಿದರೇನಾದೀತು?

ಗ್ರೀನ್‌ನಲ್ಲಿ ನಡೆಯುತ್ತಿದ್ದ ಮೆರವಣಿಗೆಯನ್ನು ವೀಕ್ಷಿಸಿದ. ಗವರ್ನರನ ಉಮೇದುವಾರನ ಹಿಂದೆ, ಧ್ವಜಗಳನ್ನು ಹಿಡಿದ ಇಬ್ಬರು, ಅವರ ಹಿಂದೆ ಸುಪ್ರೀಂ ಕೋರ್ಟಿನ ಹೊಸ ಶ್ರೇಷ್ಠ ನ್ಯಾಯಮೂರ್ತಿ ಜೇಂಸ್ ಡಿಲಾನ್ಸೆ, ಮತ್ತು ಇನ್ನೊಬ್ಬ ನ್ಯಾಯಮೂರ್ತಿ ಫ್ರೆಡರಿಕ್ ಫಿಲಿಪ್ಸೆ. ಜೆಂಗರ್ ಈ ದೃಶ್ಯವನ್ನು ಕಂಡು ವಿಸ್ಮಿತನಾದ. "ನ್ಯಾಯಮೂರ್ತಿ ಡಿಲಾನ್ಸೆಗೆ ಇಲ್ಲೇನು ಕೆಲಸ? ಅವನೇನೂ ವೆಸ್ಟ್ ಚೆಸ್ಟರ್ ನಿವಾಸಿಯಲ್ಲ" ಎಂದು ಪಾಪ್ಯುಲರ್ ಪಾರ್ಟಿಯವನೊಬ್ಬನು ಹೇಳಿದ ಮಾತು ಕೇಳಿಸಿತು.

"ಅಲೆಕ್ಸಾಂಡರ್ ಕೂಡ ವೆಸ್ಟ್ ಚೆಸ್ಟರ್‌ನವನಲ್ಲ" ಇನ್ನೊಬ್ಬ ಉತ್ತರಿಸಿದ. "ನಮ್ಮ ನಾಯಕನಾಗಿ ಅವನಿಲ್ಲಿದ್ದಾನೆ. ಹಾಗೇ, ನ್ಯಾಯಮೂರ್ತಿ ಡಿಲಾನ್ಸೆ ಇನ್ನೊಂದು ಪಕ್ಷದ ನಾಯಕನಾಗಿ ಧೈರ್ಯ ತುಂಬಲು ಬಂದಿದ್ದಾನೆ. ಇಂಥ ಧೈರ್ಯ ಅವರ ಪಕ್ಷಕ್ಕೆ ಇನ್ನೂ ಹೆಚ್ಚಾಗಿ ಬೇಕು. ಅವರ ಸಂಖ್ಯೆ ನೋಡು, ಎಷ್ಟು ಅಲ್ಪ!"

ಜೆಂಗರ್ ಸವಾರರನ್ನು ಎಣಿಕೆ ಮಾಡಿದ: ೧೭೦; ಮಾಜಿ ನ್ಯಾಯಮೂರ್ತಿ ಮಾರಿಸ್‌ಗಿರುವ ಬೆಂಬಲದ ಅರ್ಧದಷ್ಟು. ಜೆಂಗರ್‌ಗೆ ನಗು ಬಂತು.

ನೋಟಕರ ಮುಂಚೂಣಿಯಲ್ಲಿದ್ದ ಜೆಂಗರ್. ಫಾಸ್ಟರ್ ಶಿಲಾಪ್ರತಿಮೆಯಂತೆ ಕುಳಿತಿದ್ದ. ಅನಂತರ ಬಂದ ನ್ಯಾಯಮೂರ್ತಿ ಡಿಲಾನ್ಸೆ ಮತ್ತು ನ್ಯಾಯಮೂರ್ತಿ ಫಿಲಿಪ್ಸೆ, ಎರಡು ವರ್ಷಗಳ ಕಾಲ ಮಾರಿಸ್ ಜೊತೆ ನ್ಯಾಯ ಮಂಡಲದಲ್ಲಿ ಕುಳಿತುಕೊಳ್ಳುತ್ತಿದ್ದರು. ಫಿಲಿಪ್ಸೆ ಬಹು ವಿನಯದಿಂದ ಹ್ಯಾಟೆತ್ತಿ ಮಾರಿಸ್ಸಿಗೆ ನಮಸ್ಕರಿಸಿದ. ವಿಸ್ಮಯಗೊಂಡ ಮಾರಿಸ್ ಮುಗುಳು ನಗೆ ಬೀರಿ, ಹ್ಯಾಟೆತ್ತಿ ಪ್ರತಿ ವಂದಿಸಿದ.

ನ್ಯಾಯಮೂರ್ತಿ ಡಿಲಾನ್ಸೆ ಔಡು ಕಚ್ಚಿ, ದಿಟ್ಟಿಸಿ ನೋಡಿ, ಏನೊಂದು ಭಾವವನ್ನೂ ವ್ಯಕ್ತಪಡಿಸದೆ ಕುದುರೆಯ ಮೇಲೆ ಸಾಗಿ ಹೋದಾಗ, ಜೆಂಗರನ ನಗುಮುಖ ಕಮರಿತು. ಡಿಲಾನ್ಸೆಯ ಮುಖ ದಲ್ಲಿ ಕೋಪದ ಕಿಡಿಯುದುರುತ್ತಿದ್ದುದನ್ನು ಕಂಡಾಗ, ಅವನದು ವಿನೀತವಾದ ಭಿನ್ನಾಭಿಪ್ರಾಯ ಎನಿಸಲಿಲ್ಲ. ಹೋರಾಟದ ಬಿಗಿಮುಷ್ಟಿ ಕದನಕ್ಕೆ ಕರೆಯುತ್ತಿರುವಂತೆ ಕಂಡುಬಂತು.

ಕೋರ್ಟ್ ಪಕ್ಷ ಗ್ರೀನ್‌ನಲ್ಲಿ ಎರಡು ಸಾರೆ ಮಾತ್ರಾ ಸುತ್ತು ಹಾಕಿತು. ಎದುರು ಪಕ್ಷದವರ ಸಂಖ್ಯೆ ತಮಗೆರಡರಷ್ಟಿದ್ದುದನ್ನು ಕಂಡಾಗ ಅವರ ಮುಖಗಳಲ್ಲಿ ನಿರಾಶೆ ಮೂಡಿತು. ಅವರೆಲ್ಲ ಮೂರ ನೆಯ ಹೋಟೆಲಿಗೆ ಹೋದರು. ಭಾರಿ ಶ್ರೀಮಂತನಾದ ನ್ಯಾಯ ಮೂರ್ತಿ ಡಿಲಾನ್ಸೆ, ಮುಂಚಿತವಾಗಿಯೇ ಹನ್ನೆರಡು ಕುರಿಗಳಿಗೆ ದುಡ್ಡು ಕೊಟ್ಟಿದ್ದ.

ಗಂಭೀರವದನರಾದ ಕೆಲಮಂದಿ ಕ್ವೇಕರುಗಳೂ ಮಾರಿಸ್ ಪಕ್ಷಕ್ಕೆ ಸೇರಿದ್ದುದನ್ನು ಕಂಡು ಜೆಂಗರ್ ಕುತೂಹಲಿಯಾದ. ಹ್ಯಾಟು ಗಳಿಗೆ ಬೆಳ್ಳಿಯ ಬಕಲ್ಸ್‌ಗಳನ್ನಾಗಲಿ, ಕೋಟುಗಳಿಗೆ ಬೆಳ್ಳಿ ಗುಂಡಿ ಗಳನ್ನಾಗಲಿ, ಮತ್ತಾವುದೇ ಅಲಂಕಾರ ವಸ್ತುಗಳನ್ನಾಗಲಿ ಅವರು ಧರಿಸಿರಲಿಲ್ಲ; ಅಂತೆ ಅವರೆಲ್ಲ ಕ್ವೇಕರುಗಳು ಎಂದು ಹೇಳಬಲ್ಲವನಾ ಗಿದ್ದ. ಫಾರ್ಸ್ಟರ್ ಬಂದ ಒಂದು ಗಂಟೆಯ ನಂತರ, "ಷರೀಫ್ ಬರುತ್ತಿದಾರೆ" ಎಂಬ ಕೂಗುಗಳು ಕೇಳಿಬಂದವು.

ಚುನಾವಣಾ ಪ್ರಕಟನೆಯ ಮೇಲೆ ಅವನ ಹೆಸರನ್ನು ನಿಕೊ ಲಾಸ್ ಕೂಪರ್ ಎಂದು ಮುದ್ರಿಸಲಾಗಿತ್ತು. ಆದರೆ ಜೆಂಗರ್ ಅವನ ನ್ನೆಂದೂ ನೋಡಿರಲಿಲ್ಲ. ಕುಳ್ಳನೆನ್ನುವಷ್ಟು ಗಿಡ್ಡ; ಅವನದು ಅಸ್ಮಿತ ವದನ. ಅವನೇರಿದ್ದ ಠಾಕಣ ಬಹು ಸೊಗಸಾದುದು. ಅದನ್ನು ಕಂಡು ಜನ ಸಿಳ್ಳುಹಾಕುತ್ತಿದ್ದರು. ಒಬ್ಬ ಕೂಗಿದ "ಆ ಜೀನು, ಆಸನ ಎಲ್ಲಾ ಯಾರದೆಂದು ನನಗೆ ಗೊತ್ತು!"

ಎಲ್ಲರೂ ಗುಂಪು ಕೂಡಿ ಅವನೆಡೆ ನೋಡಿದರು. ರಕ್ತವರ್ಣ ದಿಂದ ಅಲಂಕೃತವಾಗಿದ್ದ ಪಿಸ್ತೂಲು, ಕತ್ತಿಗಳು ಅವನಿಂದ ತೂಗಿ ಬಿದ್ದಿದ್ದವು. ಆಯುಧಗಳಿಗೆ ಬೆಳ್ಳಿಯ ಕವಚಗಳು. ಮತ್ತೊಬ್ಬ ಕೂಗಿದ "ಆ ಪಿಸ್ತೂಲು ಒಂದು ವಾರ ಮುಂಚೆ ಗವರ್ನರ್ ವಿಲಿಯಂ ಕಾಸ್ಬಿಗೆ ಸೇರಿತ್ತು!"

"ಕತ್ತಿಯೂ ಅಷ್ಟೆ!" ಇನ್ನೊಬ್ಬ ವ್ಯಾರ್ನುಡಿದ.

"ಕುದುರೆಯೂ ಅಷ್ಟೆ!" ಜೆಂಗರ್ ಕಿರುಚಿದ. ಕಾಸ್ಬಿಯ ಕುದುರೆಗಳ ಕಡೆಗೆ ಅವನ ಆಸಕ್ತಿಯನ್ನು, ಮಗ ಜಾರ್ಜ್ ಸೆಳೆದಿದ್ದ.

ಎರಡು ಪಕ್ಷಗಳ ಓಟರುಗಳೂ ಹೊರಕ್ಕೆ ಬಂದರು. ಚರ್ಚ್ ಮುಂಬದಿಯ ದಿಣ್ಣೆಯ ಮೇಲೆ ನಿಂತ ಷರೀಫ್, ಕಾಗದದ ಸುರುಳಿ ಯೊಂದನ್ನು ಬಿಚ್ಚಿ ಗಟ್ಟಿಯಾಗಿ ಸರಸರನೆ ಓದಿದ. ಆ ಘೋಷಣೆ ಜನಕ್ಕೆ ಅರ್ಥವಾಗಬೇಕೆಂಬುದೇನೂ ಅಷ್ಟು ಪ್ರಾಮುಖ್ಯವಾಗಿರಲಿಲ್ಲ. ಈ ಜನ ಎಷ್ಟೋ ಸರತಿ ಕೌಂಟಿ ಚುನಾವಣೆಗಳಿಗೆ ಹೋಗಿದ್ದರು. ಓಟುಗಳನ್ನು ಎಣಿಸುವ ಅಧಿಕಾರವನ್ನು ಷರೀಫಿಗೆ ನೀಡುವ ಗವರ್ನರ್

ಘೋಷಣೆಯದು. ಓದು ಮುಗಿದ ನಂತರ ಗಟ್ಟಿಯಾಗಿ ಕೂಗಿದ "ಓಟುದಾರರೆಲ್ಲ ಆಯ್ಕೆಗೆ ಹೊರಡಿ !"

ಓಟರುಗಳನ್ನು ಎರಡು ಸಾಲಾಗಿ ನಿಲ್ಲಿಸುವ ಸರಳವಾದ ಎಣಿಕೆಯ ಮಾರ್ಗ ಅನುಸರಿಸುವುದೇ ಇದರರ್ಥವೆಂದು ನ್ಯಾಯಮೂರ್ತಿ ಡಿಲಾನ್ಸೆ ಮತ್ತು ಉಮೇದುವಾರ ಫಾರ್ಸ್ಟರ್ ಭಾವಿಸಿದರು. "ಗವರ್ನರ್ ಆಯ್ಕೆಗೆ ಒಪ್ಪುವ ವಿಧೇಯ ಓಟುದಾರರೆಲ್ಲ ಬಲ ಬದಿಗೆ ನಿಲ್ಲಿ !" ಶ್ರೇಷ್ಠ ನ್ಯಾಯಮೂರ್ತಿ ಆಜ್ಞಾಪಿಸಿದ.

ಮಾಜಿ ನ್ಯಾಯಮೂರ್ತಿ ಈ ಸವಾಲನ್ನು ಸಂತೋಷದಿಂದ ಸ್ವೀಕರಿಸಿ ತನ್ನ ಕಡೆಯವರೆಲ್ಲ ತನ್ನ ಜೊತೆ ನಿಲ್ಲಬೇಕೆಂದು ಕೇಳಿಕೊಂಡ. ಸ್ಪಷ್ಟವಾಗಿಯೇ ಗವರ್ನರ್ ಪಕ್ಷಕ್ಕಿಂತ ಅಧಿಕ ಸಂಖ್ಯಾತರಾಗಿದ್ದ ಅವರು ನಗುತ್ತ ಹರ್ಷ ಧ್ವನಿಗೈಯುತ್ತ ಬಂದು ನಿಂತರು.

ಆದರೆ ಫಲಿತಾಂಶ ಕಂಡ (ಗವರ್ನರ್ ನೇಮಿತ) ಷರೀಫನ ಮುಖ ಗಂಟಿಕ್ಕಿತು. ತನ್ನ ಗಿಡ್ಡು ಕೈಗಳನ್ನು ಬೀಸಿ, ಗೊಣಗಿದ. "ತಲೆಯೆಣಿಕೆಯಾಗಬೇಕೆಂದು ಕೇಳಲಾಗಿದೆ!"

"ಕೇಳಿದವರಾರು ?" ಅಲೆಕ್ಸಾಂಡರ್ ಒಂದು ಹೆಜ್ಜೆ ಮುಂದಿಟ್ಟು ಗಟ್ಟಿಯಾಗಿ ಕೇಳಿದ. ಮುದುರಿದ ಕೋಟು ಧರಿಸಿದ್ದ ಅವನು ಇನ್ನಷ್ಟು ಎತ್ತರವಾಗಿ ಕಂಡ. ತಲೆಯೆಣಿಕೆಯಾಗಲೆಂದು ಕೇಳಿದ್ದು ಯಾರ ಕಿವಿಗೂ ಬಿದ್ದಿರಲಿಲ್ಲ. "ಯಾರೂ ಕೇಳದಿರುವಾಗ, ಕೇಳಿದಾರೆಂದು ಹೇಳುವ ಅಗತ್ಯವೇನು ?"

"ತಲೆಯೆಣಿಕೆ ಆಗಲೇಬೇಕು" ಷರೀಫ್ ಹಠದಿಂದ ನುಡಿದ.

ಮಾರಿಸ್ ಮುಂದೆ ಬಂದು "ಯಾವಕಡೆ ಬಹುಮತವಿದೆ ?"

"ತಲೆಯೆಣಿಕೆಯಾಗಲೇಬೇಕು" ಷರೀಫ್‌ನದು ಮತ್ತೆ ಅದೇ ಉತ್ತರ.

ಮಾರಿಸ್ ಮತ್ತೆ, ಮತ್ತೆ ಪ್ರಶ್ನೆ ಹಾಕಿದ. ಕೋಪ ನೆತ್ತಿಗೇರುತ್ತಿತ್ತು. ಆದರೆ ಷರೀಫ್ ಒಂದೇ ಉತ್ತರ ಕೊಡುತ್ತಿದ್ದ.

ಜೀವಮಾನದುದ್ದಕ್ಕೂ ತನ್ನ ಮಾತು ಕಟ್ಟಾಜ್ಞೆಯಂತೆ ಪಾಲಿತವಾಗುತ್ತಿದ್ದುದನ್ನು ಕಂಡಿದ್ದ, ಮಾರಿಸಾನಿಯಾ ಭೂಸ್ವಾಮಿಗೆ ಸಿಟ್ಟು

ತಡೆಯಲಿಲ್ಲ.

ಮುಂಮುಂಟಪವಿದ್ದ ಹೋಟೆಲನ್ನು ಆರಿಸಿ ಅದರ ಬಳಿಗೆ ಷರೀಫ್ ಸಾಗಿದ. ಎರಡೂ ಪಕ್ಷದವರಲ್ಲಿ ಚರ್ಚೆಯ ಬಿರುಗಾಳಿಯೆದ್ದಿತು. ಕುರ್ಚಿ, ಬೆಂಚು, ಮೇಜುಗಳನ್ನು ಹಾಕಿ, ಇಬ್ಬರು ಗುಮಾಸ್ತರನ್ನೂ, ಒಂದೊಂದು ಪಕ್ಷದಿಂದ ಇಬ್ಬಿಬ್ಬರು ನಿರೀಕ್ಷಕರನ್ನೂ ನೇಮಿಸುವ ಹೊತ್ತಿಗೆ ಎರಡು ಗಂಟೆ ಕಳೆದಿತ್ತು. ಕಟ್ಟಕಡೆಗೆ ಮತದಾನ ಆರಂಭ ವಾಯಿತು.

ರಹಸ್ಯ ಮತದಾನವೆಂಬುದೇ ಅವರಿಗೆ ತಿಳಿದಿರಲಿಲ್ಲವಾಗಿ, ಪ್ರತಿಯೊಬ್ಬ ವೋಟರನೂ ಗುಂಪಿನ ಮುಂದೆ ನಿಂತು, ತನ್ನ ಹೆಸರು ಹೇಳಿ, ತನ್ನ ಮತ ಯಾವ ಪಕ್ಷಕ್ಕೆ ಎಂಬುದನ್ನೂ ಸಾರಿ ಹೇಳಬೇಕಿತ್ತು. ಈ ಹಳೇ ಪದ್ಧತಿಯಲ್ಲೂ ಒಂದು ಸೌಲಭ್ಯವಿತ್ತು. ಐನೂರು ಮಂದಿ ಸಾಕ್ಷಿಗಳ ಸಮ್ಮುಖದಲ್ಲಿ ಪ್ರತಿಯೊಬ್ಬನೂ ಮತ ಸಲ್ಲಿಸುತ್ತಿದ್ದದ್ದರಿಂದ, ಗವರ್ನರ್ ಕಾಸ್ಬಿಯಾಗಲಿ, ಷರೀಫ್ ಆಗಲಿ ಸುಳ್ಳು ಮತ ಸಂಗ್ರಹ ಮಾಡುವ ಅವಕಾಶವಿರಲಿಲ್ಲ. ಅಲೆಕ್ಸಾಂಡರ್, ಜೆಂಗರರಿಬ್ಬರೂ ಓಟಿನ ಲೆಖ್ಖ ಬರೆದುಕೊಳ್ಳುತ್ತಿದ್ದರು. ಹಾಗೇ ಇನ್ನೂ ಎಷ್ಟೋ ಜನ ಗುರುತು ಹಾಕಿಕೊಳ್ಳುತ್ತಿದ್ದರು.

ಮತದಾರನೊಬ್ಬ ಮಾರಿಸ್‌ಗೆ ವೋಟು ಕೊಡಲು ಬಂದಾಗ ಗವರ್ನರ್ ಪಕ್ಷದ ನಿರೀಕ್ಷಕ ಆಕ್ಷೇಪಣೆ ಎತ್ತಿದ. 'ಆತನಿಗೆ ವೆಸ್ಟ್ ಚೆಸ್ಟರ್‌ನಲ್ಲಿ ಭೂಮಿಯಿಲ್ಲ, ಮನೆಯಿಲ್ಲ, ದನಕರುಗಳಿಲ್ಲ, ಕಡೆಗೆ ೪೦ ಪೌಂಡು ಬಾಳುವ ಆಸ್ತಿಕೂಡ ಇಲ್ಲ. ಆದ್ದರಿಂದ ವೋಟಿನ ಹಕ್ಕಿಲ್ಲ' ಎಂದು ವಾದಿಸತೊಡಗಿದ.

ಮತದಾರನ ಕೆಲವು ಸ್ನೇಹಿತರು, ಆತನು ತಮಗೆ ಗೊತ್ತೆಂದೂ, ವೋಟಿನ ಹಕ್ಕುಳ್ಳವನೆಂದೂ ಕೂಗಿದರು. ಅಷ್ಟರಿಂದ ತೃಪ್ತನಾಗದ ಷರೀಫ್ "ಬೈಬಲ್ ತನ್ನಿ, ಪ್ರಮಾಣಮಾಡಲಿ!" ಎಂದು ಒತ್ತಾಯ ಪಡಿಸಿದ.

ಯಾರೋ ಒಬ್ಬರು ಚರ್ಚಿಗೆ ಓಡಿ ಬೈಬಲ್ ತರುವ ಹೊತ್ತಿಗೆ ಸ್ವಲ್ಪ ತಡವಾಯಿತು. ಮತದಾರ ಅದರ ಮೇಲೆ ಕೈಯಿಟ್ಟು ತನಗೆ

ಭೂಮಿಯಿದೆಯೆಂದು ಪ್ರಮಾಣಮಾಡಿ, ಮತವಿತ್ತ.

ಹ್ಯಾಟಿನಲ್ಲಿ ಸಿಲ್ವರ್ ಬಕಲ್ ಇಲ್ಲದಿದ್ದವನೊಬ್ಬ ಮೇಜಿನ ಬಳಿಗೆ ಬಂದು ತನ್ನ ಹೆಸರು ಹೇಳಿ, "ನನ್ನ ಓಟು ಮಾರಿಸ್‌ಗೆ" ಎಂದು ಒತ್ತಿ ನುಡಿದ.

ಉಮೇದುವಾರ ಫಾರ್ಸ್ಟರ್ ಒಡನೆ ತನ್ನ ನಿರೀಕ್ಷಕರ ಕಿವಿಗಳಲ್ಲಿ ಪಿಸುಗುಟ್ಟಿದ. "ಈತನಿಗೆ ಸಾಕಷ್ಟು ಭೂಮಿಕಾಣಿ ಇದೆಯೇ ?" ಅವರಿಬ್ಬರು ತತ್‌ಕ್ಷಣ ಪ್ರಶ್ನೆ ಹಾಕಿದರು.

ಮಾರಿಸ್‌ನ ಕಡೆಯವರನೇಕರು ತಮಗೆ ಆ ಮತದಾರ ಗೊತ್ತೆಂದೂ, ಅವನಿಗೆ ಸಾಕಷ್ಟು ದೊಡ್ಡ ಎಸ್ಟೇಟ್ ಇದೆಯೆಂದು ತಾವು ಸಾಕ್ಷ್ಯ ನೀಡುವುದಾಗಿಯೂ ನುಡಿದರು.

ಉದ್ರೇಕಗೊಂಡ ಷರೀಫ್ ಶಿಸ್ತಿನ ಕರೆಕೂಗಿ, ಆ ಕ್ವೇಕರನ ಮುಂದೆ ಬೈಬಲ್ ಹಿಡಿದ. "ನಿನಗೆ ಎಸ್ಟೇಟಿದೆಯೆಂದು ಈ ಪುಸ್ತಕದ ಮೇಲೆ ಕೈಯಿಟ್ಟು ಪ್ರಮಾಣಮಾಡುವಿಯೇನು ?"

ಕ್ವೇಕರ್ ಒಂದು ಹೆಜ್ಜೆ ಹಿಂದಿಟ್ಟ. ತತ್‌ಕ್ಷಣ ಪಾಪ್ಯುಲರ್ ಪಕ್ಷದ ಕಡೆಯಿಂದ ಪ್ರತಿಭಟನೆಗಳು ಕೇಳಿ ಬಂದವು. ಕ್ವೇಕರರ ಮತಧರ್ಮ ಪ್ರಮಾಣ ಕ್ರಮಕ್ಕೆ ನಿಷೇಧ ಹಾಕಿದೆ ; ಅವರ ನುಡಿಯೇ ಅವರ ಪ್ರಮಾಣ. ಎಷ್ಟೋ ಮಂದಿಯ ಪ್ರಮಾಣಕ್ಕಿಂತಲೂ ಅವರಿಗೆ ಹೆಚ್ಚಿನ ಮೌಲ್ಯದ್ದು, ಕಾನೂನು ಕೂಡ ಅವರಿಗೆ ಈ ವಿಶೇಷ ಹಕ್ಕನ್ನು ನೀಡಿದೆ – ಎಂಬುದು ಪ್ರತಿಯೊಬ್ಬರಿಗೂ ತಿಳಿದಿತ್ತು.

ಆ ಕ್ವೇಕರ್ ಮುಂಚಿನ ಸ್ಥಿರ ಧ್ವನಿಯಲ್ಲಿಯೇ ನುಡಿದ. "ಧರ್ಮ ಪುರಸ್ಸರವಾಗಿ ಒತ್ತಿ ಹೇಳುತ್ತೇನೆ, ೪೦ ಪೌಂಡುಗಳ ಹಲವಾರು ಪಟ್ಟು ಬೆಲೆಯ ಎಸ್ಟೇಟ್ ವೆಸ್ಟ್ ಚೆಸ್ಟರ್‌ನಲ್ಲಿ ನನಗಿದೆ !"

"ಬೈಬಲ್ ಆಣೆಯಿಟ್ಟು ಪ್ರಮಾಣ ಮಾಡುವುದಿಲ್ಲವಾದರೆ, ನೀನು ಓಟು ಮಾಡಲಾರೆ" ಷರೀಫ್ ಮತ್ತೆ ಒತ್ತಾಯದ ಮಾತನ್ನಾಡಿದ.

ಒಡನೆ ಮಾರಿಸ್ ಬಳಗದಿಂದ ಕೋಪೋದ್ರಿಕ್ತ ಕೂಗುಗಳು ಕೇಳಿಬಂದವು. ಷರೀಫನ್ನುದ್ದೇಶಿಸಿ ಮಾರಿಸ್ ನುಡಿದ, "ಇಂಥ

ಮಾತನಾಡಲು ನಿನಗೆಷ್ಟರ ಧೈರ್ಯ? ಈ ರೀತಿ ಓಟುಮಾಡಲು ಎಲ್ಲಾ ಚುನಾವಣೆಗಳೂ ಕ್ವೇಕರರಿಗೆ ಅನುಮತಿ ನೀಡಿವೆ. ಇಂಗ್ಲೆಂಡಿನ ಕಾನೂನುಗಳಲ್ಲೂ, ನ್ಯೂಯಾರ್ಕ್ ಪ್ರಾಂತ್ಯದ ಕಾನೂನುಗಳಲ್ಲೂ ಇಂಥ ಅವಕಾಶವನ್ನು ಸ್ಪಷ್ಟವಾಗಿ ಕಲ್ಪಿಸಲಾಗಿದೆ. ಎಂಟು ವರ್ಷಗಳ ಕಾಲ ಸುಪ್ರೀಂ ಕೋರ್ಟಿನ ಶ್ರೇಷ್ಠ ನ್ಯಾಯಾಧಿಪತಿಯಾಗಿದ್ದ ನನಗೆ ಇದೆಲ್ಲಾ ಗೊತ್ತು!"

ನ್ಯಾಯವಾದಿಗಳಾದ ಅಲೆಕ್ಸಾಂಡರ್ ಮತ್ತು ಅವನ ಸಹ ನ್ಯಾಯವಾದಿ ಸ್ಮಿತ್ ಇಬ್ಬರೂ ಇದೇ ಮಾತನ್ನು ಷರೀಫಿಗೆ ತಿಳಿಸಿದರು. ಸಮಗ್ರ ವಸಾಹತಿನಲ್ಲೇ ಇವರಷ್ಟು ಕಾನೂನಿನ ಪುಸ್ತಕಗಳನ್ನು ಓದಿದವರು ಇಲ್ಲವೆಂಬುದನ್ನು ತಿಳಿದಿದ್ದ ಗುಂಪು, ಅವರುಗಳ ಮಾತುಗಳನ್ನು ಆಸಕ್ತಿಯಿಂದ ಆಲಿಸಿತು. ಸ್ಮಿತ್ ಎದೆಯುರಳಿಸಿ ಗುಡುಗಿದ, "ಈ ರೀತಿ ಕ್ವೇಕರರಿಗೆ ಓಟು ನಿರಾಕರಿಸುವುದು ಕಾನೂನಿಗೆ ವಿರೋಧ, ಮಾನವತಾ ಹಕ್ಕಿನ ಅಕ್ಷಮ್ಯ ಉಲ್ಲಂಘನೆ!"

ಷರೀಫ್ ಇದ್ದಕ್ಕಿದ್ದಂತೆ ಕಿವುಡನಾದ.

ಪಾಪ್ಯುಲರ್ ಪಾರ್ಟಿಯ ಬೆಂಬಲಿಗನೊಬ್ಬ ಪ್ರಶ್ನೆ ಹಾಕಿದ "ಈ ಷರೀಫ್ ಯಾರೋ?"

ಇನ್ನೊಬ್ಬ ಉತ್ತರಿಸಿದ, "ನಾನೆಂದೂ ನೋಡಿಯೇ ಇಲ್ಲ". ಎಲ್ಲರೂ ಅವನನ್ನು ಕುರಿತೇ ಸಂಭಾಷಿಸತೊಡಗಿದರು.

ಈ ಷರೀಫ್ ಹೊಸಬ, ಎಂದೂ ವೆಸ್ಟ್ ಚೆಸ್ಟರ್‌ನಲ್ಲಿ ವಾಸಿಸಿರಲಿಲ್ಲ ಎಂಬುದನ್ನೆಲ್ಲ ಜೆಂಗರ್ ಬೇಗನೆ ಗೊತ್ತುಪಡಿಸಿಕೊಂಡ. ಕಾನೂನಿನ ರೀತ್ಯ, ಆ ಪ್ರದೇಶದಲ್ಲಿ ಜಮೀನನ್ನು ಹೊಂದದೆ, ಕೆಲ ಕಾಲವಾದರೂ ವಾಸಿಸದೆ ಯಾರೂ ಅಲ್ಲಿನ ಷರೀಫನಾಗುವಂತಿರಲಿಲ್ಲ.

ಅಲೆಕ್ಸಾಂಡರ್ ತನ್ನ ಮುಮ್ಮೂಲೆಯ ಹ್ಯಾಟನ್ನು ತಲೆಗೆ ಬಡಿದುಕೊಂಡು ಗಟ್ಟಿಯಾಗಿ ಕೂಗಿದ, "ಚುನಾವಣೆಯನ್ನು ಈ ರೀತಿ ನಡೆಸಲೆಂದೇ ಗವರ್ನರ್ ಕಾಸ್ಬಿ ಇವನನ್ನು ನೇಮಿಸಿದ್ದಾನೆ! ಸರಿ, ಸರಿ!"

ಇಷ್ಟೆಲ್ಲ ಸಂಭವಿಸುವಾಗ ಹೊಸ ಶ್ರೇಷ್ಠ ನ್ಯಾಯಮೂರ್ತಿ

ಡಿಲಾನ್ಸೆ ಮೌನವಾಗಿ ನಿಂತಿದ್ದ. ಅವನಿಗೂ ಕಾನೂನೆಲ್ಲ ಗೊತ್ತಿರಬೇಕು ತಾನೆ, ಆದರೂ ಬಾಯಿ ಬಿಡಲಿಲ್ಲ. ಕೆಲವರ್ಷಗಳ ಕೆಳಗೆ ಇದೇ ಶಾಸನ ಸಭೆಗೆ ಚುನಾಯಿತನಾಗಿದ್ದ ನ್ಯಾಯಮೂರ್ತಿ ಫಿಲಿಪ್ಸೆಗೂ ಚುನಾವಣೆಯ ಸಂಪ್ರದಾಯವೆಲ್ಲ ಪರಿಚಿತವಿರಲೇಬೇಕು. ಅವನೂ ಏನೂ ತೋಚದೆ ಅಡ್ಡಾಡತೊಡಗಿದ. ಅಷ್ಟೇ ಹೊರತು ಬಾಯಿಬಿಡಲಿಲ್ಲ.

ಇಷ್ಟೆಲ್ಲ ಪ್ರತಿಭಟನೆ ಇದ್ದರೂ ಷರೀಫ್ ಕ್ವೇಕರುಗಳಾರಿಗೂ ವೋಟಿನವಕಾಶ ಕೊಡಲೇ ಇಲ್ಲ. ಮಾರಿಸ್‌ಗೆ ಬಲಿರದ್ದ ೩೮ ವೋಟುಗಳು ಈ ರೀತಿ ತಪ್ಪಿಹೋದವು.

ಪಾಪ್ಯುಲರ್ ಪಾರ್ಟಿಯ ಕಳೆ ಸಂಪೂರ್ಣವಾಗಿ ಬದಲಾಯಿಸಿತು. ಸಿಟ್ಟೂ, ಮಂಕೂ ಅವರನ್ನು ಕವಿದಿತ್ತು. ಏನೋ ಗಲಭೆ ಮಾಡುತ್ತಿದ್ದರು.

ನಾನಾ ಬಗೆಯ ವಾದವಿವಾದಗಳಿಂದಾಗಿ ಮತದಾನ ಹೆಚ್ಚು ಅವಧಿ – ಸುಮಾರು ೯ ಗಂಟೆಗಳ ಕಾಲ – ಹಿಡಿಯಿತು.

ಬೆಂಕಿಯ ಕುಂಡ ಉರಿಯತೊಡಗಿತು. ಲಾಟೀನುಗಳು ಬಂದವು. ನಕ್ಷತ್ರಗಳು ಮಿನುಗಿದವು.

ರಾತ್ರಿ ಹನ್ನೊಂದು ಗಂಟೆಯ ಹೊತ್ತಿಗೆ ಎಣಿಕೆ ಮುಗಿಯಿತು. ಮಾರಿಸ್ಸಿಗೆ ೨೩೧ ; ಪಾಸ್ಟರ್‌ಗೆ ೧೫೧.

ಎಲ್ಲರೂ ಸುಸ್ತಾಗಿದ್ದರು. ಷರೀಫ್ ಕೂಡ ದಣಿದಿದ್ದ. "ಇನ್ನಾರಾದರೂ ಓಟುದಾರರಿದ್ದಾರೆಯೇ ?"

ಪೂರ್ಣ ಮೌನ.

ಮುಖ ಕಿವಿಚಿಕೊಂಡು, ಮಾರಿಸ್ ಕಡೆ ತಿರುಗಿ ಘೋಷಿಸಿದ "ನೀವು ಆಯ್ಕೆಯಾಗಿದ್ದೀರಿ, ನಿಮಗೆ ಸುಖವಾಗಲಿ !"

ಪಾಪ್ಯುಲರ್ ಪಕ್ಷದ ಕಡೆಯಿಂದ ಹರ್ಷಘೋಷಣೆಗಳಾದವು.

ಈ ಚುನಾವಣೆಯ ವಿವರಗಳನ್ನು ತಾನು ಮುದ್ರಿಸಿದಾಗ, ಅದೆಂತಹ ಅನ್ಯಾಯ, ಅಕ್ರಮಗಳ ಕಥೆಯಾದೀತೆಂಬುದನ್ನೂ ಯೋಚಿಸಿದ. ಜೆಂಗರ್, ಗಭೀರ ನಗೆ ನಕ್ಕ. ಗವರ್ನರಿಗೆ ಪ್ರಾಯಶಃ ಕೋಪೋದ್ರೇಕವಾದೀತು.

# ಅಧ್ಯಾಯ ೧೩

## ನಗರದಲ್ಲಿ ಬಲ ಪರೀಕ್ಷೆ

ಮರುದಿನ ಜೆಂಗರ್ ಮನೆಗೆ ಹಿಂತಿರುಗಿದಾಗ ಕೋಟೆಯಲ್ಲಿ ನಡೆಯುತ್ತಿದ್ದ ದೊರೆಯ ಜನ್ಮದಿನೋತ್ಸವದ ಅಂಗವಾಗಿ ಫಿರಂಗಿಗಳ ಸ್ಫೋಟನದ ಅಬ್ಬರ ಕೇಳಿ ಬಂತು. ಆದರೆ ಅವನನ್ನು ಉದ್ರೇಕಿಸಿದ್ದು ದೊರೆಯ ಜನ್ಮದಿನೋತ್ಸವ ಸಮಾರಂಭವಲ್ಲ. ಮುದ್ರಣಾಲಯದಲ್ಲಿ ಅಲ್ಲಿಂದಿಲ್ಲಿಗೆ ಹೆಜ್ಜೆ ಹಾಕುತ್ತ, ಕುತೂಹಲದಿಂದ ಕೇಳುತ್ತಿದ್ದ ಪತ್ನಿಗೂ ಮಕ್ಕಳಿಗೂ, ತಾನು ಚುನಾವಣೆಯಲ್ಲಿ ಕಂಡುದೇನು, ಮಾಡಿದ್ದೇನು ಎಂಬುದನ್ನೆಲ್ಲ ವಿವರಿಸುತ್ತಿದ್ದ. ಕ್ಯಾಥರೀನ್ ಮತ್ತು ಮಗ ಜಾನ್ (ಹತ್ತು ವರ್ಷ) ಅನೇಕ ಪ್ರಶ್ನೆಗಳನ್ನು ಕೇಳುತ್ತಿದ್ದರು.

ಕೊನೆಗೆ ವರದಿ ಬರೆಯಲು ಮೇಜಿನ ಬಳಿ ಕುಳಿತ. ಆದರೆ ಹೇಗೆ ಆರಂಭಿಸಬೇಕೋ ತಿಳಿಯದೇ ಹೋಯಿತು. ನಿಮಿಷಾನಂತರ ಲೇಖಣಿಯನ್ನು ಪತ್ನಿಯ ಕೈಗಿತ್ತ.

ಆಕೆ ಖಾಲಿ ಹಾಳೆಗಳ ಮುಂದೆ ಕುಳಿತಳು. "ನಮ್ಮ ಜೀವಕ್ಕೇ ಅಪಾಯ ಬಂದರೂ ಚಿಂತೆಯಿಲ್ಲ, ನ್ಯೂಯಾರ್ಕಿನ ಜನಕ್ಕೆ, ಗವರ್ನರ ಷರೀಫ್ ಮಾಡಿದ ಮೋಸವನ್ನು ತಿಳಿಸಲೇಬೇಕು!" ದೃಢ ಮುಖ ಮುದ್ರೆಯಿಂದ ಬರೆವಣಿಗೆಗೆ ಆರಂಭಿಸಿದಳು. ಕೈ ಮಗು ಎವರ್ಟ್‌ಗೆ ಆಹಾರ ಕೊಡಲು ಆಗೀಗ ಎದ್ದುದನ್ನು ಬಿಟ್ಟು ಇಡೀ ಮಧ್ಯಾಹ್ನ, ಸಾಯಂಕಾಲವೆಲ್ಲ ಬರೆವಣಿಗೆಯಲ್ಲೇ ನಿರತಳಾಗಿದ್ದಳು.

ಮಾರನೆ ಬೆಳಿಗ್ಗೆ ತನ್ನ ಲೇಖನವನ್ನು ಗಂಡನಿಗೆ ಓದಿ ಹೇಳಿದಳು. ನೇರವಾಗಿ, ಸರಳ ಮಾತುಗಳಲ್ಲಿ ಬರೆದ ಆ ಲೇಖನ ಕೇಳಿ ವಿಸ್ಮಿತನಾದ. ಅನಂತರ ಇಬ್ಬರೂ ಸೇರಿ, ಅದರಲ್ಲಿದ್ದ ವೈಯಕ್ತಿಕ ಅಭಿಪ್ರಾಯಗಳನ್ನೆಲ್ಲ ಹೊಡೆದು ಹಾಕಿ ಕೇವಲ ಸತ್ಯ ಸಂಗತಿ

ಗಳಷ್ಟನ್ನು ಮಾತ್ರವೇ ಉಳಿಸಿದರು.

ಅಲೆಕ್ಸಾಂಡರ್ ಒಂದು ಕಟ್ಟು ಹಿಡಿದು ಸರಸರನೆ ಮುದ್ರಣಾಲಯದೊಳಕ್ಕೆ ಬಂದ. ಆ ತ ನ ಉದ್ದನೆಯ ದೊಡ್ಡ ಮುಖದಲ್ಲಿ ಹೆಚ್ಚಿನ ಸಂತೋಷವಿತ್ತು. ಆತನ ಹಿಂದೆ ದೃಢಕಾಯನಾದ ಅಪರಿಚಿತನೊಬ್ಬ ಬಂದ. ಟೋಪ್ಪಿ ಹಾಕಿಕೊಳ್ಳದೆ, ಜೆಂಗರಂತೆಯೇ ಕೂದಲು ಬಿಟ್ಟುಕೊಂಡಿದ್ದುದರಿಂದ, ಅವನೊಬ್ಬ ಕೆಲಸಗಾರ ಎಂದು ಯಾರಾದರೂ ಹೇಳಬಹುದಿತ್ತು. "ಅಂತೂ ಮುದ್ರಣ ಕೆಲಸಗಾರನೊಬ್ಬ ನಿನಗೆ ದೊರಕಿದ" ಎತ್ತರ ನಿಲುವಿನ ನ್ಯಾ ಯ ವಾ ದಿ ಸಂತೋಷದಿಂದ ನುಡಿದ. "ಸಕಾಲಕ್ಕೆ ಒದಗಿ ಬಂದಿದ್ದಾನೆ. ನಮ್ಮ ಪತ್ರಿಕೆಯ ಮೊದಲ ಸಂಚಿಕೆಯನ್ನು ಸೋಮವಾರದ ಹೊತ್ತಿಗೆ ಅಚ್ಚು ಹಾಕಬಲ್ಲೆಯೇನು?"

ಜೆಂಗರ್ ಧೈರ್ಯವಾಗಿ ಉತ್ತರಿಸಿದ "ಸಾಕಷ್ಟು ಲೇಖನಗಳು ದೊರೆತರೆ ಹೊರತರಬಹುದು"

ಅಲೆಕ್ಸಾಂಡರ್ ತನ್ನ ಕೈಲಿದ್ದ ಕಟ್ಟನ್ನು ಬಿಚ್ಚಿದ. ಅದರ ತುಂಬ ಕಾಗದಗಳಿದ್ದವು. ಪಾಪ್ಯುಲರ್ ಪಕ್ಷದ ನಾಯಕನೇ ಅವನಾಗಿದ್ದುದರಿಂದ, ಪತ್ರಿಕಾ ಸಂಪಾದಕನೂ ಅವನೇ ಆಗಲು, ಅವನ ಗೆಳೆಯರು ಸಮ್ಮತಿಸಿದ್ದರು. ಅಂಥ ಪ್ರಮುಖನ ಜೊತೆ ಕೆಲಸ ಮಾಡುವುದು ಜೆಂಗರಿಗೆ ಸಂತೋಷಕರವೆನಿಸಿತು.

"ಈ ಲೇಖನದಿಂದ ಆರಂಭಿಸೋಣ" ಅಲೆಕ್ಸಾಂಡರ್ ಕೈಬರೆಹದ ಹಾಳೆಯೊಂದನ್ನು ಬಿಚ್ಚಿದ. "ನನ್ನ ಗೆಳೆಯ ಬೋಧಕನೊಬ್ಬನ ಚಿಕ್ಕ ಪ್ರವಚನವಿದು"

"ಸರಿ!" ಜೆಂಗರ್ ಅಭಿಪ್ರಾಯವಿತ್ತ. "ನ್ಯೂಯಾರ್ಕಿನ ಪತ್ರಿಕೆಗಳಿಗೆ ಮೊದಲು ಬೇಕಾದುದು ಜ್ಞಾನ ಎಂಬುದನ್ನು ಸಾರಿ ಹೇಳಿದಂತಾಗುತ್ತದೆ. ಅದರ ಅಭಾವ ಅವುಗಳಲ್ಲಿ ಸುಸ್ಪಷ್ಟ!"

ಅಲೆಕ್ಸಾಂಡರ್ ಸ್ಮಿತವದನದಿಂದ ತಲೆಯಾಡಿಸಿದ. ಅದರ ಪಕ್ಕದಲ್ಲಿ ಪದ್ಯವೊಂದನ್ನಿರಿಸಿದ, "ನಮ್ಮ ಪ ತ್ರಿ ಕೆ, ಓದುಗರಿಗೆ ತೂಕಡಿಕೆ ತರುವಂತಹುದಲ್ಲ, ಮನರಂಜನೆಯೂ ಅದರಲ್ಲಿರುತ್ತದೆಂದು

ಇದರಿಂದ ವ್ಯಕ್ತವಾಗುತ್ತದೆ. ಇದಲ್ಲದೆ ಇಲ್ಲಿ ಕೆಲವು ಲಂಡನ್ ಪತ್ರಿಕೆಗಳಿವೆ, ಯೂರೋಪಿನ ಘಟನೆಗಳನ್ನು ವಿವರಿಸುವ ನನ್ನ ಇಂಗ್ಲೆಂಡ್ ಸ್ನೇಹಿತರಿಂದ ಬಂದ ಅನೇಕ ಪತ್ರಗಳೂ ಇವೆ. ಇವುಗಳಲ್ಲಿ ಸ್ವಾರಸ್ಯವಾದವುಗಳನ್ನು ಯಾರಾದರೂ ಆರಿಸಿ, ನಮ್ಮ ಪತ್ರಿಕೆಯ ಸ್ಥಳಾವಕಾಶಕ್ಕೆ ತಕ್ಕಂತೆ ಸಂಗ್ರಹಿಸಿ ಬರೆಯಬೇಕು"

"ನನ್ನ ಪತ್ನಿ ಆ ಕೆಲಸ ಮಾಡಬಲ್ಲಳು" ಜೆಂಗರ್ ಮುಂದಾದ. ಸಂಪಾದಕ ಸ್ವಲ್ಪ ಸಂದೇಹಿಸಿದ. "ನೀವು ಪ್ರಯತ್ನ ಮಾಡಿದರೆ ತುಂಬಾ ಸಹಾಯ ಮಾಡಿದಂತಾಗುತ್ತದೆ, ಸತಿ ಜೆಂಗರ್. ಈ ಕಂತೆಯಲ್ಲಿ ಯಾವುವು ಸ್ವಾರಸ್ಯಕರವಾದವು, ಮುಖ್ಯವಾದುವು ಎಂಬುದನ್ನು ಹೇಳುತ್ತೇನೆ. ಅಂಗಡಿಯಲ್ಲಿ ಹೆಚ್ಚು ಕೆಲಸವಿಲ್ಲದೆ, ಬಿಡುವಿದ್ದ ಕಾಲದಲ್ಲಿ ನನ್ನ ಪತ್ನಿಯೂ ನಿಮಗೆ ನೆರವಾಗಬಹುದು"

ವೆಸ್ಟ್ ಚೆಸ್ಟರ್ ಚುನಾವಣೆಯನ್ನು ಕುರಿತು ತಾನು ಬರೆದಿದ್ದ ಸುದೀರ್ಘ ಲೇಖನವನ್ನು ಕ್ಯಾಥರೀನ್ ಅಂಜಿಕೆಯಿಂದಲೇ ಮುಂದಿಟ್ಟಳು.

"ಓ ಓ!" ಉದ್ಗರಿಸಿದ ಅಲೆಕ್ಸಾಂಡರ್. "ಇದೇ ವಿಷಯವನ್ನು ಕುರಿತೇ ಈಗ ಮಾತನಾಡಬೇಕೆಂದಿದ್ದೆ. ಓದಿ ನೋಡುತ್ತೇನೆ!" ಒಂದು ಲೇಖಣಿ ಕೇಳಿ ಪಡೆದು ಲೇಖನವನ್ನು ಓದತೊಡಗಿದ.

ಜೆಂಗರ್ ಕೆಲಸಗಾರನಿಗೆ ಮುದ್ರಣಾಲಯವನ್ನೆಲ್ಲ ತೋರಿಸಿದ. ಮುದ್ರಣ ಯಂತ್ರವನ್ನು ವೀಕ್ಷಿಸಿದ. ಮುದ್ರಣ ತನಗೆ ಗೊತ್ತೆನ್ನುವಂತೆ ಮಾತನಾಡಿದ.

ಅಲೆಕ್ಸಾಂಡರ್ ಗಡಿಯಾರದ ಕಡೆ ನೋಡಿದ. "ಹೋಗಬೇಕು ಹೊತ್ತಾಯಿತು" ಎಂದು ಎದ್ದು ನಿಂತ. "ಈ ಲೇಖನ ಚೆನ್ನಾಗಿದೆ. ನಾನು ತಿದ್ದಿರುವುದು ಬಹು ಸ್ವಲ್ಪ. ವಿದೇಶ ಸುದ್ದಿಗಳ ಸಂಪಾದಕತ್ವವನ್ನು ನಿನಗೆ ಒಹಿಸಬಹುದು. ಪತ್ರಿಕೆಯ ತಲೆಯ ಮೇಲೆ ಏನು ಹಾಕೋಣ?"

"ಫ್ರಾಂಕ್‌ಲಿನ ಪತ್ರಿಕೆಯನ್ನು ಅನುಸರಿಸಬೇಕೆಂಬುದು

ನಮ್ಮ ಅಭಿಪ್ರಾಯ" ಕ್ಯಾಥರೀನ್ ತತ್‌ಕ್ಷಣ ಉತ್ತರವಿತ್ತಳು. ಕೆಲವು ಹಳೆಯ ಪತ್ರಿಕೆಗಳನ್ನು ಕೈಗೆತ್ತಿಕೊಂಡಳು. ಪ್ರತಿಯೊಂದರ ಮೇಲೂ ಹೀಗೆಂದು ಬರೆದಿತ್ತು: "ದಿ ಪೆನ್ಸಿಲ್ವೇನಿಯಾ ಗೆಜೆಟ್, ಅತಿ ನೂತನ ವಿದೇಶಿ ಹಾಗೂ ಸ್ವದೇಶಿ ಸಲಹೆಗಳ ಆಕರ"

"ಈಗಾಗಲೆ ಬ್ರಾಡ್‌ಫರ್ಡ್ ಗೆಜೆಟ್ ಪದವನ್ನು ತನ್ನ ಪತ್ರಿಕೆಗೆ ಬಳಸಿರುವುದರಿಂದ, ನಮ್ಮ ಪತ್ರಿಕೆಗೆ, 'ದಿ ನ್ಯೂಯಾರ್ಕ್ ಜರ್ನಲ್- ಅತಿ ನೂತನ ವಿದೇಶಿ ಹಾಗೂ ಸ್ವದೇಶಿ ಸಲಹೆಗಳ ಆಕರ' ಎಂದು ಹಾಕೋಣ ಎಂದುಕೊಂಡೆವು"

"ಇದೊಂದು ರೀತಿಯಲ್ಲಿ ನಗರದ ಜನ ಜೀವನದ ವರದಿ ಅಥವಾ ಡೈರಿ ಆಗಲಿರುವುದರಿಂದ" ಜೆಂಗರ್ ಮಾತು ಸೇರಿಸಿದ.

ನ್ಯಾಯವಾದಿ ಸ್ವಲ್ಪ ಆಲೋಚಿಸಿದ. "ಅದೇನೋ ಸರಿ, ನಿಕರವಾಗಿ ನೋಡಿದರೆ, ಜರ್ನಲ್ ಫ್ರೆಂಚ್ ಶಬ್ದ; ಅದರರ್ಥ ದೈನಿಕ ಎಂದು. ನಾವು ವಾರಕ್ಕೆ ಒಂದು ಸಾರೆಗಿಂತ ಹೆಚ್ಚು ಪ್ರಕಟಿಸಲಾರೆವು."

ಜೆಂಗರ್ ವಿಕಾರವಾಗಿ ನಕ್ಕ. "ಹಾಗಾದರೆ ನಮ್ಮ ಪತ್ರಿಕೆಯನ್ನು 'ವೀಕ್ಲಿ ಜರ್ನಲ್' ಎಂದು ಕರೆಯೋಣ"

ಬೆಂಜಮಿನ್ ಫ್ರಾಂಕ್‌ಲಿನ್‌ನ ಶಿರೋನಾಮೆಯನ್ನು ಅನುಕರಿಸಿದರು. ಪುಟಗಳಲ್ಲಿ ಲೇಖನಗಳನ್ನು ಅವನಂತೆಯೇ ಜೋಡಿಸಿದರು. ಅವನಂತೆ ಕೊನೆ ಪುಟದ ಕೊನೆಯಲ್ಲಿ ಚಂದಾ ವಿವರಗಳನ್ನು ಹಾಕಿದರು. ಕಡೆಗೆ ಅಚ್ಚಿನ ಮೊಳೆಗಳ ಉಪಯೋಗದಲ್ಲೂ ಅವನನ್ನೇ ಅನುಕರಿಸಿದರು.

ಸಂಜೆ ಐದು ಗಂಟೆಯಲ್ಲಿ ಮತ್ತೆ ಫಿರಂಗಿ ಅಬ್ಬರಿಸತೊಡಗಿತು. ಪೀಟರ್ ಮಗ ಜಾನ್ ಬೀದಿಗೋಡಿದ. ಸ್ವಲ್ಪ ಹೊತ್ತಿನ ಮೇಲೆ ವಾಪಸ್ ಬಂದು ವರದಿಯೊಪ್ಪಿಸಿದ, "ಎಲ್ಲರೂ ಬ್ರಾಡ್‌ವೇ ಕಡೆಗೆ ಓಡುತ್ತಿದ್ದಾರೆ, ಏನೋ ವಿಶೇಷವಿರಬೇಕು!"

ಫಿರಂಗಿಯ ಅಬ್ಬರ, ಗುಡುಗು ನಿರಂತರವಾಗಿ ಸಾಗಿತ್ತು. ಜೆಂಗರ್ ಕುಟುಂಬದವರೂ ಅದೇನೆಂದು ನೋಡಲು, ತ್ವರೆಯಿಂದ

ಸಾಗಿದರು. ಸ್ವಲ್ಪ ಹೊತ್ತಿನಲ್ಲಿ ಗುಂಪಿನ ಮಧ್ಯೆ ಅವರಿದ್ದರು.

ಗವರ್ನರ್ ಕಾಸ್ಬಿಯ ನಿವಾಸ ಗೃಹದ ಸಮೀಪದಲ್ಲೇ ಲಂಗರು ಬಿಟ್ಟಿದ್ದ ವರ್ತಕ ನೌಕೆಗಳು, ವೆಸ್ಟ್ ಚೆಸ್ಟರ್ ಚುನಾವಣೆಯಲ್ಲಿ ವಿಜಯಿಯಾದ ಮಾಜಿ ನ್ಯಾಯಮೂರ್ತಿ ಮಾರಿಸ್‌ನ ಸ್ವಾಗತಕ್ಕಾಗಿ ತೋಪು ಹಾರಿಸುತ್ತಿದ್ದವು.

ಸಾಗುದೋಣಿಯಲ್ಲಿ ಬಂದ ಮಾರಿಸ್‌ನನ್ನು ಸ್ವಾಗತಿಸಲು ಕೆಲವು ಸುಪ್ರಸಿದ್ಧ ವರ್ತಕರ ಮುಖಂಡತ್ವದಲ್ಲಿ ದೊಡ್ಡದೊಂದು ಗುಂಪು ಬಂದರು ಕಟ್ಟೆಯಲ್ಲಿ ಸೇರಿತು. ತಮ್ಮ ವಿಜಯದ ಪ್ರದರ್ಶನ ಮಾಡಲು ಪಾಪ್ಯುಲರ್ ಪಾರ್ಟಿ ಮೆರವಣಿಗೆಯೊಂದನ್ನು ಏರ್ಪಡಿಸಿತು. ಅದನ್ನೆಲ್ಲ ಕಂಡ ಜೆಂಗರ್, ತನ್ನ ಕುಟುಂಬವನ್ನು ಹರ್ಷ ಧ್ವನಿಮಾಡುತ್ತಾ, ಅದನ್ನೆಲ್ಲ ವೀಕ್ಷಿಸುತ್ತಿದ್ದ ಗುಂಪಿನ ಮಧ್ಯೆಬಿಟ್ಟು, ತನ್ನ ಗೆಳೆಯರೊಡನೆ ಹೊರಟ.

ಮಾಜಿ ನ್ಯಾಯಮೂರ್ತಿ ಮಾರಿಸ್ ಎಲ್ಲರಿಗಿಂತ ಮುಂದಿದ್ದ. ಆಕಾರ ಚಿಕ್ಕವನಾದರೂ, ಆಶ್ಚರ್ಯಕರವೆನಿಸುವಷ್ಟು ಸುಂದರ, ನಗರದಲ್ಲಿ ಸುವಿಖ್ಯಾತ. ಅವನ ಮಗ ಲ್ಯೂಯಿ ಮಾರಿಸ್, ಜ್ಯೂನಿಯರ್, ಅವನ ಹಿಂದೆ ಇತರ ಜನಗಳೊಡನೆ ಹೆಜ್ಜೆ ಹಾಕುತ್ತಿದ್ದ. ಈಗ ತಂದೆ, ಮಗ ಇಬ್ಬರೂ ಶಾಸನಸಭೆ ಸದಸ್ಯರು, ಭುಜಕ್ಕೆ ಭುಜ ಕೊಟ್ಟು ಹೋರಾಡಬಹುದು. ಗದ್ದಲದ ಪರಿಣಾಮವಾಗಿ ಭಾರಿ ಜನ ಸಂದಣಿ ಸೇರಿತ್ತು. ನಾಯಕನನ್ನು ಕಂಡಾಗ ದಾರಿಯುದ್ದಕ್ಕೂ ಹರ್ಷಘೋಷಣೆಗಳಾದವು.

ಮಾರಿಸ್‌ನನ್ನು ಬ್ಲಾಕ್ ಹಾರ್ಸ್ ಟ್ಯಾವರ್ನಿಗೆ ಕರೆದೊಯ್ಯಲಾಯಿತು. ಅವನನ್ನು ಸ್ವಾಗತಿಸಿದವರ ಖರ್ಚಿನಲ್ಲಿ, ಅಲ್ಲಿ ಭಾರಿ ಭೋಜನ ಸಮಾರಂಭ ಏರ್ಪಟ್ಟಿತ್ತು. ಕೊಠಡಿಯ ಒಂದು ಗೋಡೆಯ ಮಧ್ಯೆ ಹಲಗೆಯೊಂದು ನೇತು ಬಿದ್ದಿತ್ತು. "ದೊರೆ ಜಾರ್ಜ್ – ಸ್ವಾತಂತ್ರ್ಯ ಮತ್ತು ನ್ಯಾಯ!" ಎಂದು ಅದರ ಮೇಲಿನ ದಪ್ಪ ಅಕ್ಷರಗಳ ಬರೆಹ ಸಾರುತ್ತಿತ್ತು.

# ಅಧ್ಯಾಯ ೧೪

## ಜೆಂಗರನ ಪತ್ರಿಕೆ

ಯಾವ ಸುದ್ದಿಗಳನ್ನು ಹಾಕಲು ಬ್ರಾಡ್‌ಫರ್ಡ್ ಹೆದರುವನೋ ಅವನ್ನೆಲ್ಲ ಹೊಸ ಪತ್ರಿಕೆ ಮುದ್ರಿಸುವುದೆಂಬ ವದಂತಿ ಹಬ್ಬಿದ್ದರಿಂದ ಸೋಮವಾರ ಅರುಣೋದಯದ ಹೊತ್ತಿಗೇ, ಜೆಂಗರನ ಮುದ್ರಣಾಲಯದ ಮುಂದೆ ಗಿರಾಕಿಗಳು ನೆರೆದು "ನ್ಯೂಯಾರ್ಕ್ ಜರ್ನಲ್"ನ ಪ್ರತಿಗಳಿಗಾಗಿ ಕೇಳತೊಡಗಿದ್ದರು. ೯ ಗಂಟೆಯ ಹೊತ್ತಿಗೇ ಮೊದಲ ಮುದ್ರಣದ ಪ್ರತಿಗಳೆಲ್ಲ ಖರ್ಚಾಗಿದ್ದವು. ತಮಗೂ ಪ್ರತಿ ಬೇಕೆಂದು ನೂರಾರು ಜನರು ಮತ್ತೆ ಸೇರಿದರು.

ಜೆಂಗರ್ ಮತ್ತು ಅವನ ಕೆಲಸಗಾರ, 'ಫಾರಂ'ಅನ್ನು ಮತ್ತೆ ಮುದ್ರಣ ಯಂತ್ರದಲ್ಲಿಟ್ಟು ಸರಸರನೆ ಅಚ್ಚು ಹಾಕತೊಡಗಿದರು.

೧೦ ವರ್ಷದ ಜಾನ್, ೮ ವರ್ಷದ ಪೈಟರ್, ಪ್ಯಾಡಿಗೆ ಮಸಿ ಹಾಕುವುದು, ಮುದ್ರಿತ ಹಾಳೆಗಳನ್ನು ಒಣ ಹಾಕುವುದು, ಮಡಿಸುವುದು, ಇನ್ನಷ್ಟು ಖಾಲಿ ಹಾಳೆಗಳನ್ನು ತಂದೊದಗಿಸುವುದು ಈ ಚಿಲ್ಲರೆ ಕೆಲಸಗಳನ್ನು ಮಾಡುತ್ತಿದ್ದರು.

ಮೂರು ತಿಂಗಳ ಚಂದ, ಮೂರು ಷಿಲಿಂಗ್ ತಂದುಕೊಟ್ಟವರ ಹೆಸರುಗಳನ್ನು ಬರೆದುಕೊಳ್ಳುವುದೇ ಕ್ಯಾಥರೀನಳಿಗೆ ಸಾಕಷ್ಟು ಕೆಲಸವಾಗಿತ್ತು.

ಎರಡನೆ ಮುದ್ರಣದ ಪ್ರತಿಗಳು ಹೊರ ಬಿದ್ದಾಗ ಗುಂಪು ನುಗ್ಗಿ ಬಂತು. ಕೆಲವರು ಸುತ್ತ ನಿಂತಿದ್ದವರಿಗೆ ತಮ್ಮ ಕೈಲಿದ್ದ ಪ್ರತಿಗಳಿಂದ ಗಟ್ಟಿಯಾಗಿ ಓದಿ ಹೇಳುತ್ತಿದ್ದರು. ಇನ್ನು ಕೆಲವರು ಬೇಗನೆ ತಮ್ಮ ಪ್ರತಿಗಳನ್ನು ಮಡಿಚಿ ಜೇಬಿನಲ್ಲಿಟ್ಟುಕೊಂಡು ಅಲ್ಲಿಂದ ಕಾಲ್ತೆಗೆದರು. ಆ ರೀತಿ ಹೋದವರು ಗವರ್ನರ್ ಪಕ್ಷದವರೆಂದೂ, ಗುಟ್ಟಾಗಿ ಪತ್ರಿಕೆ

ಓದಬೇಕೆಂಬುದು ಅವರಿಚ್ಛೆಯೆಂದೂ, ಕ್ಯಾಥರೀನ್ ಭಾವಿಸಿದಳು.

ಹೆಚ್ಚು ಪ್ರತಿಗಳು ಮುದ್ರಣಾಲಯದಿಂದ ಹೊರಬಿದ್ದಂತೆ ರಸ್ತೆಯಲ್ಲಿ ಗುಜುಗಂಪು ಹೆಚ್ಚಿತು. ಅದರಲ್ಲಿದ್ದ ಕೆಲವು ತಪ್ಪುಗಳ ಕಡೆ ಯಾರೂ ಗಮನ ಕೊಡಲಿಲ್ಲ. ಉತ್ಸಾಹೋದ್ರೇಕದಲ್ಲಿ ಜೆಂಗರ್, ಪತ್ರಿಕೆಯ ತಾರೀಖನ್ನು 'ನವೆಂಬರ್ ೫, ೧೭೩೩' ಎಂದು ಅಚ್ಚು ಹಾಕುವ ಬದಲು 'ಅಕ್ಟೋಬರ್ ೫, ೧೭೩೩' ಎಂದು ಅಚ್ಚು ಹಾಕಿದ್ದ. Against ಎನ್ನುವುದು Agoin, Teusday, Geting, Persisted ಎಂಬೆಲ್ಲ ಕಾಗುಣಿತದ ತಪ್ಪುಗಳಿದ್ದವು. ಕ್ಯಾಥರೀನ್ ಅವುಗಳನ್ನು ಗಮನಿಸಿದಾಗ, "ಈ ಜನ ಗಲಾಟೆ ನೋಡಿದರೆ ನಮ್ಮದು ಉತ್ತಮ ಕೆಲಸವೇ" ಎಂದು ಭಾವಿಸಿದಳು.

ಪತ್ರಿಕೆಯನ್ನು ಕೊಂಡ ಕೆಲವರು ಅದನ್ನು ತಮ್ಮ ಮಿತ್ರರುಗಳಿಗೆ ತೋರಿಸಲು ಬೀದಿಗಳಲ್ಲಿ ಓಡಿದರು. ಬ್ರಾಡ್‌ಫರ್ಡ್‌ನ ಗೆಜೆಟ್‌ನಂತೆ ಈ ಪತ್ರಿಕೆಯೂ ನಾಲ್ಕು ಪುಟಗಳಾಗಿ ಮಡಿಸಿದ ಒಂದೇ ಹಾಳೆಯ ಪತ್ರಿಕೆ; ೭॥" ಅಗಲ ೧೨" ಉದ್ದ.

ಕ್ವೇಕರುಗಳ ವೋಟಿನ ಹಕ್ಕುಗಳನ್ನು ಷರೀಫ್ ಕಸಿದುಕೊಂಡ ಪ್ರಸಂಗಕ್ಕೆ ಪ್ರಾಧಾನ್ಯವಿದ್ದ, ಕ್ಯಾಥರೀನಳ ಲೇಖನದಲ್ಲಿ ವೆಸ್ಟ್‌ಚೆಸ್ಟರ್ ಚುನಾವಣೆಯ ಪೂರ್ಣ ವಿವರವಿತ್ತು. ಸಂಜೆಯ ಹೊತ್ತಿಗೆ ಜೆಂಗರ್ ಮೂರನೆ ಮುದ್ರಣ ಆರಂಭಿಸಿದ್ದ.

ರಾತ್ರಿ, ಕೆಲಸಗಾರ ಮನೆಗೆ ಹೋಗಿ, ಕುಟುಂಬದವರೆಲ್ಲ ಮಲಗಲು ಮಹಡಿ ಹತ್ತಿದ ಮೇಲೆ, ಜೆಂಗರ್ ಮೇಣದ ಬತ್ತಿಯ ಬೆಳಕಿನಲ್ಲಿ ಮುದ್ರಣಾಲಯವನ್ನೆಲ್ಲ ಒಮ್ಮೆ ದಣಿದ ತೃಪ್ತಿಯಿಂದ ನೋಡಿಕೊಂಡು ಬಂದ. ನ್ಯೂಯಾರ್ಕ್ ನಗರದ ಮಿದುಳಿಗೊಂದು ಆಲೋಚನೆಯ ಆಹಾರವನ್ನು ಒದಗಿಸಿದ ತೃಪ್ತಿ ಅವನದು. ಹಿಂದಿನ ದಿನಕ್ಕಿಂತ ಹೆಚ್ಚು ಹಣ ಬಂದಿತ್ತು. ಹಾಗೆ ಅಪಾಯವೂ ಬಂದು ಆತುಕೊಂಡಿತ್ತು.

ಯಾರೋ ಬಾಗಿಲು ಬಡಿದ ಸಪ್ಪಳ. ಸ್ವಲ್ಪ ಸಂಶಯದಿಂದಲೇ ಅತ್ತ ಕಡೆ ನೋಡಿದ. ನ್ಯೂಯಾರ್ಕ್ ಶಾಂತ ನಗರ. ಹತ್ತು

ಗಂಟೆಯ ನಂತರ, ಈ ಹೊತ್ತಿನಲ್ಲಿ ಯಾರೂ ರಸ್ತೆಗಳಲ್ಲಿ ಓಡಾಡುತ್ತಿರಲಿಲ್ಲ.

ಮತ್ತೆ ಬಾಗಿಲ ಶಬ್ದ. ಪೀಟರ್ ಮೇಣದ ಬತ್ತಿಯನ್ನು ಒಂದೆಡೆ ಸಿಲ್ಲಿಸಿದ. ಒಂದು ದೊಡ್ಡ ಮೊಳೆ ಜೋಡಿಸುವ ಸ್ಟಿಕ್ಕನ್ನು ಕೈಗೆತ್ತಿಕೊಂಡು, ಎಡಗೈಯಿಂದ ಅಗುಳಿ ತೆಗೆದ.

ಬಾಗಿಲು ತೆರೆಯಿತು. ೭೦ ವರ್ಷದವನಾದರೂ ಆರೋಗ್ಯವಂತನಾಗಿದ್ದ ಬ್ರಾಡ್‌ಫರ್ಡ್ ಸರಸರನೆ ಮುದ್ರಣಾಲಯದೊಳಕ್ಕೆ ಬಂದ. "ವೀಕ್ಲಿ ನ್ಯೂಯಾರ್ಕ್ ಜರ್ನಲ್"ನ ಪ್ರತಿಯೊಂದು ಅವನ ಕೈಯಲ್ಲಿತ್ತು. "ನನ್ನ ಯೌವ್ವನದ ಕಥೆ ಹೇಳಲು ಬಂದಿದೇನೆ, ಮಗು." ಸುತ್ತಿ ಬಳಸದೆ ಎಂದಿನಂತೆ ಹೇಳಬೇಕಾದ್ದನ್ನು, ನೇರವಾಗಿ ಹೇಳತೊಡಗಿದ. "ಬಹು ದಿನಗಳ ರಹಸ್ಯವಿದು. ನಿನಗೊಂದು ಎಚ್ಚರಿಕೆಯ ಪಾಠವಾಗಲೆಂದು ಈಗ ಹೇಳುತ್ತೇನೆ"

ಕೈಲಿದ್ದ ಪತ್ರಿಕೆಯನ್ನು ಮುಂದೆ ಹಿಡಿದ. "ಗವರ್ನರ್ ಮೇಲೆ ೧೦೦ ಪಿಸ್ಟೋಲ್‌ಗಳ ಲಂಚ ತೆಗೆದುಕೊಂಡು ದೂರು ಹೊರಿಸಿದ್ದೀಯ. ಗವರ್ನರಿಗೆ ಮಾತ್ರ ನೇಮಿಸುವ ಅಥವಾ ವಜಾಮಾಡುವ ಅಧಿಕಾರವಿರುವ ಅಂದರೆ ಗವರ್ನರ್ ಪ್ರತಿನಿಧಿಯಾದ ಷರೀಫ್ ಮೇಲೆ ಚುನಾವಣಾ ಮೋಸದ ಆಪಾದನೆ ಹೊರಿಸಿದೀಯ. ನನ್ನ ಮಾತು ಕೇಳು"

ರಾಜ ಮನ್ನಿತ ಮುದ್ರಣಕಾರ ಕೌಂಟರ್ ಪಕ್ಕದ ದೊಡ್ಡ ಸ್ಟೂಲಿನ ಮೇಲೆ ಕುಳಿತಿದ್ದ. "ನನಗೆ ಮೂವತ್ತು ಕೂಡ ಆಗಿರಲಿಲ್ಲ. ನೀನು ಹುಟ್ಟುವುದಕ್ಕೆ ಐದು ವರ್ಷ ಹಿಂದಿನ ಮಾತು. ಫಿಲಿಡೆಲ್ಫಿಯದಲ್ಲಿ ನನಗೆ ಜಾರ್ಜ್‌ಕೀಪ್ ಎಂಬ ಗೆಳೆಯನಿದ್ದ. ವಿಲಿಯಂ ಪೆನ್ನಂತೆ ಅವನೂ ಒಬ್ಬ ಕ್ವೇಕರ್ ಧುರೀಣ. ನಾನೂ, ಕೀಪ್ ಸೇರಿ ಕ್ವೇಕರ್ ಧರ್ಮವನ್ನು ಬದಲಾಯಿಸಲೆಳೆಸಿದೆವು. ಜಾತಿ ಪದ್ಧತಿ ನಮಗೆ ಬೇಸರ ತಂದಿತ್ತು. ಎಲ್ಲಾ ಚರ್ಚುಗಳೂ ಒಂದಾಗಬೇಕೆಂದು ಬಯಸಿದೆವು. ಇದರಲ್ಲೇನಿದೆ ತಪ್ಪು? ಅದೇ ಸರಿಯಾದ ಮಾರ್ಗವೆಂದು ಈಗಲೂ ನನ್ನ ನಂಬುಗೆ. ನಮ್ಮ ಅಭಿಪ್ರಾಯ ಒಪ್ಪದ ವಿಲಿಯಂ ಪೆನ್, ಗವರ್ನರ್ ಫ್ಲೆಚರ್ ಮುಂತಾದವರನ್ನು ಖಂಡಿಸಿ

ಕಿರಿ ಹೊತ್ತಿಗೆಗಳನ್ನು ಪ್ರಕಟಿಸಿದೆವು. ನಾನಾಗ ಯುವಕ, ಉತ್ಸಾಹ ತುಂಬಿತ್ತು. ಕಥೆ ಕಿರಿದುಮಾಡಿ ಹೇಳುವುದಾದರೆ, ನನ್ನನ್ನು ಬಂಧಿಸಿದರು. ನನ್ನ ಮುದ್ರಣ ಸಾಮಗ್ರಿಗಳನ್ನು ಷರೀಫ್ ವಶಪಡಿಸಿಕೊಂಡ. ಜ್ಯೂರಿ ಸಮೇತವಾದ ಕೋರ್ಟು ನನ್ನ ವಿಚಾರಣೆ ನಡೆಸಿತು. ನನ್ನ ಪರ ವಾದಿಸಲು, ಲಾಯರೇ ನನಗಿರಲಿಲ್ಲ. ನಾನೇ ಹೇಳಬೇಕಾದ್ದನ್ನು ಹೇಳಿದೆ, ಸಾಕ್ಷಿಗಳ ಪಾಟೀಸವಾಲು ನಡೆಸಿದೆ, ವಾದಿಸಿದೆ."

ಜೆಂಗರ್ ಕುತೂಹಲದಿಂದ ಪ್ರಶ್ನಿಸಿದ, "ಜ್ಯೂರಿಗಳು ಏನು ತೀರ್ಪಿತ್ತರು ?"

"ಪೂರಾ ಎರಡು ದಿನಗಳ ಕಾಲ ತೀರ್ಪಿನ ಚರ್ಚೆಮಾಡಿದರು. ತಮ್ಮಲ್ಲಿ ಒಮ್ಮತವಿಲ್ಲವೆಂದು ಕೊನೆಗೆ ಹೇಳಿಬಿಟ್ಟರು. ಅಂತೆ ನ್ಯಾಯಾಧೀಶ ನನ್ನನ್ನು ಬಿಟ್ಟುಬಿಟ್ಟ. ಪೆನ್ಸಿಲ್ವೇನಿಯದ ಗವರ್ನರ್ ಫ್ಲೆಚರ್ ನನ್ನನ್ನು ಕರೆಕಳಿಸಿ ಹಿತೋಪದೇಶ ಮಾಡಿದ. ಇನ್ನು ಮುಂದೆ ಸರಿಯಾಗಿ ನಡೆದುಕೊಳ್ಳುತ್ತೇನೆಂಬ ಭರವಸೆ ನೀಡಿದಾಗ, ವಿಚಿತ್ರ ರೀತಿಯಲ್ಲಿ ನನ್ನನ್ನು ಅಲ್ಲಿಂದ ಅಟ್ಟಿಬಿಟ್ಟ. ನ್ಯೂಯಾರ್ಕಿನಲ್ಲಿ ನಾನು ರಾಜಮನ್ನಿತ ಮುದ್ರಕನಾಗಿರುವಂತೆ ವ್ಯವಸ್ಥೆ ಮಾಡಿಬಿಟ್ಟ !"

"ಜ್ಯೂರಿಗಳೇನಾದರೂ ನಿನ್ನನ್ನು ತಪ್ಪಿತಸ್ಥನೆಂದು ತೀರ್ಮಾನಿಸಿದ್ದರೆ ?" ಪೀಟರ್ ಪ್ರಶ್ನಿಸಿದ.

ಬ್ರಾಡ್‌ಫರ್ಡ್ ಮೆಲ್ಲಗೆ ಉತ್ತರಿಸಿದ. "ನನ್ನ ಕಿವಿಗಳನ್ನು ಕತ್ತರಿಸಿ ಹಾಕುತ್ತಿದ್ದರು. ಕುದುರೆ ಛಾಟಿಯಿಂದ ಬಾರಿಸುತ್ತ ನನ್ನನ್ನು ರಸ್ತೆಗಳಲ್ಲಿ ಸುತ್ತಿಸುತ್ತಿದ್ದರು." ಎದ್ದು ಬಾಗಿಲ ಬಳಿಗೆ ಹೋಗುತ್ತ, "ನಿನಗಿದೊಂದು ಎಚ್ಚರಿಕೆಯಾಗಲೆಂದು ಹೇಳುತ್ತಿದೇನೆ. ನಮಸ್ಕಾರ" ಎಂದು ಮಾತು ಮುಗಿಸಿದ.

---

# ಅಧ್ಯಾಯ ೧೫

## ಮೂವರು ಮತ್ತು ನಾವಿಕರು

ಪ್ರಥಮ ಪ್ರತೀಕ್ಷೆ ನಿರಾಶಾದಾಯಕವಾಗಿತ್ತು.

'ಜರ್ನಲ್'ಗೆ ಉತ್ತರ ಕೊಡುವ ಸಲುವಾಗಿ ನ್ಯಾಯಮೂರ್ತಿ ಹ್ಯಾರಿಸನ್ನನ್ನು ಬ್ರಾಡ್‌ಫರ್ಡ್‌ನ ಪತ್ರಿಕೆಯ ಸಂಪಾದಕನನ್ನಾಗಿ ಗವರ್ನರ್ ಕಾಸ್ಬಿ ನೇಮಿಸಿದ. ನ್ಯಾಯಮೂರ್ತಿ ಹ್ಯಾರಿಸ್ನ ಬೀದಿಯಲ್ಲಿ ಹೋಗುವುದನ್ನು ಜೆಂಗರ್ ಅವಲೋಕಿಸಿದ. ಬಂಗಾರದ ಹಿಡಿಯ ಬೆತ್ತವನ್ನು ಆಡಿಸುತ್ತ, ಉದ್ದನೆಯ ಲೇಸ್ ಕಫ್ ಅನ್ನು ಮುಂಚಾಚುತ್ತ, ತನ್ನ ಚಿಕ್ಕ ಆಕಾರವನ್ನು, ಸ್ತ್ರೀ ಲಕ್ಷಣವನ್ನು ಮುಚ್ಚಿಕೊಳ್ಳಲೆತ್ನಿಸುತ್ತಿದ್ದ. ಇಂಗ್ಲಿಷ್ ನಾಟ್ಯದಲ್ಲಿ ನುರಿತವನು, ಆಗಾಗ್ಗೆ ಸತಿ ಕಾಸ್ಬಿಗೆ ಅಂಟಿಕೊಂಡು ಕುಣಿಯುತ್ತಿದ್ದ ಎಂದು ಜನ ಆಡಿಕೊಳ್ಳುತ್ತಿದ್ದರು.

ಒಮ್ಮೆ ಪತ್ರಿಕೆಯನ್ನೇ ಆರಂಭಿಸದಂತೆ ಹ್ಯಾರಿಸ್ನ ಬ್ರಾಡ್‌ಫರ್ಡ್‌ಗೆ ಬೆದರಿಕೆ ಹಾಕಿದ್ದನಷ್ಟೆ. ಅದರ ಮೇಲೆ, ಈ ಅಲಂಕಾರ ಪ್ರಿಯ ತನ್ನ 'ನ್ಯೂಯಾರ್ಕ್‌ಗೆಜೆಟ್'ಗೆಸಂಪಾದಕನಾಗುವುದು ಬ್ರಾಡ್‌ಫರ್ಡಿಗೆ ಸರ್ವಥಾ ಇಷ್ಟವಿರಲಿಲ್ಲ. ಆದರೆ ರಾಜಮನ್ನಿತ ಮುದ್ರಕನೆಂದು ಮುದುಕ ಬ್ರಾಡ್‌ಫರ್ಡ್‌ಗೆ ಸರಕಾರದಿಂದ ೫೦ ಪೌಂಡು ವಾರ್ಷಿಕ ವೇತನ ದೊರೆಯುತ್ತಿತ್ತು. ಹಣ ಪ್ರಿಯನಾದ ಅವನು, ಹೇಳಿದಂತೆ ಕೇಳಿದ. ಈ ರೀತಿ ನೇಮಕ ಮಾಡುವಾಗ ತನ್ನ ಅಭಿಪ್ರಾಯವನ್ನೇ ಕೇಳಿರದಿದ್ದರೂ, ಸುಮ್ಮನೆ ಒಪ್ಪಿಕೊಂಡ.

ತನಗೇನೇನು ಬೆದರಿಕೆ ಹಾಕಿರಬಹುದು ಎಂಬುದನ್ನರಿಯಲು ಜೆಂಗರ್ ಕುತೂಹಲದಿಂದ 'ಗೆಜೆಟ್'ನ ಮರು ಸಂಚಿಕೆಯನ್ನು ಓದಿದ.

ಗವರ್ನರ್ ಕಾಸ್ಬಿ ಸದ್ಗುಣಿ, ಬಹು ಒಳ್ಳೆಯವ ಎಂದು ಹೊಗಳಿ ಕಾಲಂ ಗಟ್ಟಲೆ ಬರೆದಿದ್ದ ಹ್ಯಾರಿಸರ್ನ. ಎಲ್ಲೂ ಜೆಂಗರ್ ಹೆಸರು ಕೂಡ ಇರಲಿಲ್ಲ.

'ಗೆಜೆಟ್' ಪತ್ರಿಕೆಯನ್ನು ಕಿವುಚಿದ. ಮನಸ್ಸಿನಲ್ಲಿ ಕಳವಳ ಕಾಣಿಸಿಕೊಂಡಿತು. ಈ ಮೌನದ ಅರ್ಥವೇನು ?

ಪ್ರತಿವಾರವೂ 'ಜರ್ನಲ್' ಉಗ್ರಖಂಡನೆಗಳ ಮಳೆ ಕರೆಯುತ್ತಿತ್ತು. ಯಾವ ಗವರ್ನರ ಹೆಸರನ್ನೂ ಹೇಳದೆ, ಈ ರೀತಿ ಬರೆಯಿತು: "ಕೆಲವು ಗವರ್ನರುಗಳು ತಪ್ಪು ಮಾಡಬಹುದು, ದುರ್ವರ್ತಿಸಬಹುದು, ದುಷ್ಕರ್ಮಿಗಳೂ ಆಗಬಹುದು." ಗವರ್ನರ್‌ಕಾಸ್ಬಿ ಇಂಡಿಯನ್ನರ ಭೂಮಿಗೆ ಸಂಬಂಧಿಸಿದ ವರ್ಗಾವಣೆ ಪತ್ರವನ್ನು ನಾಶಗೊಳಿಸಿದ್ದಾರೆ; ತನ್ನಾಜ್ಞೆಗಳನ್ನು ಪಾಲಿಸಲಿಲ್ಲವೆಂದು ಸುಪ್ರೀಂ ಕೋರ್ಟಿನ ಶ್ರೇಷ್ಠ ನ್ಯಾಯಾಧೀಶರನ್ನು ಅಕ್ರಮವಾಗಿ ವಜಾಮಾಡಿದ್ದಾರೆ ಎಂದೆಲ್ಲ ಬರೆಯಿತು.

ಸದಾ ಗಂಭೀರವಾಗಿಯೇ ಇರಲು ಸಾಧ್ಯವಿಲ್ಲದ್ದರಿಂದ, ಜೆಂಗರ್ ಕೆಲವೊಮ್ಮೆ ತನ್ನ ಪತ್ರಿಕೆಗೆ ಹಾಸ್ಯದ ತುಣುಕುಗಳನ್ನು ಬರೆಯುತ್ತಿದ್ದ. ಇಂಥದೊಂದು ತುಣುಕಿನಲ್ಲಿ "ದೊಡ್ಡದೊಂದು ಬೇಟೆ ನಾಯಿ, ಸುಮಾರು ಐದಡಿ ಐದಂಗುಲ ಎತ್ತರ. ಅದರ ಅಕ್ಷರ ನಾಮಧೇಯ ಎಫ್. ಹೆಚ್" ಎಂದು ಬರೆದ. ಅದನ್ನೋದಿದವರು, ಅವನ ವರ್ಣನೆ ನ್ಯಾಯಮೂರ್ತಿ ಫ್ರಾನ್ಸಿಸ್ ಹ್ಯಾರಿಸರ್ನನ್ನು ಕುರಿತು ಎಂದು ತತ್‌ಕ್ಷಣ ಅರ್ಥಮಾಡಿಕೊಂಡಿದ್ದರು.

ತಮ್ಮ ಕೈಗಳಲ್ಲಿ ಹಿಡಿದಾಗ, ಕಿಡಿ ಕಾರುತ್ತಿರುವಂತೆ ತೋರುತ್ತಿದ್ದ, ಪತ್ರಿಕೆಯ ಪುಟಗಳನ್ನು ನ್ಯೂಯಾರ್ಕಿನ ಜನರೆಲ್ಲ ವಿಸ್ಮಯದಿಂದ ಕಣ್ಣರಳಿಸಿ ಓದುತ್ತಿದ್ದರು. ಅಂಥ ಶಕ್ತಿ ಪೂರ್ಣವಾದ ಬರೆವಣಿಗೆಯನ್ನು ಅವರು ಹಿಂದೆಂದೂ ಓದಿರಲಿಲ್ಲ. ಬರೆದವರ ಹೆಸರುಗಳಿಲ್ಲದ ಲೇಖನಗಳನ್ನು ಅಲೆಕ್ಸಾಂಡರ್ ಕೂಡಿಸಿ ತರುತ್ತಿದ್ದುದರಿಂದ ಎಷ್ಟೋ ಸಾರೆ ಜೆಂಗರಿಗೇ ಅವುಗಳ ಲೇಖಕರಾರು ಎಂಬುದು ತಿಳಿದಿರುತ್ತಿರಲಿಲ್ಲ. ಜೆಂಗರ್ ನಗರದಲ್ಲಿ ಸುತ್ತಾಡಿದಾಗ, ಎಲ್ಲಾ

ಹೋಟೆಲುಗಳಲ್ಲೂ "ಜರ್ನಲ್" ಕುರಿತೇ ಮಾತನಾಡುತ್ತಿರುವುದನ್ನು ಕೇಳುತ್ತಿದ್ದ. ಕೆಲವರು ವಿಜಯಘೋಷಮಾಡಿ ನಗುತ್ತಿದ್ದರು. ಇನ್ನು ಕೆಲವರು ಸಿಟ್ಟನಿಂದ ಸಿಡಿಗುಟ್ಟುತ್ತಿದ್ದರು; ಮುದ್ರಕನನ್ನು ಗಲ್ಲಿಗೇರಿಸಬೇಕು ಎಂದೊರಲುತ್ತಿದ್ದರು.

ಭಾರಿ ಕಲ್ಲು ಗೋಡೆಗಳ ಆವರಣದೊಳಗಿನ ವಿಸ್ತಾರ ಭವನ ದಲ್ಲಿ ಕುಳಿತು, ಗವರ್ನರ್ ಕಾಸ್ಬಿ, "ಜರ್ನಲ್" ಅನ್ನು ದಿಟ್ಟಿಸಿದ. ಅವನು ಕಲಿತದ್ದು ಅತ್ಯಲ್ಪ, ಹೇಗೆ ಓದಬೇಕೆಂಬುದೇ ಅವನಿಗೆ ಗೊತ್ತಿರಲಿಲ್ಲ. ಹೊಸ ಪತ್ರಿಕೆಯ ಒಂದೆರಡು ಪುಟಗಳಲ್ಲಿ ಹಾಗೂ ಹೀಗೂ ತಡವರಿಸಿದ. ಎಲ್ಲ ಶಬ್ದಗಳ ಅರ್ಥವೂ ಅವನಿಗಾಗಲಿಲ್ಲ. ಆದರೆ ಯಾರೋ ತನ್ನನ್ನು ಟೀಕಿಸುತ್ತಿದ್ದಾರೆ, ಎಂಬುದಷ್ಟು ಮಾತ್ರಾ ಗೊತ್ತಾಯಿತು. ಯಾರವನು? ಈ ಹೊಲಸು ಪತ್ರಿಕೆಯನ್ನು ನಡೆಸುತ್ತಿರುವವರು ಯಾರು? ಅದರ ಮೇಲೆ ಇದ್ದ ಒಂದೇ ಹೆಸರು ಬಡ ಮುದ್ರಕನದು. ಸಹಜವಾಗಿ ಅವನೊಬ್ಬನೆ ಇಂಥ ಪತ್ರಿಕೆ ನಡೆಸಲಾರ.

ಕಾಸ್ಬಿಗೆ ತತ್‌ಕ್ಷಣ ಮುದುಕ ನೌಕಾ ನಿರ್ಮಾಪಕ ರಿಪ್‌ವಾರ್ ಡಾಂನ ನೆನಪು ಬಂತು. ತಾತ್ಕಾಲಿಕ ಗವರ್ನರಾಗಿದ್ದಾಗ ಪಡೆದಿದ್ದ ಸಂಬಳದಲ್ಲಿ ಅರ್ಧದಷ್ಟನ್ನು ಎಂದರೆ ೬೦೦ ಪೌಂಡುಗಳನ್ನು ಕಾಸ್ಬಿಗೆ ಕೊಡಲು ಅವನು ಇನ್ನೂ ನಿರಾಕರಿಸುತ್ತಿದ್ದ. ಪ್ರಾಯಶಃ ಅವನೇ ಈ ಪತ್ರಿಕೆಗೆ ಹಣಸಹಾಯ ಮಾಡುತ್ತಿರಬಹುದು.

ಕಾಸ್ಬಿ ಪತ್ರಿಕೆಯನ್ನು ನೆಲಕ್ಕೊಗೆದು, ತುಳಿದ. ವ್ಯಾನ್ ಡಾಂ ಅನ್ನು ಹಾಳುಮಾಡಿ, ಪತ್ರಿಕೆ ನಿಲ್ಲುವಂತೆ ಮಾಡುತ್ತೇನೆಂದು ಪ್ರತಿಜ್ಞೆ ತೊಟ್ಟ.

ಅದಕ್ಕೊಂದು ಮಾರ್ಗ ಹುಡುಕಿದ. ಈಗಾಗಲೆ ವ್ಯಾನ್ ಡಾಂನನ್ನು ಅನೇಕಾವರ್ತಿ ಕೋರ್ಟಿಗೆ ಅಲೆದಾಡಿಸಿದ್ದ. ಮುದುಕ, ಬೇಜಾರಾಗಿ, ಕೋರ್ಟಿಗೆ ಬಾರದೆ ಮನೆಯಲ್ಲೇ ಉಳಿದಿದ್ದ.

ಮುಂದಿನ ಕ್ರಮ ಸುಲಭವೆಂದು ಗವರ್ನರ್‌ಕಾಸ್ಬಿ ನಂಬಿದ. ಸಹಾಯಕ್ಕೆ ಅಟಾರ್ನಿ ಜನರಲ್ ಬ್ರಾಡ್ಲೆಯನ್ನು ಕರೆಸಿದ.

ವಾನ್ ಡಾಂ ನಾಪತ್ತೆ, ನ್ಯಾಯ ವಿಚಾರಣೆಯಿಂದ ತಲೆ ತಪ್ಪಿಸಿಕೊಂಡಿದ್ದಾನೆ ಎಂದು ಘೋಷಿಸಬಹುದು. ಅವನ ಗೈರುಹಾಜರಿಯಲ್ಲಿ ಈ ಸಂಗತಿಯನ್ನು ಕೋರ್ಟಿನಲ್ಲಿ ಹಾಜರ್‌ಪಡಿಸಿದರೆ, ಅವನ ಸಮಗ್ರ ಎಸ್ಟೇಟನ್ನೂ, ಮನೆಗಳನ್ನೂ, ಬೆಲೆ ಬಾಳುವ ನೌಕೆಗಳನ್ನೂ, ನೌಕಾ ನಿರ್ಮಾಣ ಕ್ಷೇತ್ರವನ್ನು ಮತ್ತು ಹೊಸ ರಂಗಮಂದಿರವನ್ನೂ ಮುಟ್ಟಗೋಲು ಹಾಕಿಕೊಳ್ಳಬಹುದು. ಆದರೆ ಮೊದಲು ಮೂವರು ಸಾಕ್ಷಿಗಳನ್ನು ಈ ದಾಖಲೆಗೆ ಸಹಿ ಹಾಕುವಂತೆ ಮನವೊಲಿಸಬೇಕು.

ಅದಕ್ಕೂ ಕಾಸ್ಬಿ ಮಾರ್ಗವೊಂದನ್ನು ಕಂಡುಕೊಂಡ.

೧೭೩೪ ರ ಜನವರಿ ೧೦ ನೇ ತಾರೀಖಿನ ರಾತ್ರೆ ಚಿಂದಿ ವಸ್ತ್ರಧಾರಿಯಾದ ಪುಂಡನೊಬ್ಬ ನೀರ ತಡಿ ಬಳಿಯ ಹೋಟೆಲಿಗೆ ಪ್ರವೇಶಿಸಿ ಅದರ ಮಾಲಿಕೆ ಸತಿ ಹಾಕಿನ್ಸ್‌ಳೊಂದಿಗೆ ಮಾತನಾಡಿದ. ಅವನದು ಕಳ್ಳ ಹೆಜ್ಜೆ. ಮುಖದಲ್ಲಿ ವಿಪರೀತ ನಗೆ. ಅದರಿಂದ ಅವನ ತೆಳು ತುಟಿಗಳ ಕೆಂಪು ಬಾಯಿ, ಪುರುಚುಲು ಗಡ್ಡದ ಕೆನ್ನೆಗಳ ಮಧ್ಯೆ ಕೊಯ್ದು ಗಾಯದಂತೆ ಕಾಣುತ್ತಿತ್ತು. "ಇಲ್ಲಿರೋ ನನ್ನ ಜೊತೆಗಾರರು, ಬಿಲ್ಲಿಫೆರ್ನ್, ಬಿಲ್ಲಿಸ್ಪಿಂಕ್ಸ್ ಅವರುಗಳನ್ನ ನೋಡಬೇಕು. ಅವರ ಸ್ನೇಹಿತ ಮಾರ್ಷ್,—ಈ ಹಿಂದೆ ಗವರ್ನರ್ ಕಾಸ್ಬಿ ಅವರ 'ಸೀ ಫೋರ್ಸ್' ಹಡಗಿನಲ್ಲಿ ಅವರ ಜೊತೆ ಕೆಲಸ ಮಾಡುತ್ತಿದ್ದವನು- ಬಂದಿದಾನೆ ಎಂದು ದಯವಿಟ್ಟು ಹೇಳಿ"

ಸ್ಪಿಂಕ್ಸ್ ಮತ್ತು ಫೆರ್ನ್ ಮಹಡಿಯಿಂದ ಇಳಿದು ಬಂದವರೇ ತಮ್ಮ ಹಳೆಯ ಗೆಳೆಯನನ್ನು ಸ್ವಾಗತಿಸಿದರು.

ಸ್ಪಿಂಕ್ಸ್ ಅಪ್ಪೆತ್ತರವಿಲ್ಲದ ತಂತಿಯಂಥ ಇಂಗ್ಲಿಷ್ ಮನುಷ್ಯ. ಗುದ್ದಾಟಕ್ಕೂ ಸೈ, ಸ್ನೇಹಕ್ಕೂ ಸೈ. ತಾನು ಗುದ್ದಿ ಕೆಡವಿದ್ದವರೊಂದಿಗೆ ಆ ಎದುರು ಆ ಸಾಮಿಯೂ ಸಾಕಷ್ಟು ಜಿದ್ದಿನಿಂದ ಹೋರಾಡಿದನೆಂದು ಖಚಿತವಾದರೆ, ಸ್ನೇಹ ಬೆಳೆಸಿದ ಪ್ರಸಂಗಗಳೂ ಅನೇಕ.

ಮಾರ್ಷನ ಬೆನ್ನು ತಟ್ಟಿ, ಮದ್ಯ ತರಿಸಲೇ ಎಂದು ಕೇಳಿದ.

"ಬೇಡ! ಬೇಡ!" ಮಾರ್ಷ್ ಒತ್ತಿ ನುಡಿದ, "ಈ ರಾತ್ರಿಯ ಮದ್ಯ ಸೇವೆ ನನ್ನದು!"

ಸ್ಪಿಂಕ್ಸ್ ಮೌನವಾಗಿ ನಕ್ಕ. ಹಡಗಿನ ಟಾರನ್ನು ಕದ್ದು, ಮಾರಿ, ಅದರಿಂದಾಗಿ ಕೆಲಸ ಕಳೆದುಕೊಂಡ ಮೇಲೆ ಮಾರ್ಷನಿಗೆ ನಿರುದ್ಯೋಗ ತಪ್ಪಿರಲಿಲ್ಲವೆಂಬುದು ಅವನಿಗೆ ಗೊತ್ತಿತ್ತು.

ಸಹಾನುಭೂತಿಯಿಂದ ನೋಡಲೆಳಸಿದ ಫೆರ್ನ್‌ಗೂ ಆ ಮಾತು ತಮಾಷೆಯಾಗಿ ಕಂಡಿತು. ಅವನು ಕೊಬ್ಬಿದ ಶರೀರದ ಭಾರಿ ಆಸಾಮಿ. ಕುಡಿಯದಿದ್ದಾಗಲೂ ವಿಶ್ವಾಸಿ, ಕುಡಿದಾಗಲಂತೂ ಆ ವಿಶ್ವಾಸ ಹತ್ತು ಪಟ್ಟು ಹೆಚ್ಚುತ್ತಿತ್ತು.

ಆ ಇಬ್ಬರು ನಾವಿಕರೂ ಟಾರು ಬಿದ್ದು ಬಿರುಸಾದ ತಮ್ಮ ನೀಳ ಕೇಶರಾಶಿಯನ್ನು ಹಿಂದಕ್ಕೆ ಬಿಗಿದು ಕಟ್ಟಿದ್ದರು. ಬಿಳಿ ಕ್ಯಾನ್‌ವಾಸ್ ಷರಾಯಿ ಮತ್ತು ನೀಲಿ ಜಾಕೆಟ್‌ಗಳು ಅವರುಗಳ ಮೈ ಮುಚ್ಚಿದ್ದವು. ಷರಾಯಿ ಜೇಬುಗಳೊಳಗೆ ಕೈಯಿಟ್ಟು ಭುಜ ಹಾರಿಸಿದರು. ತಮ್ಮ ಬಳಿ ನಿಂತಿದ್ದ ಚಿಂದಿ ಬಟ್ಟೆಯ ಗೆಳೆಯನಿಗಿಂತ ನಾವು ಉತ್ತಮ ಎಂಬ ಭಾವನೆ ಅವರ ಮನಸ್ಸಿನಲ್ಲಿ ಸುಳಿಯಿತು.

"ನನ್ನ ಮಾತಿನಲ್ಲಿ ನಿಮಗೆ ನಂಬುಗೆಯಿಲ್ಲವೇನು?" ಚಿಂದಿ ವಸ್ತ್ರಧಾರಿ ಪ್ರತಿಭಟನೆ ಸೂಚಿಸಿದ. ಜೇಬಿಗೆ ಕೈ ಹಾಕಿ ಕೈತುಂಬ ನಾಣ್ಯಗಳನ್ನು ಹೊರತೆಗೆದು, ದೀವಿಗೆಯ ಬೆಳಕಿನಲ್ಲಿ ಮಿನುಗುಟ್ಟಿಸಿದ. ಆದರೆ ಆ ಹಣ ಎಲ್ಲಿಂದ ಬಂತೆಂಬುದನ್ನು ಮಾತ್ರಾ ಹೇಳಲಿಲ್ಲ.

ಕೆಲ ಗಂಟೆಗಳ ಹೊತ್ತಿಗೆ ಅವರೆಲ್ಲ ಕುಡಿದು ಮತ್ತರಾಗಿದ್ದರು. ಹಾಡಲು ಕೂಡ ಪ್ರಜ್ಞೆಯಿರಲಿಲ್ಲ. ತಮ್ಮಿಬ್ಬರಿಗಿಂತ ಮಾರ್ಷ್ ಕಮ್ಮಿ ಕುಡಿದಿದ್ದ ಎಂಬುದನ್ನು ಸ್ಪಿಂಕ್ಸ್ ಗಮನಿಸಿದ. ಆದರೆ ಅವನಿಗೂ ಹತೋಟಿ ತಪ್ಪಿಹೋಗಿತ್ತು.

ಮಾರ್ಷ್ ಕಟ್ಟಕಡೆಗೆ ತಾನು ಹೇಳಬೇಕೆಂದಿದ್ದ ಮಾತೆತ್ತಿದ. "ಆ ಡಚ್ – ನಿಮಗೆ ಗೊತ್ತಲ್ಲ – ಅವನ ಹೆಸರೇನು? ವಾನ್ ಡಾಂ. ಅವನಿಗೆ ಸಂಬಂಧಿಸಿದ ಕಾಗದವೊಂದು ನನ್ನ ಬಳಿ ಇದೆ. ಅವನ

ತಲೆ ಕೆಟ್ಟಿದೆಯಂತೆ"

ಫೆರ್ನ್ ಪ್ರಶ್ನೆ ಹಾಕಿದ.

"ಯಾರ ತಲೆ ?"

"ಆ ಡಚ್" ಮಾರ್ಷ್ ಪುನರುಚ್ಚರಿಸಿದ. "ನೆಟ್ಟಗೆ ಮಾತನಾಡಲಾರ"

ಸ್ಪಿಂಕ್ ಬೆರಳು ತೋರಿಸಿ, ಎಚ್ಚರಿಕೆಯಿತ್ತ. "ಹೆಚ್ಚು ವ್ಹಿಸ್ಕಿ ಕುಡಿದರೆ ನಿನಗಾಗೋದೂ ಅಷ್ಟೇ !"

"ಅವನಿಗೆ ಸಂಬಂಧಿಸಿದ ಕಾಗದವೊಂದನ್ನು ವಿಶ್ವಾಸದಿಂದ ನನ್ನ ಕೈಗೆ ಕೊಟ್ಟಿದ್ದಾರೆ." ಮಾರ್ಷ್ ಮಾತು ಮುಂದುವರಿಸಿದ, "ನೀವು ನನ್ನ ಹಳೆ ಸ್ನೇಹಿತರು, ನನಗಾಗಿ ಆ ಪತ್ರಕ್ಕೆ ಸಹಿ ಹಾಕಿ"

ಫೆರ್ನ್ ತಲೆಯಲ್ಲಾಡಿಸಿದ. "ಸಹಿ ಗಿಹಿ ಹಾಕೋಲ್ಲ, ಈ ಮಾತೆಲ್ಲ ಬೇಡ, ನೇಣುಗಲ್ಲಿಗೆ ನಿನ್ನ ನೇತುಹಾಕಿಯಾರು, ಹುಷಾರ್ !"

"ಹಾಗೇನಿಲ್ಲ" ಮಾರ್ಷ್ ಸಮಾಧಾನಪಡಿಸಿದ. "ಇದರಲ್ಲೇನೂ ಅಪಾಯವಿಲ್ಲ." ತಾನು ಹೇಳುತ್ತಿದ್ದುದೆಲ್ಲ ನಿಜವೆಂದು ದೃಢಪಡಿಸಲು ಅನೇಕ ಆಣೆ, ಪ್ರಮಾಣಗಳನ್ನು ಮಾಡಿದ.

ಸ್ನೇಹಪರವಾಗಿಯೇ ಇರಬೇಕೆಂದು ಬಯಸಿದರೂ, ಸ್ಪಿಂಕಿಗೆ ಈ ಸೂಚನೆ ಹಿಡಿಸಲಿಲ್ಲ. ಮಾರ್ಷನ ಕಡೆ ಒಂದೇ ಕಣ್ಣಿನಿಂದ ದಿಟ್ಟಿಸುತ್ತ, "ನಮ್ಮ ಕ್ಯಾಪ್ಟನ್‌ನ ಅನುಮತಿಯಿಲ್ಲದೆ ನಾವು ಏತಕ್ಕೂ ಸಹಿ ಹಾಕುವುದಿಲ್ಲ. ಕ್ಯಾಪ್ಟನ್ ಚಿರಾಯುವಾಗಲಿ!" ಮತ್ತಷ್ಟು ಮದ್ಯ ಹೀರಿದ.

"ಕ್ಯಾಪ್ಟನ್ನಿಗೆ ಈ ಪತ್ರದ ವಿಷಯವೆಲ್ಲ ಗೊತ್ತು. ನೀವು ಸಹಿಹಾಕಿದರೆ ಅವನ ಕೃತಜ್ಞ! ಗವರ್ನರೂ ಅಷ್ಟೆ!" ಮಾರ್ಷ್ ಭರವಸೆಯಿತ್ತ.

"ಹಾಗಾದರೆ ಮಾತು ಬೇರೆ. ಸ್ಪಿಂಕ್ ದಾರಿಗೆ ಬಂದ. ಅದೇನು ಕಾಗದ ? ಎಲ್ಲಿ ?"

ಮಾರ್ಷ್ ಮಡಿಚಿದ ಪಾರ್ಚ್‌ಮೆಂಟ್ ಕಾಗದವೊಂದನ್ನು

ತೆಗೆದು, ಮೇಜಿನ ಮೇಲಿಟ್ಟ. ತನ್ನ ಕೊಳಕು ಕೈಗಳನ್ನು ಮಾರ್ಷ್ ಅದರ ಮೇಲಿಟ್ಟುದನ್ನು ಕಂಡು, ಸ್ಪಿಂಕ್ಸ್ ಬೇಸರಗೊಂಡ.

"ಅದರಲ್ಲೇನು ಬರೆದಿದೆ?" ಸ್ಪಿಂಕ್ಸ್ ಬಿಕ್ಕಳಿಸುತ್ತ ಕೇಳಿದ.

"ಎಲ್ಲಾ ಕಾನೂನಿನ ಅಬದ್ಧ" ಮಾರ್ಷ್ ಭರವಸೆಯಿತ್ತ.

ಸ್ಪಿಂಕ್ಸ್ ಕೇಳಿದ: "ಅದರ ಸಾರಾಂಶವೇನು?" ಕೈ ಸ್ವಲ್ಪ ಅತ್ತ ಸರಿಸಿ, ಮಾರ್ಷ್ ಕೆಲ ಶಬ್ದಗಳನ್ನು ಓದಿದ, "ಇಲ್ಲಿ ಈ ಮುಂಚೆ ಹೇಳಲಾದ ಮನುಷ್ಯ ನಾಪತ್ತೆ." ಮಾರ್ಷ್ ವಿವರಿಸಿದ, "ಮೊದಲು ನಾನು ಸಹಿ ಹಾಕುತ್ತೇನೆ, ಅನಂತರ ನೀವು. ನಾನೇ ಮೊದಲು ಸಹಿ ಹಾಕುತ್ತೇನೆ. ಸಹಾಯಮಾಡಿ. ಈ ಸಂಬಂಧದಲ್ಲಿ ನಿಮಗೆಳ್ಳಷ್ಟೂ ತೊಂದರೆಯಾಗದು!" ಇದೆಲ್ಲ ನಿಜವೆಂದು ಮತ್ತೆ ಮತ್ತೆ ಆಣೆ ಪ್ರಮಾಣ ಮಾಡುತ್ತ, ಮಾಲಿಕಳನ್ನು ಕರೆದು, ಲೇಖಣಿ, ದೌತಿ ಬೇಕೆಂದು ಕೇಳಿದ.

ಆ ಮಾತುಗಳ ಕೆಳಗೆ ಅವನೇ ಮೊದಲು ಸಹಿ ಹಾಕಿದ. ವ್ಹಿಸ್ಕಿ ಮತ್ತಿನಲ್ಲಿ ಅರ್ಧ ಸತ್ತವರಂತಿದ್ದ, ಸ್ಪಿಂಕ್ಸ್ ಮತ್ತು ಫೆರ್ನ್, ತಮ್ಮ ಸ್ನೇಹಿತನಿಗೆ ಸಹಾಯ ಮಾಡಲೆಂದು ಸಹಿ ಹಾಕಿದರು.

ಮರು ಮಧ್ಯಾಹ್ನ ಸ್ಪಿಂಕ್ಸ್ ಮತ್ತು ಫೆರ್ನ್ ತಮ್ಮ ಬಂದರು ಕಟ್ಟೆಯ, ಗುಡಿಸಲೊಂದರಲ್ಲಿ, ಟಾರ್ ಪೀಪಾಯಿಗಳ ಮೇಲೆ ಕುಳಿತು, ಬಂದರಿನ ಮೇಲೆ ಬೀಳುತ್ತಿದ್ದ ಹಿಮವನ್ನುನೋಡುತ್ತಿದ್ದರು.

"ನನಗೆ ಸಮಾಧಾನವಿಲ್ಲ," ಸ್ಪಿಂಕ್ಸ್ ಒತ್ತಿ ನುಡಿದ. ಅವನ ತಲೆ ನೋಯುತ್ತಿತ್ತು, ಆದರೆ ಮತ್ತೆಲ್ಲ ಇಳಿದು ಹೋಗಿತ್ತು. "ಅವನಿಗೆ ದುಡ್ಡು ಕೊಟ್ಟವರಾರು? ಯಾತಕ್ಕೆ?"

"ನನ್ನ ಕೇಳಿದರೆ ಆ ಕಾಗದ ವಿಷಸಮಾನ" ಫೆರ್ನ್ ನುಡಿದ.

"ಅದರಲ್ಲೇನು ಬರೆದಿತ್ತು?" ಸ್ಪಿಂಕ್ಸ್ ಪ್ರಶ್ನೆ ಹಾಕಿದ. ಸ್ವಲ್ಪ ಹೊತ್ತು ಬಿಟ್ಟು "ಆ ಕಾಗದವನ್ನು ಪತ್ತೆ ಮಾಡಿ ವಶಪಡಿಸಿಕೊಳ್ಳ ಬೇಕು. ಇಲ್ಲವಾದರೆ ಏನಾದರೂ ತೊಂದರೆಯಲ್ಲಿ ಸಿಕ್ಕಿಕೊಂಡೇವು." ಎಂದ.

ಮಾರ್ಷನ್ನ ಎಲ್ಲಿ ಹುಡುಕಬೇಕು? ಅವನಿರುವ ಸ್ಥಳ ಅವರಿಗೆ

ಗೊತ್ತಿರಲಿಲ್ಲ. ಆದರೆ ಕೋಟೆ ಕಾಯುತ್ತಿದ್ದ ಸೈನಿಕರಲ್ಲೊಬ್ಬ ಅವನ ಸ್ನೇಹಿತ. ಹಿಮದಲ್ಲೇ ಅವನ ಬಳಿಗೆ ಹೋಗಿ ಪ್ರಶ್ನೆ ಹಾಕಿದರು. ಆದರೆ ಅವನಿಗೂ ಗೊತ್ತಿರಲಿಲ್ಲ.

"ಅವಕಾಶ ಸಿಕ್ಕಿದರೆ, ಗುಮಾಸ್ತೆಯನ್ನು ಕೇಳು" ಸ್ಪಿಂಕ್ಸ್ ಮಾತು ಮುಗಿಸಿದ.

"ಕಷ್ಟ ಪರಂಪರೆಯಿಂದ ನಮ್ಮನ್ನು ಪಾರುಮಾಡಿದ ಪುಣ್ಯ ನಿನಗೆ ಬರುತ್ತದೆ" ಫೆರ್ನ್ ಮಾತು ಜೋಡಿಸಿದ.

ಕೆಳ ಬ್ರಾಡ್ವೆಯ ಸುಂದರ ವಸತಿ ಗೃಹಗಳನ್ನು ಹಾದು, ಕ್ಯಾಪ್ಟರ್ ಮನೆಯ ಮುಂದೆ ಬಂದರು. ಬಾಗಿಲ ಬಳಿಯಿಂದ ಹಿಮವನ್ನು ಎತ್ತಿ ಹಾಕುತ್ತಿದ್ದ, ಸೊಗಸಿನುಡುಪು ತೊಟ್ಟ ನೀಗ್ರೋ ಗುಲಾಮನನ್ನು ಮಾತನಾಡಿಸಲು ನಿಂತರು.

"ಓ, ಸೀಜರ್" ಅವನನ್ನು ಸ್ಪಿಂಕ್ಸ್ ಕೂಗಿ ಪ್ರಶ್ನೆ ಹಾಕಿದ, "ಆ ಕಾನೂನು ಪತ್ರದ ವಿಷಯ ಕ್ಯಾಪ್ಟನ್ನಿಗೆ ಗೊತ್ತೆ? ಮಾರ್ಷ್ ಹೇಳಿದ್ದೆಲ್ಲ ನಿಜವೆ?"

"ನಾನು ಮಾರ್ಷ್ ನೋಡಿ ಬಹಳ ಕಾಲವಾಯಿತು." ಎಂದ ಆ ಭಾರಿ ನೀಗ್ರೋ. "ಏನು ಕಾಗದ ನೀವು ಹೇಳಿದ್ದು?" ಅವರು ವಿವರಿಸಿದಾಗ, ಅವನು ಭರವಸೆಯಿತ್ತ, "ಪತ್ತೆ ಮಾಡಬಲ್ಲೆ"

ಎರಡು ದಿನಗಳ ನಂತರ ಸ್ಪಿಂಕ್ಸ್ ನೋಡಲು, ಸೈನಿಕ ಸತಿ ಹಾಕಿನ್ಸಳ ಹೋಟೆಲಿಗೆ ಬಂದ. "ನೀವು ಸಹಿ ಹಾಕಿದ ಕಾಗದ, ರಾಜ ಪ್ರತಿನಿಧಿ ಮಂಡಲದ ಅಧ್ಯಕ್ಷ ವಾನ್ ಡಾಂನನ್ನು ದಸ್ತಗಿರಿ ಮಾಡುವ ಆಜ್ಞೆ, ಎಂದು ಗುಮಾಸ್ತೆ ಹೇಳಿದ."

ಸ್ಪಿಂಕ್ಸ್ ಗಟ್ಟಿಯಾಗಿ ಬಯ್ಯತೊಡಗಿದ. "ಅಂತೂ ಕಷ್ಟದ ಕಂದರಕ್ಕೆ ಉರುಳಿದ್ದೇವೆ! ಆ ನೀಚ ಮಾರ್ಷಲ್ ನಮಗೇಕೆ ಹೇಳಲಿಲ್ಲ?" ಫೆರ್ನನ್ನು ಕರೆದ. ಇಬ್ಬರೂ ಹಲವಾರು ಬೀರ್ ಹೀರಿದರು.

ಈ ಫಜೀತಿಯ ಪ್ರಸಂಗವನ್ನು ಚರ್ಚಿಸುತ್ತ ಒದ್ದಾಡಿದರು.

"ಅಂಥಾ ದೊಡ್ಡ ಮನುಷ್ಯನ್ನ ನಾವು ಜೈಲಿಗೆ ಕಳಿಸಿದರೆ,

ಕ್ಯಾಪ್ಟನ್ನಿಗೆ ಅದು ಸಮ್ಮತವಿಲ್ಲದಿದ್ದರೆ, ಅವನು ನಮ್ಮಿಬ್ಬರಿಗೂ ನಮ್ಮ ಕೈಲೇ ಉರುಲು ಹಾಕಿಸುವುದು ಖಚಿತ. ಇದು ನಮ್ಮದೇ ಮೂರ್ಖತನ, ನಮ್ಮದೇ ತಪ್ಪು !"

ಮುಂದೇನು ಮಾಡಬೇಕೆಂಬುದು ಅವರಿಗಿನ್ನೂ ಹೊಳೆಯದೇ ಇದ್ದಾಗ, ಸೀಜರ್, ತನ್ನ ಕ್ಯಾಪ್ಟನ್ನನ ಸುಂದರ, ಹಸಿರು ಜರಿ ಉಡುಪನ್ನು ಧರಿಸಿ ಬಂದ.

"ತರಲೆ ಮಾಡಿಕೊಂಡಿದೀರಿ ! ತತ್‌ಕ್ಷಣ ನಿಮ್ಮನ್ನು ನೋಡಬೇಕೆಂದು ಕ್ಯಾಪ್ಟ್ ಹೇಳಿ ಕಳಿಸಿದ್ದಾರೆ, ಬನ್ನಿ !" ಸೀಜರ್ ನಗುತ್ತ ನುಡಿದ.

"ನಗೋದೇಕೆ ?" ಸ್ಪಿಂಕ್ಸ್ ಪ್ರಶ್ನಿಸಿದ.

"ಗೊತ್ತಾಗುತ್ತೆ, ಬನ್ನಿ" ಗುಲಾಮ ಮುಂದೆ ನಡೆದ.

ಪುತ್ತೆ ಹಿಮದಲ್ಲೇ ಹೆಜ್ಜೆ ಹಾಕಿ ಆ ಇಬ್ಬರು ನಾವಿಕರೂ, ತಮ್ಮ ಕ್ಯಾಪ್ಟನ್ನನ ಭವ್ಯ ಭವನವನ್ನು ಪ್ರವೇಶಿಸಿದರು.

ವೆಸ್ಟ್ ಚೆಸ್ಟರ್ ಚುನಾವಣೆಯ ದಿನ "ಸೀ ಫ್ಲೋರ್ತ್" ಯುದ್ಧದ ಹಡಗಿನಲ್ಲಿ ಗವರ್ನರ್ ಕಾಸ್ಬಿಯ ಗೌರವಾರ್ಥ ಭೋಜನ ಕೂಟ ಏರ್ಪಡಿಸಿದ್ದವನು ಈ ಕ್ಯಾಪ್ಟ್ ರಾಬರ್ಟ್ ಲಾಂಗೇ. ಜನ ಸೇವಾ ಧುರೀಣ. (ಅನಂತರ ತನ್ನ ವೆಚ್ಚದಲ್ಲಿ ನಗರಕ್ಕೊಂದು ಬಂದರು ಕಟ್ಟೆಯನ್ನು ಕಟ್ಟಿಸಿಕೊಟ್ಟ.) ಗವರ್ನರ್ ಕಾಸ್ಬಿ ಸಜ್ಜನನೆಂದು ತಾನು ನಂಬಿರುವ ತನಕ ಅವನಿಗೆ ವಿಧೇಯನಾಗಿದ್ದ.

ನಾವಿಕರಿಬ್ಬರನ್ನೂ ಕಂಡೊಡನೆ, "ಆ ನೀಚ ಮಾರ್ಷ್ ಜೊತೆ ಸೇರಿ ನೀವಿಬ್ಬರು ಏನು ಮಾಡಿದಿರಿ ?" ಎಂದು ಜಬರ್ದಸ್ತಿಯಿಂದ ಪ್ರಶ್ನಿಸಿದ. "ಇಷ್ಟು ತಿಳಿದುಕೊಳ್ಳಿ : ಅವನಂಥ ಕುಟಿಲನೊಡನೆ ಸೇರಿ, ನನ್ನ ನಾವಿಕರು ಮಸಲತ್ತು ನಡೆಸುವುದನ್ನು ನಾನು ಸಹಿಸಲಾರೆ ! ಒದರಿ ಬೇಗ !"

ಬೊಗಸೆ ತುಂಬ ಬೆಳ್ಳಿ ನಾಣ್ಯಗಳನ್ನು ಜೇಬಿನಿಂದ ತೆಗೆದದ್ದು, ಅವುಗಳ ಮೂಲ ಅರ್ಥವಾಗದ್ದು, ವ್ಹಿಸ್ಕಿ ಹೀರಿದ್ದು, ಪಾರ್ಚ್‌ಮೆಂಟ್ ಕಾಗದಕ್ಕೆ ಸಹಿ ಹಾಕಿದ್ದು—ಈ ಎಲ್ಲಾ ಕಥೆಯನ್ನೂ ಅವರು

ಬಿಚ್ಚಿದರು. ಕ್ಯಾಪ್ಟರ್ ಲಾಂಗನ ಮುಖ ಕಪ್ಪಿಟ್ಟಿತು. ಯುದ್ಧದ ಹಡಗಿನ ಕ್ಯಾಪ್ಟರ್ ಅವನು. ಅವನ ಕೋಪವೆಂದರೆ, ಎಲ್ಲಾ ತರಗುಟ್ಟು ತ್ತಿದ್ದರು. "ಆ ಕಾಗದದ ಸುದ್ದಿಯೇ ನನಗೆ ಗೊತ್ತಿಲ್ಲವಲ್ಲ!" ತನ್ನ ಆಜಾನುಬಾಹುಗಳನ್ನು ಅಗಲಿಸುತ್ತ ಕೂಗಿದ.

ಅವರು ಮಾತು ಮುಗಿಸಿದ ಮೇಲೆ, ತನ್ನ ಆಜ್ಞೆಗಳಿಗಾರಂಭಿಸಿದ. "ನೀವೊಂದು ಮೂರ್ಖ ಜೋಡಿ!" ಅಬ್ಬರಿಸಿದ. "ತಲೆ ಖಾಲಿ ಇದ್ದವರು ಮಾತ್ರಾ ಅಂಥ ಕಾಗದಕ್ಕೆ ಸಹಿ ಹಾಕಿಯಾರು! ಟಾರು ಮೆತ್ತಿದ ಪೆದ್ದರು ನೀವು. ಸೀದಾ ನೋಟರಿ ಕಛೇರಿಗೆ ಹೋಗಿ, ನಿಮ್ಮ ಹೊಲಸು ಕತೆಯನ್ನೆಲ್ಲ ಅಧಿಕಾರಿಯ ಕಿವಿಯಲ್ಲಿ ಕಾರಿ. ಅವನು ಅದನ್ನೆಲ್ಲ ಬರೆದುಕೊಳ್ಳುವಂತೆ ಮಾಡಿ, ನೀವಿಬ್ಬರೂ ಅದಕ್ಕೆ ಸಹಿ ಹಾಕಿ. ಅದರ ಪ್ರತಿಯೊಂದನ್ನು ವಾನ್ ಡಾಂಗೆ ಕಳಿಸಬೇಕೆಂದು ನಾನು ಹೇಳಿದೆನೆಂದೂ ಬೊಗಳಿ!"

ನಾವಿಕರು ತಮ್ಮ ಹ್ಯಾಟುಗಳಿಗಾಗಿ ತಡಕಾಡುತ್ತ ನಿಂತರು. "ಆಗಲಿ ಸಾರ್, ಆಗಲಿ ಸಾರ್" ಎಂದು ಉತ್ತರಿಸಿ, ಅಲ್ಲಿಂದ ಓಡಿದರು. ಆ ಪೆಡಂಭೂತದ ಕೈಲಿ ಏಟು ತಿನ್ನದೆ ಪಾರಾದೆವಲ್ಲ ಎಂಬ ಸಂತೋಷ ಅವರಿಗೆ ಸ್ವಲ್ಪ ನೆಮ್ಮದಿ ತಂದಿತ್ತು.

---

# ಅಧ್ಯಾಯ ೧೬

## ಶ್ರೇಷ್ಠ ಜ್ಯೂರಿ ಮಂಡಲ

ವಿಲಿಯಂ ಸ್ಪಿಂಕ್ಸ್ ಮತ್ತು ನೋಟರಿ, ವಿಲಿಯಂ ಫೆರ್ನ್ ಮತ್ತು ನೋಟರಿ ಈ ರೀತಿ ಇಬ್ಬಿಬ್ಬರು ಸಹಿ ಹಾಕಿದ್ದ ಎರಡು ದಾಖಲೆ ಪತ್ರಗಳನ್ನು ಹಿಡಿದು, ಜೆಂಗರನ ಮುದ್ರಣಾಲಯಕ್ಕೆ ಕಾಲಿಟ್ಟ ವೃದ್ಧ ವಾನ್ ಡಾಂನ ಕೈಗಳು ನಡುಗುತ್ತಿದ್ದವು. ಕಣ್ಣುಗಳಲ್ಲಿ ಗಾಭರಿ ಮೂಡಿತ್ತು. ಆದರೆ ಮುಖದಲ್ಲಿ ಹಿಂದಿನಂತೆಯೇ ಛಲವಿತ್ತು.

ಈ ಕಾಗದಗಳನ್ನು ಓದಿದಾಗ ಕ್ಯಾಥರೀನ್‌ಗೆ ಮೇಲುಸಿರು ಬಂತು. ಆಕೆಯ ಗಂಡ ಮನೆಯಲ್ಲಿರಲಿಲ್ಲ. "ನಗರ ಭವನಕ್ಕೆ ಹೋಗಿದಾನೆ. ಸುಪ್ರೀಂ ಕೋರ್ಟಿನಲ್ಲಿ ಇಂದು ಏನೋ ಆಗಲಿದೆ ಯೆಂದು ಜನ ಹೇಳುತ್ತಿದಾರೆ." ಎಂದಳು.

ಕೋರ್ಟಿನಲ್ಲಿ ಆಗಲೇ ಜನ ನೆರೆದಿದ್ದುದನ್ನು ಜೆಂಗರ್ ನೋಡಿದ. ತಾನು ಪ್ರವೇಶಿಸಿದಾಗ, ಅನೇಕ ಮುಖಗಳು ತನ್ನ ಕಡೆಯೇ ತಿರುಗಿದುದನ್ನು ಕಂಡಾಗ, ಒಗಟಿನಂತೆ ಭಾಸವಾಯಿತು. ಕೆಲವರು ಅವನ ಕಡೆ ಕೈ ತೋರಿಸಿದರು. ಮತ್ತೆ ಕೆಲವರು "ಅವನಾರು ?" ಎಂದು ಪಿಸುಮಾತಿನಲ್ಲಿ ಕೇಳಿದರು; ಪಕ್ಕದವರು ಬಾಯಿಗೆ ಕೈ ಮರೆಮಾಡಿಕೊಂಡು ಉತ್ತರಿಸಿದರು. ಇದೆಲ್ಲ ಏನೆಂದು ಅರ್ಥವಾಗದೆ, ಸ್ಥಳ ಸಿಕ್ಕಿದೊಡನೆಯೇ ಕುಳಿತುಕೊಂಡ.

ನ್ಯೂಯಾರ್ಕಿನ ಓಟರುಗಳ ಪಟ್ಟಿಯಿಂದ, ಷರೀಫ್ ಆಯ್ಕೆ ಮಾಡಿದ್ದ, ೧೯ ಮಂದಿಯ ಭಾರಿ ಜ್ಯೂರಿ ಮಂಡಲ ಸೇರಿತ್ತು. ಆ ಪೈಕಿ ಕೆಲವರು, ರಸ್ತೆಯಲ್ಲಿ ಕಂಡಾಗ, ನಮಸ್ಕಾರ ಹೇಳುವಷ್ಟು ಪರಿಚಿತರು. ಮೂವರು ಶ್ರೀಮಂತ ವರ್ತಕರೂ ಅದರಲ್ಲಿದ್ದರು. ಅಟಾರ್ನಿ ಜನರಲ್ ಅಥವಾ ನ್ಯಾಯ ಮೂರ್ತಿಗಳು ಯಾರ

ಮೇಲಾದರೂ ದೂರು ಹೊರಿಸುವುದನ್ನು ಅವರು ಎದುರು ನೋಡುತ್ತಿದ್ದರು. ಮೊಕದ್ದಮೆ ಯಾರ ಮೇಲೆ ಎಂದು ಜೆಂಗರಿಗೆ ಇನ್ನೂ ಗೊತ್ತಿರಲಿಲ್ಲ. ಯಾರ ಮೇಲದಾದರೂ, ಆಪಾದನೆಯ ಬಗೆಗೆ ಜ್ಯೂರಿಗಳ ಅಭಿಮತ ಕೇಳಲಾಗುವುದೆಂಬುದು ಮಾತ್ರಾ ತಿಳಿದಿತ್ತು. ಜ್ಯೂರಿ ಮಂಡಲದವರು ದೂರಿಗೆ ಆಧಾರವಿದೆಯೆಂದು ಬಹುಮತ ವಿತ್ತರೆ, ಆಗ ಅಂತಹವನನ್ನು ಬಂಧಿಸಿ ವಿಚಾರಣೆಗೆ ಗುರಿಪಡಿಸ ಲಾಗುವುದು.

ಯಾರ ಗ್ರಹಚಾರ? ಎಂದು ಜೆಂಗರ್ ಚಿಂತಿಸಿದ.

ನೆರೆದಿದ್ದವರೆಲ್ಲ ನಿಂತುಕೊಳ್ಳಬೇಕೆಂದು ಗುಮಾಸ್ತೆ ಹೇಳಿದ. ಇಬ್ಬರು ನ್ಯಾಯಮೂರ್ತಿಗಳೂ ಬಂದು ತಮ್ಮ ಸ್ಥಳಗಳಲ್ಲಿ ಕುಳಿತು ಕೊಂಡರು. ಗಾಂಭೀರ್ಯ, ಠೀವಿಗಳ ಜೊತೆಗೆ ಸ್ವಲ್ಪ ಅಳುಕೂ ಅವರ ಮುಖಗಳಲ್ಲಿತ್ತು. ಸಾಮಾನ್ಯವಾಗಿ ಮೂವರು ನ್ಯಾಯಾಧೀಶರು ಕುಳಿತು ಕೊಳ್ಳುತ್ತಿದ್ದರು. ಆದರೆ ಮಾರಿಸ್ಸನ್ನು ವಜಾ ಮಾಡಿದಾಗ, ಗವರ್ನರ್ ಕಾಸ್ಬಿ ಅವರ ಸಂಖ್ಯೆಯನ್ನು ಎರಡಕ್ಕಿಳಿಸಿದ್ದ. ಇಂಗ್ಲೆಂಡಿನ ನ್ಯಾಯ ಮೂರ್ತಿಗಳಂತೆ ನ್ಯೂಯಾರ್ಕಿನವರು, ವಿಶೇಷ ಟೋಪನ್ (ವಿಗ್) ಗಳನ್ನೂ ನಿಲುವಂಗಿಗಳನ್ನೂ ಧರಿಸದೆ ಇದ್ದರೂ, ಠೀವಿ, ಜಬರ್ದಸ್ತು ಗಳನ್ನು ಕೈಬಿಟ್ಟಿರಲಿಲ್ಲ. ಗಂಭೀರವದನದಿಂದ ಪುಸ್ತಕಗಳನ್ನು ಕೈಯಲ್ಲಿ ಹಿಡಿದು ಗುಮಾಸ್ತರುಗಳು ಅವರ ಮುಂದೆ ಹೆಜ್ಜೆ ಹಾಕುತ್ತಿದ್ದರು. ಚಿನ್ನದ ಗುಂಡಿಗಳಿಂದಲೂ, ಚಿನ್ನದ ನಕಾಶೆಗಳಿಂದಲೂ ಅಲಂಕೃತವಾದ ದಿವ್ಯ ರೇಷ್ಮೆ ಸೂಟನ್ನು ತೊಟ್ಟ ನ್ಯಾಯ ಮೂರ್ತಿಗಳು ಒಬ್ಬೊಬ್ಬರಾಗಿ ಪ್ರವೇಶಮಾಡಿದರು.

ವೆಸ್ಟ್ ಚೆಸ್ಟರ್ ಚುನಾವಣೆಯಲ್ಲಿ ಕಂಡಂತೆ ಅದೇ ಅರಕ್ತ, ತೀವ್ರ ಮುಖ ಲಕ್ಷಣಗಳನ್ನು ಬೀರುತ್ತ, ಡಿಲಾನ್ಸೆ ಶ್ರೇಷ್ಠ ನ್ಯಾಯ ಮೂರ್ತಿಯಸ್ಥಾನದಲ್ಲಿ ಕುಳಿತು ಕಾಗದಗಳನ್ನು ತಿರುವಿಹಾಕತೊಡಗಿದ. ೧೯ ಜ್ಯೂರರುಗಳೂ ಎದ್ದು ನಿಂತು ಬೈಬಲ್‌ಗಳ ಮೇಲೆ ಕೈಗಳನ್ನಿಟ್ಟು ಸತ್ಯವಾದ ತೀರ್ಪನ್ನು ನೀಡುವುದಾಗಿ ಪ್ರಮಾಣವಚನ ಮಾಡ ಬೇಕೆಂದು ಗುಮಾಸ್ತ ಕೇಳಿಕೊಂಡ.

ಹೊಸ ಶ್ರೇಷ್ಠ ನ್ಯಾಯ ಮೂರ್ತಿಯನ್ನು ಜೆಂಗರ್ ಸೂಕ್ಷ್ಮವಾಗಿ ಅವಲೋಕಿಸಿದ. ಅಂದಿನದು ನ್ಯಾಯ ಮೂರ್ತಿಗಳನ್ನು ಗವರ್ನರ್ ವಜಾ ಮಾಡಬಹುದಾದ ಕಾಲ, ಅಂತೇ ಅವರು ಗವರ್ನರ ಆಜ್ಞೆಯಂತೆ ನಡೆಯಬೇಕಿತ್ತೆಂಬುದು, ಸ್ವಯಂಸ್ಪಷ್ಟ.

ಹೊಸ ಶ್ರೇಷ್ಠ ನ್ಯಾಯ ಮೂರ್ತಿ ಡಿಲಾನ್ಸೆ ಗವರ್ನರ್ ಪಕ್ಷದ ನಾಯಕ; ನಗರದ ಶ್ರೀಮಂತಾಗ್ರಣಿಯಾದ ವರ್ತಕನ ಮಗ; ಇಂಗ್ಲೆಂಡಿನ ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯದಲ್ಲಿ ಅಧ್ಯಯನ ಮಾಡಿದವನು.. ಅವನಿಗೆ ಪಾಠ ಹೇಳಿಕೊಟ್ಟ ಗುರು, ಅನಂತರ ಆಪ್ತ ಮಿತ್ರನಾದ. ಈಗವನು ಬ್ರಿಟಿಷ್ ಸರಕಾರದಲ್ಲಿ ಪ್ರಭಾವಶಾಲಿ ಯಾದ ಕ್ಯಾಂಟರ್ ಬರಿಯ ಆರ್ಚ್ ಬಿಸಪ್. ತರುಣ ಡಿಲಾನ್ಸೆ ಬುದ್ಧಿವಂತ. ಪಾಠ ಪ್ರವಚನಗಳು ಅವನಿಗೆ ಅತಿ ಸುಲಭವೆನಿಸಿದ್ದವು. ಓದಿಗಾಗಿ ಕಷ್ಟಪಡಲಿಲ್ಲ; ತೀವ್ರ ಅಧ್ಯಯನದಲ್ಲಿ ಅವನಿಗೆ ಆಸಕ್ತಿಯೂ ಇರಲಿಲ್ಲ. ಲಂಡನ್ನಿನ ಕಾನೂನು ಶಾಲೆಯ ಓದನ್ನು ಒಂದೇ ವರ್ಷದಲ್ಲಿ ಮುಗಿಸಿ, ಸುಲಭವಾಗಿ ಬಾರ್ ಪ್ರವೇಶಮಾಡಿದ್ದ.

ನ್ಯೂಯಾರ್ಕಿಗೆ ಹಿಂತಿರುಗಿದ ಮೇಲೆ, ಅವನ ಜಾಣ್ಮೆ, ಅವನ ಹಣ, ಮುಂದಕ್ಕೆ ಬರಲು ಸಹಾಯಕವಾದವು. ಶ್ರೀಮಂತ ವೃದ್ಧ ರಾಜಕಾರಣಿಯೊಬ್ಬನ ಮಗಳನ್ನು ವಿವಾಹವಾಗಿ ಬ್ರಾಡ್ವೆಯಲ್ಲಿ ಟ್ರನಿಟಿ ಚರ್ಚಿನ ಬಳಿ, ಭವ್ಯ ಬಂಗಲೆಯೊಂದನ್ನು ಕಟ್ಟಿಕೊಂಡ.

ಜ್ಯೂರರುಗಳು ಕುಳಿತೊಡನೆಯೇ ರೇಗಿದ ಧ್ವನಿಯಲ್ಲಿ ಸರಸರನೆ ಅವರನ್ನುದ್ದೇಶಿಸಿ ಓದ ತೊಡಗಿದ : “ದೊರೆ, ಅರ್ಹನೆಂದು ಭಾವಿಸಿ ನೇಮಿಸಿರುವ ಈ ಪ್ರದೇಶದ ಗವರ್ನರರ ವಿಷಯದಲ್ಲಿ, ಇಲ್ಲಿನ ಪ್ರಜೆಗಳ ಮನಸ್ಸನ್ನು ಕೆಡಿಸುವ ಉದ್ದೇಶದಿಂದ ಇತ್ತೀಚೆಗೆ ಕೆಲವು ಪತ್ರಿಕೆಗಳು ಪ್ರಕಟವಾಗುತ್ತಿರುವುದನ್ನು ನೀವು ಗಮನಿಸಿರಬಹುದು”

ಜೆಂಗರಿಗೆ ತಲೆಯ ಮೇಲೆ ದೊಣ್ಣೆಯ ಪೆಟ್ಟು ಬಿದ್ದಂತೆ ಭಾಸವಾಯಿತು. ಒಡನೆ ಮೈ ನಿಮಿರಿಸಿ ಕುಳಿತುಕೊಂಡ. ಗವರ್ನರನ್ನು ಖಂಡಿಸಿದ ಪತ್ರಿಕೆಗಳೆಲ್ಲ ತನ್ನ ಮುದ್ರಣಾಲಯದಲ್ಲೇ ಅಚ್ಚಾದವು.

"ಮುಖ್ಯವಾಗಿ" ನ್ಯಾಯ ಮೂರ್ತಿ ಮುಂದುವರೆದ, "ಕೆಲವರು ಅತ್ಯುಗ್ರ ರೀತಿಯಲ್ಲಿ, ಗವರ್ನರ ಮೇಲೆ ಹೊಲಸು ವರದಿಗಳನ್ನೂ, ಅವಹೇಳನಕರ ಆಪಾದನೆಗಳನ್ನೂ ಕುಪ್ಪೆ ಹಾಕುವ ಯತ್ನ ಮಾಡಿದ್ದಾರೆ. ಅಂಥ ಸ್ಥಾನಮಹತ್ವದ ವ್ಯಕ್ತಿಯ ವಿಷಯದಲ್ಲಿ ಜನತೆಗೆ ಇರಬೇಕಾದ ಗೌರವಕ್ಕೆ ಕುಂದು ತರುವ ಉದ್ದೇಶದಿಂದ ಅವರು ಅನೇಕ ರಾಜದ್ರೋಹಕರವಾದ ದೂಷಣೆಗಳನ್ನು ಮುದ್ರಿಸಿ, ಹಬ್ಬಿಸಿದ್ದಾರೆ."

'ರಾಜದ್ರೋಹಕರವಾದ ದೂಷಣೆಗಳು' ಎಂಬ ಶಬ್ದಗಳು ಕಿವಿಗೆ ಬಿದ್ದೊಡನೆಯೇ ಜೆಂಗರನ ಮುಖಕ್ಕೆ ತಣ್ಣೀರೆರಚಿದಂತಾಯಿತು. ಮರುಕ್ಷಣದಲ್ಲೇ ಮುಖ ಬಹಳ ಬಿಸಿಯಾಯಿತು. ತನ್ನ ಪತ್ರಿಕೆಯಲ್ಲಿ ಮುದ್ರಿತವಾದ ಯಾವುದೇ ಸಂಗತಿಯಾದರೂ 'ದೂಷಣೆ' ಎಂದು ನಿರ್ಧರಿತವಾದರೆ, ತನ್ನ ಕಿವಿಗಳು ಕತ್ತರಿಸಿಹೋಗುತ್ತವೆ; 'ರಾಜದ್ರೋಹ' ಎಂದು ಸಿದ್ಧಾಂತವಾದರೆ, ನೇಣುಗಂಬದಿಂದ ನೇತಾಡಬೇಕಾಗುತ್ತದೆ.

"ಲೇಖಕರು ಯಾರೆಂಬುದು ಖಚಿತವಾಗಿ ತಿಳಿದು ಬಂದಿಲ್ಲ" ನ್ಯಾಯ ಮೂರ್ತಿ ಒಪ್ಪಿಕೊಂಡ. "ಆದರೆ ಅವರಾರೆಂಬುದನ್ನು ಊಹಿಸುವುದು ಸುಲಭ. ವಾನ್ ಡಾಂನ ಹೆಸರು ಬಳಸಿಕೊಂಡು, ಜನ ಸಾಮಾನ್ಯರಲ್ಲಿ ಅವರು ಸ್ವಲ್ಪ ಪ್ರಭಾವವನ್ನು ಗಳಿಸಿಕೊಂಡಿದ್ದಾರೆ"

ನ್ಯಾಯಮೂರ್ತಿ ಡಿಲಾನ್ಸೆ ಜ್ಯೂರಿಗಳೊಡನೆ ಅರ್ಧಗಂಟೆ ಕಾಲ ಘಾತನಾಡಿದ. ಕೋಪದಿಂದ ಗೊಗ್ಗರಾದ ಗಂಟಲಿನಲ್ಲಿ, ಪತ್ರಿಕಾ ಸ್ವಾತಂತ್ರ್ಯ ಅಪಾಯಕರ, ಎಂದು ಸಾರಿದ. ಕಡೆಗೆ ತನ್ನ ಮಾತನ್ನು ಮುಕ್ತಾಯಗೊಳಿಸುತ್ತ "ನಿಮ್ಮಲ್ಲಿ ಬಹುಜನ ನನಗೆ ವೈಯಕ್ತಿಕವಾಗಿ ಗೊತ್ತು." (ಸ್ವಲ್ಪ ಹೆಚ್ಚು ಕಮ್ಮಿ ಬೆದರಿಕೆಯಂತೆಯೇ ಇದ್ದ ಇಂಥ ಮಾತು ನ್ಯಾಯಮೂರ್ತಿಯ ಬಾಯಲ್ಲಿ ಬಂದದ್ದು ವಿಚಿತ್ರ) "ನೀವು ನಿಮ್ಮ ಕರ್ತವ್ಯಪಾಲನೆ ಮಾಡುವಿರೆಂಬುದರಲ್ಲಿ ನನಗೆ ಸಂದೇಹವೇನೂ ಇಲ್ಲ." ವಾನ್ ಡಾಂ ಅಥವಾ ಜೆಂಗರ್ ಇಬ್ಬರಲ್ಲೊಬ್ಬರ ಮೇಲೆ ತಪ್ಪು ಹೊರಿಸಿ ಎಂದು ಸೂಚಿಸಿದ.

ಜ್ಯೂರಿಗಳು ತಮ್ಮ ಕೊಠಡಿಗೆ ತೆರಳಿ, ದಿನವೆಲ್ಲ ಅಲ್ಲೇ ಇದ್ದರು.

ಆ ಸಾವಕಾಶದಿಂದ ಜೆಂಗರ್ ಬಳಲಿದ. ಮೊದಲೇನೋ ಮುಗುಳ್ನಕ್ಕು ಹೆಗಲೇರಿಸಿದ. ಆದರೆ ಗಂಟೆಗಳು ಕಳೆದಂತೆ ಕಳವಳ, ಚಿಂತೆ, ಕಾಡತೊಡಗಿದವು. ಸುಸ್ತಾದ.

ಕೋರ್ಟಿನ ಅಧಿವೇಶನವನ್ನು ಮರುದಿನಕ್ಕೆ ಮುಂದುವರಿಸಿದಾಗ, ಸೀದ ಮನೆಗೆ ಧಾವಿಸಿದ. ಅವನಲ್ಲಿ ಹುರುಪು ತುಂಬಲು ಕ್ಯಾಥರೀನ್ ಪ್ರಯತ್ನಿಸಿದಳು. ಮೂವರು ನಾವಿಕರ ಸಹಾಯದಿಂದ ಕಾಸ್ಬಿ ಹೂಡಿದ್ದ ಮಸಲತ್ತನ್ನು ವಾನ್ ಡಾಂ ಅರಿತಿದ್ದಾನೆಂಬ ಸುದ್ದಿಯನ್ನೂ ಹೆಚ್ಚಿನ ಆಸಕ್ತಿಯಿಂದ ಮನಸ್ಸಿನಲ್ಲಿ ಮೊಗಚಿದ.

"ನಾವಿಕರಿಬ್ಬರ ಈ ಸಾಕ್ಷ್ಯಗಳನ್ನು ನಾವು ಪ್ರಕಟಿಸಿದರೆ, ಊರಿನರ್ಧ ಜನ ಬೊಬ್ಬೆಯೆಬ್ಬಿಸಿಯಾರು!" ಎಂಬ ಸೂಚನೆಯನ್ನು ಮನಃಪೂರ್ವಕವಾಗಿ ಅಂಗೀಕರಿಸಿದ.

"ನಾವದನ್ನು ಮುದ್ರಿಸುವ ಮುನ್ನ ದಸ್ತಗಿರಿಯಾಗದಿದ್ದರೆ!"

ಎಂದು ಸಂದೇಹಿಸಿದ.

ಮರು ಬೆಳಿಗ್ಗೆ ಜೆಂಗರ್ ಕಳವಳದಿಂದಲೇ ಕೋರ್ಟಿಗೆ ಬಂದ. ಬಂಧನ, ವಿಚಾರಣೆಗಳಿಗೆ ಗುರಿಯಾಗಬೇಕೆಂಬ ಮಾತನ್ನು ಕೇಳಬೇಕಾಗಿದೆಯೇನೋ ಎಂದುಕೊಂಡ. ಅಪಾಯವೇ ತನ್ನ ಬಳಿಗೆ ಉರುಳಿ ಬರುತ್ತಿರುವಂತೆ ಭಾಸವಾಯಿತು.

ಫ್ಲೋರ್‌ಮನ್, ತರುಣ ನ್ಯಾಯ ಮೂರ್ತಿಯ ಮುಂದೆ ಬಾಗಿ ನಮಸ್ಕರಿಸಿ, ಕೈಲಿದ್ದ ಕಾಗದವೊಂದರಿಂದ ಓದತೊಡಗಿದ :

"ಗೌರವಾನ್ವಿತ ಶ್ರೇಷ್ಠ ನ್ಯಾಯ ಮೂರ್ತಿಗಳಾದ ತಮಗೆ ಸಮ್ಮತವೆನಿಸಿದರೆ, ತಮ್ಮ ದೂರನ್ನು, ಪ್ರಜೆಗಳಿಗೆ ಉಪಕಾರ ಮಾಡುವ ದೃಷ್ಟಿಯಿಂದ, ಮುದ್ರಿಸಿ ಕೊಡಬೇಕೆಂದು, ನ್ಯೂಯಾರ್ಕ್ ಕೌಂಟಿಯ ಶ್ರೇಷ್ಠ ಜ್ಯೂರಿ ಮಂಡಲ ತಮ್ಮಲ್ಲಿ ವಿನಯಪೂರ್ವಕವಾಗಿ ಅರಿಕೆ ಮಾಡಿಕೊಳ್ಳುತ್ತದೆ."

ನ್ಯಾಯ ಮೂರ್ತಿ ವಿಚಿತ್ರ ನಗೆ ನಕ್ಕು ಭುಜ ಕುಣಿಸಿದ.

"ಈ ಕೇಳಿಕೆಗೆ ಕೋರ್ಟಿನ ಸಮ್ಮತಿಯಿದೆ." ಎಂದ.

ಅಂಗಡಿಯಲ್ಲೇ ಕುಳಿತು, ಅದರಲ್ಲಿನ ಅಂಶಗಳನ್ನು ಪರಸ್ಪರ ತೋರಿ ಸುತ್ತ, ಓದತೊಡಗಿದರು.

ಕ್ಯಾಥರೀನ್ ಭಾವ ನಿಕೊಲಾಸ್ ಸಿಜ್ ಮೊದಲೇ ಬಂದು, ಪ್ರತಿಯೊಂದನ್ನು ತೆಗೆದುಕೊಂಡು ಓದುತ್ತ ಕುಳಿತ. ಅದರ ಪ್ರತಿ ಪುಟವನ್ನೂ ಬರುತ್ತಿದ್ದ ಗಿರಾಕಿಗಳೊಡನೆ ಚರ್ಚಿಸತೊಡಗಿದ.

ಪೂರ್ಣ ಕಥೆ ಅದರಲ್ಲಿತ್ತು. "ಪೆಟ್ಟು ತಿಂದ ಮುಳ್ಳು ಹಂದಿಗಳು!" ಎಂದ ಸತ್ಯಪರಾಯಣ ವೀಲ್‌ರೈಟ್. "ಕಾಸ್ಬಿ ಅವನನ್ನು ದಸ್ತಗಿರಿ ಮಾಡುವುದು ಖಚಿತ!" ಎಂದು, ಎರಡು ಜೀವಂತ ಕೋಳಿಗಳನ್ನು ಕಾಲುಕಟ್ಟಿ ಹೆಗಲು ಮೇಲೆ ಹಾಕಿಕೊಂಡು ಬಂದಿದ್ದ, ದಪ್ಪ ಹೆಂಗಸಿಗೆ ಹೇಳಿದ. ಆಕೆ ಪತ್ರಿಕೆಯನ್ನು ಕೊಳ್ಳಲು ಬಂದವಳು.

"ಹಾಗಲ್ಲ! ನಿನ್ನ ಮಾತು ಸರಿಯಲ್ಲ. ತಪ್ಪು ಹೊರಿಸಲು ಜ್ಯೂರಿಗಳೇ ನಿರಾಕರಿಸಿದಾರೆ."

ನಿಕ್ ಅಲ್ಲಿಂದಿಲ್ಲಿಗೆ ಹೆಜ್ಜೆ ಹಾಕುತ್ತಿದ್ದ. "ಜೆಂಗರ್ನಲ್ಲ, ವಾನ್ ಡಾಂನ್ನ! ನಿನ್ನ ಊಹೆಗಿಂತ ಹೆಚ್ಚಿನ ಚಳಕ ಕಾಸ್ಬಿಗಿದೆ! ಮೂವರು ಪಾನಮತ್ತ ನಾವಿಕರನ್ನು ಹಿಡಿದು ಕಾಗದವೊಂದಕ್ಕೆ ಸಹಿ ಹಾಕಿಸಿಕೊಂಡಿದಾನೆ! ಮುಳ್ಳು ಹಂದಿಗಳು! ನನ್ನ ನೆರೆಯವರಿಗೆಲ್ಲ ಹೇಳಿಬರುತ್ತೇನೆ ತಡೆ" ನಿಕ್ ಮುದ್ರಣಾಲಯದಿಂದ ಓಡಿದ.

ಸುದ್ದಿ ಹಬ್ಬಿತು. ಬೀದಿ ಮೂಲೆಗಳಲ್ಲೆಲ್ಲ ಜನ ಗುಂಪು ಕೂಡಿದರು. ಕೈಯಲ್ಲಿ ಕಿರಿಪುಸ್ತಕವನ್ನು ಹಿಡಿದು, ತಗ್ಗಿದ ಆದರೆ ಕೋಪಗ್ರಸ್ತ ಧ್ವನಿಯಲ್ಲಿ ಚರ್ಚಿಸತೊಡಗಿದರು.

"ಮೂವರು ಕುಡುಕರ ಆಪಾದನೆಯ ಮೇಲೆ ವಾನ್ ಡಾಂನನ್ನು ಬಂಧಿಸಿ, ಅವನ ಆಸ್ತಿಪಾಸ್ತಿಗಳನ್ನು ವಶಪಡಿಸಿಕೊಳ್ಳುವುದಾದರೆ ಕಾನೂನುಗಳೇಕೆ? ಕಾನೂನುಗಳಿಗಿಂತ ಗವರ್ನರೇ ಹೆಚ್ಚೇ?"

"ಅವನನ್ನು ದಸ್ತಗಿರಿ ಮಾಡಲಿ ನೋಡೋಣ! ಮಾಡಲಿ ನೋಡೋಣ! ನ್ಯೂಯಾರ್ಕ್ ನಗರದಲ್ಲಿ ರಕ್ತದ ಹೊಳೆ

ಹರಿದೀತು! ಮೊದಲ ಅಗ್ನಿ ಸ್ಪರ್ಶ ನ್ಯಾಯಮೂರ್ತಿ ಡಿಲಾನ್ಸೆ ಭವನಕ್ಕೆ!"

ಕಳವಳದಿಂದ, ಕೈಯುಜ್ಜಿಕೊಳ್ಳುತ್ತ ಅಲೆಕ್ಸಾಂಡರ್ ಮುದ್ರಣಾಲಯಕ್ಕೆ ಧಾವಿಸಿ ಬಂದ. ಬಾಗಿಲು ಬಳಿ ನಿಂತಿದ್ದವರು ಲಾಯರಿಗೆ ದಾರಿ ಮಾಡಿಕೊಟ್ಟರು. ಎಲ್ಲರ ತಲೆಯಮೇಲೆ ನಿಂತ ಅಲೆಕ್ಸಾಂಡರ್ ಅಲ್ಲೇ ನಿಂತು, ಅವರುಗಳನ್ನುದ್ದೇಶಿಸಿ ಮಾತನಾಡಿದ: "ಪತ್ರಿಕೆಯ ಶಕ್ತಿಯೇನೆಂಬುದನ್ನು ನೀವಿಂದು ನಿಮ್ಮ ಕಣ್ಮುಂದೇ ನೋಡುತ್ತಿದೀರಿ! ನಗರದಲ್ಲೆಲ್ಲ ಸುತ್ತಿ ಬಂದಿದ್ದೇನೆ. ಎಲ್ಲೆಲ್ಲೂ ಈ ಕುಡಕ ನಾವಿಕರ ಅಸಹ್ಯ ಪ್ರಸಂಗವೇ ಚರ್ಚಿತವಾಗುತ್ತಿದೆ!"

ಮುದ್ರಣಾಲಯ:ದೊಳಗೆ ಸಂಗೀತಗಾರ ಹೆನ್ಡ್ರಿಕ್ ಮೈಕೇಲ್ ಕುಕ್ ಕುಳಿತು ಜೆಂಗರಿಗೆ ಹೇಳುತ್ತಿದ್ದ, "ಏ, ಮಸಿ ಮೆತ್ತುವ ಪೀಟರ್, ಕೇಳಿಲ್ಲಿ. ಇಬ್ಬರು ಸುವಿಖ್ಯಾತ ಲಾಯರುಗಳ ನೆರವಿರುವ ವಾನ್ ಡಾಂನಂತಹ ಪ್ರಸಿದ್ಧ ಪುರುಷನನ್ನೇ ಗವರ್ನರ್, ಬಂಧಿಸಬಲ್ಲ ನಾದರೆ, ನನ್ನ ನಿನ್ನಂತಹರ ಪಾಡೇನು? ಅವನಿಗೆ ಸಮ್ಮತವಿಲ್ಲದ ಮಾತನ್ನು ನಾವಾಡಿದರೆ ಕಾಸ್ಬಿ ನಮಗೇನುಬೇಕಾದರೂ ಮಾಡಬಲ್ಲ! ಹಣ ಕೊಟ್ಟು ಲಾಯರ ಬೆಂಬಲ ಪಡೆಯಲಾರದ ನಮ್ಮಂಥವರ ಗತಿಯೇನು?"

ಪತ್ರಿಕೆಯ ಸಶಕ್ತ ಕಿರಣಗಳು ೨೦ ಅಡಿಗಳೆತ್ತರದ ಬೂದು ಬಣ್ಣದ ಕೋಟೆ ಗೋಡೆಗಳನ್ನು ಭೇದಿಸುತ್ತಿದ್ದವು.

ತೇವವಿಲ್ಲದ ತನ್ನ ಭೋಜನ ಕೊಠಡಿಯ ಒಲೆಯೊಂದರ ಮುಂದೆ ಕುಳಿತು, ಕಾಸ್ಬಿ, ರೆಜಿಮೆಂಟಿನ ಅಧಿಕಾರಿಯೊಬ್ಬನೊಂದಿಗೆ ಡ್ರಾಫ್ಟ್ಸ್ ಆಡುತ್ತಿದ್ದ. ವಾನ್ ಡಾಂನ ಕಿರಿ ಹೊತ್ತಿಗೆ ಮೇಜಿನ ಮೇಲೆ, ದ್ರಾಕ್ಷಾರಸ ತುಂಬಿದ ಲೋಟದ ಪಕ್ಕದಲ್ಲಿತ್ತು. ಅವನ ಮಿಲಿಟರಿ ಕೋಟಿನ ಗುಂಡಿಗಳು ಬಿಗಿಯಾಗಿದ್ದು ಎರಡು ಕಡೆ ಬಿಚ್ಚಿದ್ದವು. ಬೇಸರ ಮುಖದ ಕೆಂಪು ಐರಿಷ್ ನಾಯಿ, ಅವನ ಮೊಣಕಾಲ ಬಳಿ ಮಲಗಿತ್ತು. ಹೊಳೆವ ಅದರ ಕೆಂಪು ತಲೆಯನ್ನು ಆಗೀಗ ಉಜ್ಜುತ್ತಿದ್ದ ಕಾಸ್ಬಿ. ಜನವರಿಯ ಆ ಸಂಜೆಯಲ್ಲಿ ಹಿಮ ಮೋಡಗಳು

ಕವಿದು ಕತ್ತಲೆ ಆವರಿಸಿದ್ದರಿಂದ, ಗವರ್ನರ್ ಸುತ್ತ ಹಚ್ಚಿಟ್ಟಿದ್ದ ಆರೇಳು ಮೇಣದ ಬತ್ತಿಗಳ ಕುಡಿಗಳು ಗಾಳಿಯಲ್ಲಿ ಕುಣಿಯುತ್ತಿದ್ದವು.

ಬಾಗಿಲ ಬಳಿಯ ಪಹರೆ ಸೈನಿಕ ಕೂಗಿದ, "ರಾಜ ಪ್ರತಿನಿಧಿ ಮಂಡಲದ ಮಾನ್ಯ ಜಾರ್ಜ್ ಕ್ಲಾರ್ಕ್, ಮಹಾಸ್ವಾಮಿಗಳನ್ನು ನೋಡಲು ಬಂದಿದ್ದಾರೆ."

"ಕಳಿಸು !" ಕಾಸ್ಬಿ ಸಂತೋಷದಿಂದ ನುಡಿದು, ಆಟದಿಂದ ತಲೆಯೆತ್ತಿ ನೋಡಿದ. "ಕೂಡಿ ಜಾರ್ಜ್, ಹಳೆ ಮಡೀರಾ ಸ್ವಲ್ಪ ತೆಗೆದುಕೊಳ್ಳಿ"

"ನಮಸ್ಕಾರ....ಆಗಲಿ" ಆಜಾನುಬಾಹುವೂ ಸ್ಥೂಲ ಶರೀರಿಯೂ ಆದ ಆ ಹಿರಿಯ ಕ್ಲಾರ್ಕ್ ಕುರ್ಚಿಯಲ್ಲಿ ಸುಖಾಸೀನನಾದ. ಅವನಿಗಿದ್ದಷ್ಟು ಭೂಮಿ ನ್ಯೂಯಾರ್ಕಿನಲ್ಲಿ ಮತ್ತಾರಿಗೂ ಇರಲಿಲ್ಲ.

"ಆ ! " ಎಂದಾಗ ಅವನ ಮುಖದ ಮೇಲೆ ಗಾಂಭೀರ್ಯ ಇನ್ನೂ ಹೆಚ್ಚಿತು. "ಹೊಸ ಕಿರಿಪುಸ್ತಕ ಆಗಲೇ ನಿಮ್ಮ ಬಳಿಗೆ ಬಂದಿದೆ. ಬಲು ಕೆಟ್ಟ ವ್ಯವಹಾರ"

ಕಾಸ್ಬಿಗೆ ವಿಸ್ಮಯವೆನಿಸಿತು. ಆ ಪುಟ್ಟ ಪುಸ್ತಕವನ್ನು ಕೈಗೆತ್ತಿಕೊಂಡು ಕಳಾಹೀನ ಕಣ್ಣುಗಳಿಂದ ದಿಟ್ಟಿಸಿದ. "ಓದಲು ಸಮಯವಿನ್ನೂ ದೊರೆತಿಲ್ಲ"ಎಂದ. ಓದಲು ಚೆನ್ನಾಗಿ ಬಾರದಿದ್ದರಿಂದಲೇ, ಕಾಸ್ಬಿ ಜೆಂಗರ್ ಮೇಲೆ ಇನ್ನೂ ಏನು ಕ್ರಮವನ್ನೂ ಕೈಗೊಂಡಿರಲಿಲ್ಲ. ಓದು ಬಾರದ್ದರಿಂದಲೇ ಪ್ರತಿ ಸೋಮವಾರ, 'ಜರ್ನಲ್' ತನ್ನನ್ನು ಪಾತಕಿ ಎಂದು ಕರೆಯುತ್ತಿದ್ದುದರ ರಹಸ್ಯವು ಅವನಿಗರ್ಥವಾಗಿರಲಿಲ್ಲ.

ಭೂಸ್ವಾಮಿ ವಿವರಿಸಿದ, "ಮಾರ್ಷನ ಕಥೆಯನ್ನೂ ಅವನು ಕುಡುಕ ನಾವಿಕರಿಂದ ಪತ್ರಕ್ಕೆ ಸಹಿ ಹಾಕಿಸಿದ ವಿವರವನ್ನೂ ಸಮಗ್ರವಾಗಿ ಈ ಪುಸ್ತಕದಲ್ಲಿ ಹೇಳಿಬಿಟ್ಟಿದ್ದಾನೆ, ವಾನ್ ಡಾಂ"

ಗವರ್ನರ್ ಕಾಸ್ಬಿಯ ಮುಖ ಕೆಂಚಾಯಿತು. "ಅವನಿಗದೆಲ್ಲ ಗೊತ್ತಾದದ್ದು ಹೇಗೋ ?"

ಕ್ಲಾರ್ಕ್ ಎಂದೂ ಉದ್ರೇಕಗೊಂಡವನಲ್ಲ. ಶಾಂತನಾಗಿಯೇ ಉತ್ತರಿಸಿದ, "ನ್ಯೂಯಾರ್ಕಿನಲ್ಲಿ, ಓದಬಲ್ಲವರೆಲ್ಲರ ಬಳಿಯೂ

ಈ ಪುಸ್ತಕವಿದೆ." ಜನ ಕೋಪೋದ್ರಿಕ್ತರಾಗಿ, ಅಲ್ಲಲ್ಲಿ ಗುಂಪು ಕೂಡಿ ಈ ವಿಷಯ ಚರ್ಚಿಸುತ್ತಿರುವ ಸಂಗತಿಯನ್ನೂ ತಿಳಿಸಿದ.

೧೭೩೯ ರಲ್ಲಿ ಗವರ್ನರ್ ಕಾರ್ನ್‌ಬರಿ ಜೈಲಿಗೆ ಹೋದದ್ದು ಕಾಸ್ಬಿಗೂ ತಿಳಿದಿತ್ತು. ೧೬೯೧ ರಲ್ಲಿ ಬಹಿರಂಗವಾಗಿ ಗಲ್ಲಿಗೇರಿಸಲ್ಪಟ್ಟ ಗವರ್ನರ್ ಲೈಸ್ಲರ್ ವಿರುದ್ಧ, ಜನರನ್ನು ಎತ್ತಿಕಟ್ಟಿದ ಪ್ರಮುಖ ನಾಯಕರಲ್ಲಿ ಹಟವಾದಿ ಡಚ್ ವಾನ್ ಡಾಂ ಒಬ್ಬ ಎಂಬುದೂ ಗೊತ್ತಿತ್ತು. ಕಾಸ್ಬಿ ಹೆದರಿಕೆಯಿಂದ ನಡುಗಿದ. ಕುರ್ಚಿಯ ತೋಳುಗಳನ್ನು ಮುಷ್ಟಿಗಳಲ್ಲಿ ಹಿಡಿದು, ಪಿಸುಮಾತು ಎನ್ನುವಷ್ಟು ಮೆಲ್ಲಗೆ ಕೇಳಿದ "ಅವರೇನು ಮಾಡಿಯಾರು ?"

"ನನಗೆ ಖಚಿತವಿಲ್ಲ" ಶ್ರೀಮಂತ ಪ್ರತಿನಿಧಿ ಕಾಸ್ಬಿಯ ಕಣ್ಣುಗಳನ್ನು ದಿಟ್ಟಿಸಿ ನುಡಿದ. "ಅವರು ತಮ್ಮ ಕ್ರಮ ಕೈಗೊಳ್ಳುವಂತೆ ಮಾಡಿ ನಂತರ ಅದನ್ನು ತಿಳಿದುಕೊಳ್ಳುವ ಇಚ್ಛೆ ನನ್ನದಲ್ಲ"

ಕಾಸ್ಬಿ ಕುರ್ಚಿಯಿಂದ ನೆಗೆದ ರಭಸಕ್ಕೆ ಮೇಜಿನ ಮೇಲಿದ್ದ ಮದ್ಯದ ಲೋಟವೂ, ಸೀಸೆಯೂ ನೆಲಕ್ಕುರುಳಿದವು. ಅಲ್ಲಿಂದಿಲ್ಲಿಗೆ ಹೆಜ್ಜೆ ಹಾಕುತ್ತ, ರೊಚ್ಚಿದ್ದು ಸಿಡಿಗುಟ್ಟಿದ ; ಶಾಪಹಾಕಿದ.

ಗವರ್ನರ್, ಉಸಿರಾಟವನ್ನು ತಹಬಂದಿಗೆ ತಂದುಕೊಳ್ಳಲು ಸ್ವಲ್ಪ ನಿಂತ. ಏದುತ್ತಿದ್ದ ಕ್ಲಾರ್ಕ್, ಆಗ ಶಾಂತವಾಗಿ ಹಿತನುಡಿಯಾಡಿದ. "ವಾನ್ ಡಾಂನನ್ನು ದಸ್ತಗಿರಿಮಾಡುವ, ಈ ಯೋಜನೆಯನ್ನು ನಾವು ಕೈಬಿಡಬಹುದು."

"೭ನೇ ತಾರೀಖಿನ ದಸ್ತಗಿರಿ ವಾರಂಟ್, ಈಗಾಗಲೇ ಷರೀಫನ ಕೈಗೆ ಹೋಗಿದೆ" ಕಾಸ್ಬಿ ರೊಯ್ಯನೆ ಒದರಿದ.

ಈ ಸುದ್ದಿ ಕೇಳಿದೊಡನೆಯೇ ಕ್ಲಾರ್ಕ್ ಸ್ವಲ್ಪ ತಳಮಳಗೊಂಡಂತಾದ. ಕಣ್ಣುಗಳನ್ನು ಅಗಲವಾಗಿ ಬಿಚ್ಚಿ, ತನ್ನ ಭಾರಿ ಶರೀರವನ್ನು ಕುರ್ಚಿಯಿಂದ ಮೇಲಕ್ಕೆತ್ತಿ, "ಈ ಸಂಜೆ ಷರೀಫನ್ನು ಕಂಡು ಮಾತನಾಡುತ್ತೇನೆ. ನಿಮ್ಮ ಪರ ಹೇಳುವುದೇನಾದರೂ ಇದೆಯೇನು ?" ಎಂದ.

"ಹೂಂ !" ಕಾಸ್ಬಿ ಅಬ್ಬರಿಸಿದ. ಸಿಟ್ಟಿನ ಆವೇಶದಲ್ಲಿ, ಅವನ

ಕುತ್ತಿಗೆಯ ನರಗಳು ಉಬ್ಬಿದವು. "ಆ ಅನಿಷ್ಟ ವಾರಂಟನ್ನು ಹರಿದು ಹಾಕು ಎಂದವನಿಗೆ ಹೇಳಿ. ನಾನು ಅದನ್ನು ಕೊಟ್ಟದ್ದೆ ಎಂಬ ಜ್ಞಾಪಕ ಅವನ ಮನಸ್ಸಿನಲ್ಲಿ ಉಳಿದರೂ, ಚರ್ಮಾ ಸುಲಿಸಿ ಬಿಟ್ಟೇನು! ಒಳ್ಳೇ ನರಕ ಹಿಂಸೆ! ನನ್ನ ರಕ್ಷಣೆಗಿರುವವರು ಬಾಯಿಲ್ಲದ ೨೦೦ ಮಂದಿ ಸೈನಿಕರು; ವಾನ್ ಡಾಂಗಾದರೋ ಮುದ್ರಣಾಲಯವಿದೆ!"

— —

# ಅಧ್ಯಾಯ ೧೮

## ಹೋರಾಟದ ಪತ್ರಿಕೆ

ಹೋರಾಟ ಆರಂಭವಾಗಿತ್ತು. ಎರಡು ಕಡೆಯವರೂ ತಾಳ್ಮೆಗೆಟ್ಟರು. "'ಮುಠ್ಠಾಳನಿಗಿಂತ ಸ್ವಲ್ಪ ಉತ್ತಮು' ಸಾದವನೊಬ್ಬನಿಂದ ನ್ಯೂಯಾರ್ಕಿನ ಆಡಳಿತ ನಡೆಯಬೇಕೇಕೆ ?" ಎಂದು ಜೆಂಗರನ 'ಜರ್ನಲ್' ಪ್ರಶ್ನಿಸಿತು. ಬರೀ ಒದರಾಟ ನಡೆಸಿದ್ದರಿಂದಲೇ ಬುದ್ಧಿವಂತಿಕೆಯ ಆಡಳಿತ ನಡೆಸುತ್ತಿರುವುದಾಗಿ ಇವನು ತಿಳಿದಿರುವಂತಿದೆ. "ಅವನಿಗೆ ಸ್ವರೂಪವೊಂದನ್ನು ಬಿಟ್ಟು ಮಾನವತೆಯ ಬೇರಾವ ಬಗೆಯ ಕುರುಹೂ ಇಲ್ಲ" ಎಂದೂ ಬರೆಯಿತು.

ಈ ಮಾತುಗಳನ್ನು ಲೋಹದ ಅಕ್ಷರಗಳಲ್ಲಿ ಜೋಡಿಸುವಾಗ, ಜೆಂಗರಿಗೆ 'ಮು-ಠ್ಠಾ-ಳ' ಎಂಬ ಶಬ್ದ, ಕೈಮೇಲೇ ಕುಳಿತಂತೆ, ಅದನ್ನು ತಾನು ಮುಟ್ಟುತ್ತಿರುವಂತೆ, ಅದು ಚಟಪಟಗುಟ್ಟುತ್ತಿರುವಂತೆ ಭಾಸವಾಯಿತು. ಮರುಕ್ಷಣದಲ್ಲೆ ನಗು ಬಂತು.

ನಗೆಗೆ ಕಾರಣವಾದ ತಮಾಷೆ ಏನೆಂಬುದನ್ನು ಅರಿವ ಕುತೂಹಲದಿಂದ ಕ್ಯಾಥರೀನ್, ಅವನ ಭುಜದ ಮೇಲಿಂದ ಬಾಗಿ ನೋಡಿದಳು. ನಗುವ ಬದಲು, ಮುಖ ಕೆದರಿತು. "ಇಂಥ ಕಟುಭಾಷೆಯನ್ನು ನಮ್ಮ ಬರೆಹಗಾರರು ಬಳಸಬಾರದು ಎಂದು ಕೆಲವೊಮ್ಮೆ ಯೋಚಿಸುತ್ತೇನೆ." ಆಕೆಯ ಧ್ವನಿಯಲ್ಲಿ ಗಾಭರಿಯಿತ್ತು. "ಇದನ್ನು ನೋಡಿದರೆ ಹೆದರಿಕೆಯಾಗುತ್ತದೆ."

"ಪ್ಲುಚ್ !" ಭುಜ ಹಾರಿಸಿದ ಜೆಂಗರ್. "ನಮಗೇನು ವಾಕ್ಸ್ವಾತಂತ್ರ್ಯವಿದೆಯೋ ? ಇಲ್ಲವೋ ? ನಮ್ಮ ಭಾವೋದ್ರೇಕಗಳನ್ನು ಬಚ್ಚಿಟ್ಟು, ಸದಾ ವಿನಯವಾಗಿಯೇ ಇರಬೇಕೇಕೆ ? ನಮ್ಮನ್ನಾಳುವ ಆ ಕೆಂಪಂಗಿ ಕೋತಿಯನ್ನು ಕುರಿತ ನಮ್ಮ ಭಾವನೆಗಳು

ಎಷ್ಟು ಉತ್ಕಟ ಎಂಬುದನ್ನು ಜನಕ್ಕೆ ತಿಳಿಸಿಯೇ ತಿಳಿಸುತ್ತೇನೆ."

ಗೆಜೆಟ್ ಪತ್ರಿಕೆಯಲ್ಲಿ ಕಟ್ಟಕಡೆಗೆ ಉತ್ತರಗಳು ಬರತೊಡಗಿದವು. ಜೆಂಗರ್ ಮತ್ತು ಅವನ ಪತ್ರಿಕೆ 'ಜರ್ನಲ್' ಗಳ ಹೆಸರುಗಳನ್ನು, ನ್ಯಾಯಮೂರ್ತಿ ಹ್ಯಾರಿಸ್ನ, ತನ್ನ ಲೇಖನಗಳಲ್ಲಿ ನಮೂದಿಸತೊಡಗಿದ. ಬೇಸಿಗೆಯ ಸಂಜೆಯಲ್ಲಿ ಬಾಗಿಲ ಮೆಟ್ಟಲುಗಳ ಮೇಲೆ ಕುಳಿತು,ವೃದ್ಧ ಬ್ರಾಡ್‌ಫರ್ಡ್‌ನ ಪತ್ರಿಕೆ ಓದುತ್ತ,ಜೆಂಗರ್ ಮುಗುಳ್ನಗೆ ಬೀರಿದ. ಈ ಪರಿಸ್ಥಿತಿ ಹೆಚ್ಚು ಅಪಾಯಕರವಾಗಬಹುದೆನಿಸಿದರೂ,ಮೌನದೊಡನೆ ಸೆಣಸುವುದಕ್ಕಿಂತ ಉತ್ತಮ, ಎಂದುಕೊಂಡ.

ಸಾಕಷ್ಟು ಪ್ರಭಾವ ಬೀರುವ ಸತ್ವ ತನ್ನ ಉತ್ತರಗಳಲ್ಲಿ ಇಲ್ಲವೆಂಬುದನ್ನು ಕಂಡುಕೊಂಡ ಹ್ಯಾರಿಸ್ನ, ಬೇಗನೆ ಪರಿಣಾಮಕಾರಿಯಾಗಬಲ್ಲ ಪ್ರತ್ಯಕ್ಷ ಕ್ರಮಕ್ಕಿಳಿದ.

ಇಡೀ ಅಲೆಕ್ಸಾಂಡರ್ ಕುಟುಂಬಕ್ಕೇ ಬೆದರಿಕೆಹಾಕುವ ಸಹಿಯಿಲ್ಲದ ಪತ್ರವೊಂದನ್ನು ಬರೆದ. ಜೆಂಗರ್ ಧೈರ್ಯವಾಗಿ ಅದನ್ನು ಅಕ್ಷರ, ಅಕ್ಷರವಾಗಿ ಪ್ರಕಟಿಸಿ, ಅದರ ಜೊತೆಯಲ್ಲೇ, ಆ ಬರಹ ಯಾರದೆಂಬುದನ್ನು, ಬಲ್ಲವರ ಸಾಕ್ಷ್ಯಪ್ರಮಾಣಗಳೊಡನೆ ಪ್ರಕಟಿಸಿದ. ಅಂತೇ ಅಲೆಕ್ಸಾಂಡರ್ ಕುಟುಂಬಕ್ಕೆ ತೊಂದರೆ ಮಾಡುವ ಮುಂದಿನ ಯೋಜನೆಯನ್ನು, ಹ್ಯಾರಿಸನ್ ಕೈ ಬಿಡಬೇಕಾಯಿತು.

ಜೆಂಗರ್, ಮಸಿ ಮೆತ್ತಿದ ತನ್ನ ಮುದ್ರಣ ಯಂತ್ರವನ್ನು ತಟ್ಟಿದ. "ಈ ಯಂತ್ರ ಇಬ್ಬರು ಪ್ರಮುಖರ ಜೀವ ಉಳಿಸಿದೆ. ಮುಂದಿನ್ನಾರ ಸರದಿಯೋ ?"

'ಜರ್ನಲ್' ಸತ್ಯಾಂಶಗಳನ್ನೇ ಪ್ರಕಟಿಸುತ್ತಿತ್ತು. ಯಂತ್ರದ ಹಿಡಿಯನ್ನು ಬಲವಾಗಿ ಅದುಮಿ, ಶಕ್ತಿ ಪೂರ್ಣವಾದ, ಬಾಯಿ ಕಟ್ಟುವ ವಾಕ್ಯಗಳನ್ನು ಹೊರತರುತ್ತಿದ್ದ. ಜ್ಯೂರಿಗಳಿಲ್ಲದೆ ಕೆಲಸ ಮಾಡಬೇಕಾಗಿದ್ದ ಕಾಸ್ಬಿಯ ವಿಶೇಷ ಕೋರ್ಟು, ಅಕ್ರಮವಾದುದೆಂಬುದಕ್ಕೆ ಪತ್ರಿಕೆ ಪ್ರಬಲ ಕಾರಣಗಳನ್ನು ನೀಡಿತು.

'ಗೆಜೆಟ್' ಮೂಲಕ ಅದಕ್ಕುತ್ತರ ಕೊಡಲು. ಹ್ಯಾರಿಸನ್‌ಗೆ

ಸಾಧ್ಯವಾಗದೆ ಹೋದದ್ದರಿಂದ, ಆ ವಿಶೇಷ ಕೋರ್ಟು ಒಂದೇ ಒಂದು ವ್ಯವಹಾರದ ವಿಚಾರಣೆಯನ್ನೂ ನಡೆಸಲಿಲ್ಲ. ಜೆಂಗರನ ಪತ್ರಿಕೆ ಇರುವವರೆಗೂ ಆ ಕೋರ್ಟಿನ ಉಪಯೋಗ ಪಡೆವ ಧೈರ್ಯ ಕಾಸ್ಬಿಗೆ ಉಂಟಾಗಲಿಲ್ಲ.

ಜೆಂಗರ್ ಸಂತೋಷ ಚಿತ್ತನಾಗಿದ್ದ. ಸಂಜೆ ತೋಟದಲ್ಲಿ, ಅವನ ಭಾವ ನಿಕ್ ಸಿಜ್ ನುಡಿದ. "ಆ ಕೋರ್ಟು ಕೆಲಸ ಮಾಡದಂತೆ ಮಾಡುವ ಮೂಲಕ, ಎಷ್ಟು ಜನರನ್ನು ಉಳಿಸಿದಿಯಾ ಎಂಬುದನ್ನು ಹೇಳಲು ಸಾಧ್ಯವೇ ಇಲ್ಲ."

ವಿರುದ್ಧ ಪತ್ರಿಕೆಯ ಸಂಪಾದಕನನ್ನು ಕುರಿತ ಲೇಖನಗಳ ಮೊಳೆ ಜೋಡಿಸುವಾಗಲಂತೂ, ಜೆಂಗರಿಗೆ ವಿಶೇಷ ಸಂತಸ. ಸುಳ್ಳು ಆಪಾದನೆ ಹೊರಿಸಿ, ಒಂಬತ್ತು ವಾರಗಳ ಕಾಲ ಒಬ್ಬನನ್ನು ಜೈಲಿನಲ್ಲಿರಿಸಿದನೆಂದು ನ್ಯಾಯಮೂರ್ತಿ ಹ್ಯಾರಿಸನ್ನನ್ನೇ ತಪ್ಪಿಗೀಡು ಮಾಡಿ, ಶ್ರೇಷ್ಠ ಜ್ಯೂರಿಮಂಡಲ ಅಭಿಮತವಿತ್ತಿದ್ದುದನ್ನು, ಆ ಲೇಖನ ವಿವರಿಸಿತ್ತು. (ಆ ಮನುಷ್ಯ ಹ್ಯಾರಿಸನ್ನನ ಹಳೆಯ ಮಿತ್ರ ಹಾಗೂ ಪಾಲುಗಾರ ನ್ಯಾಯವಾದಿಯಾಗಿದ್ದವನು. ಅವನೊಡನೆ ಹ್ಯಾರಿಸನ್ ಜಗಳವಾಡಿದ್ದ) ಕಾನೂನಿನ ರೀತ್ಯ, ಈ ತಪ್ಪಿಗಾಗಿ ಹ್ಯಾರಿಸನ್ ನ್ಯಾಯ ವಿಚಾರಣೆಗೆ ಒಳಪಡಬೇಕಿತ್ತು.

ಆದರೆ ಗವರ್ನರ್ ಕಾಸ್ಬಿ ಈ ತೀರ್ಪಿನ ಮೇಲೆ ತನ್ನ ಕೈಯಿಟ್ಟ. ಕಾನೂನನ್ನೂ,ಶ್ರೇಷ್ಠ ಜ್ಯೂರಿಮಂಡಲವನ್ನೂ ಉಲ್ಲಂಘಿಸಿ, ತೀರ್ಪಿನ ದಾಖಲೆಯನ್ನು ಹರಿದು ಹಾಕಿದ; 'ಗೆಜೆಟ್' ಪತ್ರಿಕೆಯ ಸಂಪಾದಕ ನಾಗಿ ಮುಂದುವರಿಯಲು ಹ್ಯಾರಿಸನ್ನಿಗೆ ಅವಕಾಶಮಾಡಿಕೊಟ್ಟ.

ಆ ಪ್ರಸಂಗವನ್ನು ಕುರಿತು ಜೆಂಗರೇ ಒಂದು ಲೇಖನ ಬರೆದ:

"ಆಪಾದನೆಗೆ ಬೆಲೆಯೇನು ? ಸ್ವೇಚ್ಛಾಧಿಕಾರಿ ಕೊಬ್ಬಿದ ಗೂಳಿಗೆ ಇನ್ನಷ್ಟು ಹುಲ್ಲು ಹಾಕಿದ್ದಾನೆ. ಅಧಿಕಾರದಲ್ಲಿದ್ದವನೊಬ್ಬ ಇಟ್ಟಿಗೆಯಿಂದ ನಿಮ್ಮ ತಲೆ ಒಡೆದನೆನ್ನೋಣ. ವಿಧವೆ ಪತ್ನಿ, ಅವನನ್ನು ವಿಚಾರಣೆಗೆ ಒಳಪಡಿಸಬೇಕೆಂದು ಶ್ರೇಷ್ಠ ಜ್ಯೂರಿ ಮಂಡಲ ವನ್ನೂ ಕೇಳುತ್ತಾಳೆ. ಆದಕ್ಕೆಷ್ಟು ಬೆಲೆ ದೊರಕುತ್ತದೆ ಎಂಬುದನ್ನು

ಯೋಚಿಸಿನೋಡಿ. ಆ ದೊಡ್ಡ ಮನುಷ್ಯ ಸ್ವೇಚ್ಛಾಚಾರವನ್ನು ಸಂತತವಾಗಿ ಮುಂದುವರಿಸಬಹುದಲ್ಲವೇ ?"

ಅಪರಿಚಿತನೊಬ್ಬನನ್ನು ವೆಸ್ಟ್ ಚೆಸ್ಟರ್ ಷರೀಫನಾಗಿ ಸರಕಾರ ನೇಮಿಸಿದೆ; ಅವನು ನಿರಪರಾಧಿಗಳನ್ನು ಬಂಧಿಸುತ್ತಿದ್ದಾನೆ – ಎಂದೂ 'ಜರ್ನಲ್'ಬರೆಯಿತು. ಈ ವಿಷಯವನ್ನು ಅಚ್ಚು ಹಾಕುವಾಗ ಜೆಂಗರ್ ವೆಸ್ಟ್ ಚೆಸ್ಟರ್ ಚುನಾವಣೆಗೆ ಬಂದಿದ್ದ ಷರೀಫನನ್ನು ಜ್ಞಾಪಿಸಿಕೊಂಡ.

ಅಕೃತ್ಯ ಪರಂಪರೆಗಳ ಪಟ್ಟಿಯನ್ನೇ 'ಜರ್ನಲ್' ಪ್ರಕಟಿಸಿ, ಕಾಸ್ಬಿ ಇಂಗ್ಲೆಂಡಿಗೆ ಮರಳಬೇಕೆಂದು ಒತ್ತಾಯಪಡಿಸಿತು. ಅವನು ಗವರ್ನ್ನಾಗಿರುವವರೆಗೆ ಜನಗಳ ವಿತ್ತ, ಜೀವಗಳಿಗೆ ಅಪಾಯ ತಪ್ಪಿದ್ದಲ್ಲ; ಎಂದೂ ಲೇಖಕರುಗಳು ಸಾರಿದರು.

ಈ ಕಟು ಟೀಕೆಗಳಿಗೆ ಉತ್ತರ ಕೊಡಲಾರದೆ, ಅವೆಲ್ಲ ಸತ್ಯವಾದ್ದರಿಂದ, ನೋವು ಇನ್ನಷ್ಟು ಹೆಚ್ಚಿ, ಹ್ಯಾರಿಸನ್ ಮತ್ತೂ ಧೃತಿಗೆಟ್ಟ ಕ್ರಮಗಳಿಗೆ ಕೈ ಹಾಕಿದ.

ಶನಿವಾರ ಸಂಜೆ ಜೆಂಗರ್ ತನ್ನ ಕೆಲಸಗಾರನ ಮತ್ತು ಕುಟುಂಬದವರ ಸಹಾಯದಿಂದ, 'ಜರ್ನಲ್'ನ ಸಾಕಷ್ಟು ಪ್ರತಿಗಳಿಗಾಗಿ ಬಹಳ ಹೊತ್ತಿನ ತನಕ ತನ್ನ ಹಳೆಯ ಕಿರುಗುಟ್ಟುವ ಮುದ್ರಣಯಂತ್ರವನ್ನು ನಡೆಸುತ್ತಿದ್ದ. ತಲೆ ಮೇಲ್ಗಡೆಯ ತಂತಿಗಳ ಮೇಲೆ ಮುದ್ರಿತ ಹಾಳೆಗಳನ್ನು ಪೈಟರ್ ಅಗಸರ ಬಟ್ಟೆಗಳಂತೆ ಒಣ ಹಾಕುತ್ತಿದ್ದ. ಮೊಳೆ ಜೋಡಿಸಲು ಜಾನ್ ಕುರ್ಚಿಯ ಮೇಲೆ ನಿಂತಿದ್ದ. ಕ್ಯಾಥರೀನ್ ಮಗುವಿನ ತೊಟ್ಟಿಲು ತೂಗುತ್ತ ಕರಡು ತಿದ್ದುತ್ತಿದ್ದಳು.

ಮರು ಬೆಳಿಗ್ಗೆ ಚರ್ಚಿನಲ್ಲಿ, ಜೆಂಗರ್ ವಾದ್ಯದ ಆಸನವನ್ನೇರುತ್ತಿದ್ದಾಗ, ಡಚ್ ಬಂದರು ಹಮಾಲಿಯೊಬ್ಬ ಅವನ ಕಿವಿಯಲ್ಲಿ ಪಿಸುಗುಟ್ಟಿದ: ಕಳೆದ ರಾತ್ರೆ ಮುದ್ರಣ ಸಾಗಿದ್ದಾಗ ಹ್ಯಾರಿಸನ್ ತನ್ನಿಬ್ಬರು ಮಿತ್ರರೊಡನೆ, ನೀರಿನ ತಡಿಯ ಹೋಟೆಲೊಂದರಲ್ಲಿ ಮದ್ಯಪಾನ ಮಾಡುತ್ತಿದ್ದ ನಾವಿಕರು, ಬಂದರು ಹಮಾಲಿಗಳು ಮತ್ತು ಹಾಯಿಪಟ ಮಾಡುವವರ ಬಳಿ ಹೋಗಿ, ಜೆಂಗರನ ಮುದ್ರಣಾಲಯಕ್ಕೆ ಬೆಂಕಿ ಇಟ್ಟು ಸುಡುವಂತೆ ಆಜ್ಞಾಪಿಸಿದ. ಹ್ಯಾರಿಸನ್ ಬಹಳ

ಮಾತನಾಡಿದ, ಲಂಚದ ಆಸೆ ತೋರಿಸಿದ. ಆದರೆ ಆ ಜನ ಅವನ ಆಜ್ಞೆಯನ್ನು ಪಾಲಿಸಲು ನಿರಾಕರಿಸಿದರು, ಎಂದೂ ಅವನು ತಿಳಿಸಿದ.

ಜೆಂಗರ್ ಉಸಿರೆಳೆದುಕೊಂಡು, ಏರಿದ ಕೋಪವನ್ನು ವಾದ್ಯದ ಮೇಲೆ ತೋರಿಸಿದಾಗ, ಜನ ಎಚ್ಚೆತ್ತು ಕುಳಿತರು.

ಮರುವಾರ ಆ ಕತೆಯನ್ನೂ ಮುದ್ರಿಸಿದ. ಮತ್ತೊಂದು ಅಸಹ್ಯ ಪ್ರಸಂಗ ಬಯಲಾಯಿತು. ಗವರ್ನರೂ ಅವರ ಬೆಂಬಲಿಗರೂ ಒಡ್ಡುತ್ತಿದ್ದ ಪ್ರತಿಯೊಂದು ಬಲೆಯೂ, ಅವರಿಗೇ ಮುಳುವಾಗುತ್ತಿದ್ದುದಕ್ಕೆ ಇದ್ದ ಕಾರಣ ಒಂದೇ: ಜೆಂಗರ್ ಆ ಕತೆಗಳನ್ನೆಲ್ಲ ಮುದ್ರಿಸುತ್ತಿದ್ದುದು.

ವ್ಯವಹಾರ ಹೆಚ್ಚಿತ್ತು. ಕುಟುಂಬ ಕೂಡ – ಆರು ಮಕ್ಕಳಾಗಿ– ಬೆಳೆದಿತ್ತು. ಅದರಿಂದ ಸ್ಥಳ ಸಂಕೋಚವಾಗಿ, ಮುದ್ರಣಾಲಯವನ್ನು ಮೇ ೧ ನೇ ತಾರೀಖು ಜೆಂಗರ್ ಸ್ಥಳಾಂತರಿಸಿದ.

ಅವನೂ, ತಮ್ಮ ಜಾನ್ ಮತ್ತು ಕೆಲಸಗಾರ ಕೋಚುಪಾಚಾಗಿದ್ದ ಮುದ್ರಣ ಯಂತ್ರವನ್ನು ಹೊಸಮಳಿಗೆಯಲ್ಲಿ ನೆಲೆಗೊಳಿಸಿ, ಅದರ ಬಿಗಿಪಟ್ಟಿಯನ್ನು ತೊಲೆಗೆ ಕಟ್ಟುತ್ತಿದ್ದರು. ಕ್ಯಾಥರೀನ್, ಅವಳ ತಂಗಿ ಮೇರಿ ಪಾತ್ರೆ ಪರಟೆಗಳನ್ನು ಹಿಂಬದಿಯ ಅಡುಗೆ ಕೊಠಡಿಗೆ ಸಾಗಿಸುತ್ತಿದ್ದರು. ಹಾಸಿಗೆಗಳನ್ನು ಮಹಡಿಗೆ ಹೊತ್ತು ತಮ್ಮ ದೊಡ್ಡ ಕುಟುಂಬ ವಾಸಿಸಲಿದ್ದ ಛಾವಣಿ ಕೆಳಗಿನ ಚಿಕ್ಕ ಕೊಠಡಿಗಳಿಗೆ, ಸಂಸಾರ ಗೃಹದ ಸ್ವರೂಪ ನೀಡಲು ಯತ್ನಿಸುತ್ತಿದ್ದರು. ಕೆಲಸ ನಿಲ್ಲಿಸಿ ಕ್ಯಾಥರೀನ್ ಕಿಟಕಿಯೊಂದರ ಮೂಲಕ ಹೊರಕ್ಕೆ ತಲೆ ಹಾಕಿದಳು. ಬ್ರಾಡ್ ಬೀದಿಯ ಮಧ್ಯೆ ಹರಿಯುತ್ತಿದ್ದ ಕಾಲುವೆಗೆ ಕಟ್ಟಿದ ಸೇತುವೆ, ಎದುರಿಗೆ ಕಂಡು ಬಂತು.

ಬೀದಿಯಾಚೆ ಇದ್ದ ಅಲೆಕ್ಸಾಂಡರ್ ದಂಪತಿಗಳ ಭವ್ಯ ಭವನ, ತೋಟಗಳೊಳಕ್ಕೂ ಕಣ್ಣು ಹಾಯಿಸಬಹುದಿತ್ತು. ತನ್ನ ಮನೆ, ಅಂಗಡಿ, ದಾಸ್ತಾನು ಮಳಿಗೆ, ಗಂಡನ ನ್ಯಾಯವಾದಿ ಕಛೇರಿ, ನೆರೆಯವರ ಮನೆಗಳು ಇವೆಲ್ಲದರ ಮುಂದೆ ಹಾದು ಹೋಗುವಂತೆ, ಕಾಲು ದಾರಿಯೊಂದನ್ನು ಸತಿ ಅಲೆಕ್ಸಾಂಡರ್ ನಿರ್ಮಿಸಿದ್ದಳು.

ಹೊಸಬರು ನ್ಯೂಯಾರ್ಕಿಗೆ ಬಂದಾಗ, ಊರಿನವರು ಅಲೆಕ್ಸಾಂಡರನ ಕಾಲುಹಾದಿಯನ್ನು ತೋರಿಸುತ್ತಿದ್ದರು. ಅಂಥದೊಂದನ್ನು ಹಿಂದೆಂದೂ ಕಾಣದ ಅವರು, ಆಕೆಯೇ ಅದರ ನಿರ್ಮಾಪಕಿ ಎಂದೂ ಹೇಳುತ್ತಿದ್ದರು.

ಕತ್ತು ತಿರುಗಿಸಿದಾಗ ಶ್ರೇಷ್ಠ ನ್ಯಾಯಾಧೀಶನ ತಂದೆ ಸ್ಟೀಫನ್ ಡಿಲಾನ್ಸೆ ಕಟ್ಟಿದ ನಾಲ್ಕಂತಸ್ತಿನ ಇಟ್ಟಿಗೆಯ ಮಹಲು ಪಕ್ಕದ ಮನೆಯಂತೆ ಕಾಣಿಸಿತು. ಛಾವಣಿಯ ಮೇಲೆ ವಿಸ್ತಾರ ಪ್ರಾಂಗಣ. (ಈ ಕಟ್ಟಡಕ್ಕೆ ಅನಂತರ ಫ್ರಾನ್ಸಸ್ ಹೋಟೆಲೆಂಬ ಹೆಸರು ಬಂತು. ವಾಷಿಂಗ್‌ಟನ್ ತನ್ನ ಅಧಿಕಾರಿಗಳನ್ನು ಬೀಳ್ಕೊಟ್ಟ ಸಮಾರಂಭ ನಡೆದದ್ದೂ ಇಲ್ಲೆ. ಈ ಕಟ್ಟಡ ಈಗಲೂ ಇದೆ.) ದೂರದ ಬಂದರಿನಲ್ಲಿ ನೌಕೆಗಳು ಕಂಡುಬಂದವು. ಎದುರು ದಿಕ್ಕಿನಲ್ಲಿ ದೊಡ್ಡ ನಗರ ಭವನ; ಇಟ್ಟಿಗೆಯ ಈ ಕಟ್ಟಡವನ್ನು ರಸ್ತೆಗಡ್ಡಲಾಗಿ ಕಟ್ಟಿದ್ದರು. ಅದು ಬೆಳಗಿನ ಬಿಸಿಲಿನಲ್ಲಿ ಶಾಂತವಾಗಿ ನಿದ್ದೆ ಮಾಡುತ್ತಿರುವಂತೆ ಕಾಣುತ್ತಿತ್ತು. ಕೆಳ ಅಂತಸ್ತಿನಲ್ಲಿ ಮುದ್ರಣ ಯಂತ್ರದಿಂದ ನಡೆಯುತ್ತಿದ್ದ ಘೋರ ಸಂಗ್ರಾಮಕ್ಕೆ ವಿರುದ್ಧವಾಗಿ ವೈಭವ ಪೂರ್ಣವಾದ ಈ ಪ್ರಶಾಂತ ಹೊರ ಆವರಣ ವಿಚಿತ್ರವಾಗಿ ತೋರುತ್ತಿತ್ತು.

— —

# ಅಧ್ಯಾಯ ೧೯

## ಚುನಾವಣೆಯ ಬಿರುಸು

ಸೆಪ್ಟೆಂಬರ್ ತಿಂಗಳ ನಗರ ಚುನಾವಣೆ ಕಾಲದಲ್ಲಿ ಇದ್ದಕ್ಕಿದ್ದಂತೆ ಸಂಗ್ರಾಮದ ಉರಿ ಕೆದರಿತು. ವಿಷಮ ಪರಿಸ್ಥಿತಿ ಪ್ರಾಪ್ತವಾಗಿತ್ತು. ನಗರ ಸರಕಾರವೆಂದರೆ, ಗವರ್ನರ್ ನೇಮಿತ ಮೇಯರ್, ರಿಕಾರ್ಡರ್, ಷರೀಫ್ ಮತ್ತು (ವಾರ್ಡಿಗಿಬ್ಬರಂತೆ) ಓಟರುಗಳಿಂದ ಚುನಾಯಿತರಾದ ೧೪ ಮಂದಿ ಆಲ್ಡರ್‌ಮನ್‌ಗಳು.

ನಗರದಲ್ಲಿ ಸ್ವಂತ ಮನೆಯಿಲ್ಲದಿದ್ದರೂ, ಉದ್ಯಮಿ ಅಥವಾ ಕುಶಲ ಕೆಲಸಗಾರನಾಗಿದ್ದರೆ, ಅಂಥವನು ಓಟು ಮಾಡಬಹುದಿತ್ತು. ಉದಾಹರಣೆಗೆ, ಜೆಂಗರ್‌ಗೆ, ಹೋಟೆಲು ನಡೆಸುತ್ತಿದ್ದ ಅವನ ಭಾವ ಫ್ರೆಡ್ ಬೆಕ್ಕರ್‌ಗೆ ಓಟಿನ ಹಕ್ಕಿತ್ತು. ಆದರೆ ಕೇವಲ ಗಾಡಿ ಹೊಡೆಯುವಂಥವನಿಗೆ ಓಟಿನ ಹಕ್ಕಿರಲಿಲ್ಲ.

ವರ್ಷ, ವರ್ಷವೂ ಮತ್ತೆ ಮತ್ತೆ ಚುನಾಯಿತರಾಗುತ್ತಿದ್ದ ೧೩ ಮಂದಿ ಆಲ್ಡರ್‌ಮನ್‌ಗಳು, ಗವರ್ನರ್‌ರ ಬೆಂಬಲಿಗರೆಂದು ಸುವಿದಿತರಾಗಿದ್ದರು. ಅವರುಗಳ ಮೇಲೆ ಅನೇಕ ಆಪಾದನೆಗಳಿದ್ದವು. ಕಟ್ಟಡಗಳ, ರಸ್ತೆಗಳ ಕಂಟ್ರಾಕ್ಟುಗಳನ್ನು ಆಲ್ಡರ್‌ಮನ್‌ಗಳು ತಮಗೇ ಕೊಟ್ಟುಕೊಳ್ಳುತ್ತಿದ್ದರೆಂದು ಶ್ರೀಮಂತರು ಆಕ್ಷೇಪಿಸುತ್ತಿದ್ದರು. ಮಜೂರಿಯಿಲ್ಲದೆ ಗುಡ್ಡ ಅಗೆದು ರಸ್ತೆ ಮಾಡುವಂತೆ ತಮ್ಮನ್ನು ಒತ್ತಾಯಪಡಿಸುತ್ತಾರೆಂದು ಬಡವರು ದೂರುತ್ತಿದ್ದರು. ನಗರದಲ್ಲಿ ಭಿಕ್ಷುಕರು ತುಂಬಿದ್ದರೂ, ಅವರಿಗಾಗಿ ಆಲ್ಡರ್‌ಮನ್‌ಗಳು ಏನೂ ವ್ಯವಸ್ಥೆ ಮಾಡಿರಲಿಲ್ಲ.

ನ್ಯಾಯಮೂರ್ತಿ ಹ್ಯಾರಿಸನ್ನನ್ನು ಶಿಕ್ಷಿಸದೆ ಬಿಟ್ಟದ್ದು ಇದೆಲ್ಲವನ್ನು ಮೀರಿದ ಅವರ ದೊಡ್ಡ ಅಪರಾಧ.

ಈ ಸಾರೆ ಪಾಪ್ಯುಲರ್ ಪಾರ್ಟಿ, ಅವರೆಲ್ಲರ ವಿರುದ್ಧ ತನ್ನ ಉಮೇದುವಾರರುಗಳನ್ನು ನಿಲ್ಲಿಸಿ ಸವಾಲು ಹಾಕಿತ್ತು. ಜೆಂಗರ್ ಕರಪತ್ರಗಳನ್ನು ಮುದ್ರಿಸಿದ, ಪಾಪ್ಯುಲರ್ ಪಾರ್ಟಿ ಅವನ್ನು ಹಂಚಿತು. ಆಲ್ಡರ್‌ಮನ್‌ಗಳನ್ನು ಕುರಿತು ಕೆಲಸಗಾರರು ಮಾತ ನಾಡಿದಂತೆ ತಮಾಷೆಯಾದ ಕರಪತ್ರವೊಂದನ್ನು ಅವನೇ ಬರೆದಿದ್ದ. ನಗರದ ಅರ್ಧಜನ ಅದನ್ನೋದಿ ನಕ್ಕರು. ಉತ್ಸಾಹಿತನಾಗಿ ರಾಜಕೀಯ ಗೀತವೊಂದನ್ನು ಬರೆದು ಮುದ್ರಿಸಿದ.

ಗವರ್ನರ್ ಕಾಸ್ಬಿ ಬಂದ ಎರಡು ವರ್ಷಗಳ ನಂತರ, ಸೆಪ್ಟೆಂಬರ್ ೩೦ರ ಸೋಮವಾರ ನಡೆದ ಚುನಾವಣೆ, ವೀಕ್ಷಿಸಿದವರನ್ನೆಲ್ಲ ಚಕಿತ ಗೊಳಿಸಿತು.

ಪತ್ರಿಕೆಯ ಮುದ್ರಣ ಮುಗಿದೊಡನೆ, ಜೆಂಗರ್ ಓಟು ಮಾಡಲು ತೆರಳಿದ.

ಓಟು ಕೊಡುವ ಕಡೆ, ಗವರ್ನರ್ ಪಕ್ಷದ ಮೂವರು ಬಹಿರಂಗ ವಾಗಿ ಬೀರು, ವ್ಹಿಸ್ಕಿಗಳನ್ನು ಹಂಚುತ್ತಿದ್ದರು. ಜೆಂಗರನ್ನು ಗುರುತಿಸದೆ, ಒಬ್ಬ, ಅವನ ಮುಂದೆ, ಒಂದು ಜಾಡಿ ಬೀರ್ ಹಿಡಿದು, "ನಮ್ಮ ಉಮೇದುವಾರರಿಗೇ ಓಟು ಮಾಡಿ. ಅದರಿಂದ ನಿಮಗೇನೂ ಚಿಂತೆಯಿರದು !", ಎಂದ.

ಜೆಂಗರ್ ಸುಮ್ಮನೆ ನಕ್ಕ.

ಅವನ ನೆರೆಯ ಕಮ್ಮಾರ ಒಂದು ಪೆಗ್ ವ್ಹಿಸ್ಕಿ ಸ್ವೀಕರಿಸಿ, "ನಿಮ್ಮ ಉಮೇದುವಾರರು ಬಹು ಒಳ್ಳೆಯವರು. ನನಗ್ಗೊತ್ತು !" ಎನ್ನುತ್ತ, ಮುಂದೆನುಗ್ಗಿ, ಗಟ್ಟಿಯಾಗಿ ಪಾಪ್ಯುಲರ್ ಪಾರ್ಟಿಯವರಿಗೆ ಅಭಿಮತ ಕೂಗಿದ.

ಇದರಿಂದ, ಒಂದು ಕಡೆ ನಗುವಿನ ಅಲೆಗಳೆದ್ದವು. ಇನ್ನೊಂದು ಕಡೆ ಶಪಿಸುವ ಮಾತುಗಳು ಕೇಳಿಬಂದವು.

ಮುಂದಿನ ವಾರ್ಡಿಗೆ ಜೆಂಗರ್ ಕಾಲಿಟ್ಟಾಗ, ಪಾಪ್ಯುಲರ್ ಪಾರ್ಟಿಯವರಿಗೆ ೩೫ ಓಟುಗಳೂ, ಗವರ್ನರ್ ಕಡೆಯವರಿಗೆ ೫ ಓಟುಗಳೂ ಬಂದಿದ್ದುದನ್ನು ಕಂಡ. ಓಟು ಮಾಡಬೇಕಾದವರು

ಇನ್ನೂ ಬಹಳ ಜನರಿದ್ದರೂ ಫಲಿತಾಂಶವೇನೆಂಬುದನ್ನು ಮನಗಂಡ.

ಸೋಲುತ್ತಿದ್ದ ಸ್ಪರ್ಧಿಗಳಲ್ಲಿ ಒಬ್ಬ ಸೊಗಸಾದ ಉಡುಪು ಧರಿಸಿದ ಜಾನ್ ಛೇಂಬರ್ ಎಂಬ ನ್ಯಾಯವಾದಿ. ಅವನು ಬಹಳ ವರ್ಷಗಳಿಂದ ಆಲ್ಡರ್‌ಮನ್ ಆಗಿದ್ದ. ಅವನೂ ಗವರ್ನರ್ ಬೆಂಬಲಿಗನೇ ಎಂಬ ಪ್ರತೀತಿಯಿದ್ದರೂ, ಅವನೇನೂ ಮೂರ್ಖನಲ್ಲ. ತನ್ನ ವಿರುದ್ಧ ಸ್ಪರ್ಧಿಗೆ ಅಧಿಕ ಸಂಖ್ಯೆಯಲ್ಲಿ ಮತಗಳು ಬಂದಾಗ, ಪ್ರತಿಕಕ್ಷಿಯ ಕೈಕುಲುಕಿ, ಅಭಿನಂದಿಸಿ, ಚುನಾವಣೆ ಮುಗಿಯಿತೆಂದು ಸಾರಿದ.

ಲೇಸ್ ಕಫ್, ಚಿನ್ನದ ಹಿಡಿ ಬೆತ್ತಗಳ ನ್ಯಾಯಮೂರ್ತಿ ಹ್ಯಾರಿಸನ್, ತನ್ನ ಐದಾರು ಮಿತ್ರರೊಡನೆ ಮತ ಸಲ್ಲಿಸಲು ದಕ್ಷಿಣ ವಾರ್ಡಿಗೆ ಬಂದ. ಅವನ ಮತದಾನವನ್ನು ನೋಡಬೇಕೆಂದಿದ್ದ ಜೆಂಗರ್, ಸರಸರನೆ ಹೆಜ್ಜೆ ಇಟ್ಟು ಸಕಾಲದಲ್ಲಿ ಅಲ್ಲಿಗೆ ಬಂದ. ಹ್ಯಾರಿಸನ್ ತನ್ನ ಹೆಸರು ಹೇಳಿದಾಗ, ಒಂದು ಕಡೆಯವರು ಹರ್ಷೋದ್ಗಾರ ಮಾಡಿದರು, ಇನ್ನೊಂದು ಕಡೆಯವರು ಬುಸುಗುಟ್ಟಿದರು. ಹ್ಯಾರಿಸನ್ನಿನ ದೃಷ್ಟಿಯಲ್ಲಿ ಈ ಚುನಾವಣೆ ಬಹುಮುಖ್ಯ. ಆಲ್ಡರ್‌ಮನ್‌ಗಳಲ್ಲಿ ಅರ್ಧ ಜನ ನಗರದ ಕೋರ್ಟುಗಳ ನ್ಯಾಯಾಧೀಶರಾಗುವವರು. ಅವರು ನ್ಯಾಯಮೂರ್ತಿ ಹ್ಯಾರಿಸನ್ನನ್ನು ಕೂಡ ವಿಚಾರಣೆಗೆ ಗುರಿಪಡಿಸಬಹುದು. ಈ ಸಂಗತಿ ಜೆಂಗರ್‌ಗೂ ಗೊತ್ತಿತ್ತು.

ಶ್ರೇಷ್ಠ ನ್ಯಾಯಮೂರ್ತಿ ಡಿಲಾನ್ಸೆ ಎಂದಿನಂತೆ ಸಿಟ್ಟಿನಿಂದ ಬಿಳುಚಿದ ಮುಖಮುದ್ರೆ ಹೊತ್ತು, ಗವರ್ನರ್ ಕಾಸ್ಬಿಯ ದಳದ ೧೫ ಮಂದಿ ಸೈನಿಕರ ಜೊತೆಯಲ್ಲಿ ಓಟು ಕೊಡಲು ಬಂದ. ಗುಂಪಿನ ಕಡೆಯಿಂದ ಪ್ರತಿಭಟನೆಯ ಕೂಗುಗಳು ಕೇಳಿ ಬಂದವು. ಸೈನಿಕರಿಗೆ ಓಟಿನ ಹಕ್ಕಿಲ್ಲವೆಂಬುದು ಜೆಂಗರ್‌ಗೂ ಗೊತ್ತಿತ್ತು. ಹಿಂದಿನ ರಾತ್ರೆ, ಅದೇ ವಾರ್ಡಿನಲ್ಲಿ ಆ ಸೈನಿಕರು ಮಲಗಿದ್ದರೆಂದೂ, ಅದರಿಂದ ಅವರಿಗೂ ವೋಟಿನ ಹಕ್ಕಿದೆಯೆಂದೂ, ಗವರ್ನರ್ ಪಕ್ಷದ ನಾಯಕ ಶ್ರೇಷ್ಠ ನ್ಯಾಯಮೂರ್ತಿ ಡಿಲಾನ್ಸೆ ಒತ್ತಾಯಪಡಿಸಿದ. ಗುಮಾಸ್ತೆ ಅದನ್ನು ಒಪ್ಪಿಕೊಂಡ.

ವಿಖ್ಯಾತನಾದ ಒಬ್ಬ ವರ್ತಕ, ಅವನು ಇನ್ನೊಂದು ವಾರ್ಡಿನವನೆಂಬುದು ಎಲ್ಲರಿಗೂ ತಿಳಿದಿದ್ದರೂ, ಮುಂದೆ ಬಂದು ಓಟು ಮಾಡಿದ.

ಈ ರೀತಿ ಮೋಸ ಮಾಡಿದರೂ, ಆ ವಾರ್ಡಿನಲ್ಲಿ ಗವರ್ನರ್ ಪಕ್ಷದ ಸ್ಪರ್ಧಿಯ ಓಟುಗಳ ಸಂಖ್ಯೆ ೪೫ನ್ನು ದಾಟಲಿಲ್ಲ. ಪಾಪ್ಯುಲರ್ ಪಾರ್ಟಿಯವರು ೪೯ ಓಟುಗಳನ್ನು ಪಡೆದಿದ್ದರು. ದಿನವೆಲ್ಲ ನಗರದಲ್ಲಿ ಹಾಡುವ–ಕೂಗುವ ಗದ್ದಲ ತುಂಬಿತ್ತು. ಕುಡಿದು ಮತ್ತರಾದ ಓಟರುಗಳು ಗುಂಪು ಗುಂಪಾಗಿ ಶಪಿಸುತ್ತ ಅಥವಾ ಜೆಂಗರನ ಗೀತವನ್ನು ಹಾಡುತ್ತ ಸಾಗುತ್ತಿದ್ದರು. ನಾಯಿಗಳು ಬೊಗಳಿದವು, ಕುದುರೆಗಳೆರಡು ಓಡಿದವು, ಗಾಬರಿಗೊಂಡ ದನದ ಒಂದು ಗುಂಪು ರಸ್ತೆಗಳಲ್ಲಿ ನುಗ್ಗಿತು. ಹೆಂಗಸರು ಮಕ್ಕಳಿಗಂತೂ ಮನೆಯಲ್ಲಿರಲು ಅದೊಂದು ಸುದಿನ. ಆದರೆ ಚುನಾವಣೆಯ ವೀಕ್ಷಣೆಯ ಆಸಕ್ತಿಯಿಂದ ಅವರೆಲ್ಲ ಹೊರಬಂದಿದ್ದರು.

ಜೆಂಗರ್ ಆ ಸಂಜೆ ಹೊತ್ತಾಗಿ ಮನೆಗೆ ಹೋದ. ಮೈ ಸೋತಿತ್ತು; ಮನಸ್ಸಿನಲ್ಲಿ ಉದ್ರೇಕವಿತ್ತು. ಈ ಸೋಲನ್ನು ಗವರ್ನರ್ ಹೇಗೆ ಎದುರಿಸಿಯಾನು ? ಎಂದು ಯೋಚಿಸತೊಡಗಿದ. ಹೇಡಿಯಂತೆ ಒಪ್ಪಿಕೊಳ್ಳುವನೋ ? ಅಥವಾ ಧೀರನಂತೆ ಹೋರಾಡುವನೋ ?

———

# ಅಧ್ಯಾಯ ೨೦

## ಪ್ರತಿದಾಳಿಯ ಆರಂಭ

ಹೊಸ ಆಲ್ಡರ್‌ಮನ್‌ಗಳು ರಸ್ತೆಯಲ್ಲಿ ಮೆರವಣಿಗೆ ಹೋಗುತ್ತಿದ್ದ ರೆಂದು ಜೆಂಗರ್ ಮಗ, ಜಾನ್ ಕೂಗಿದ. ಸ್ವಾಗತದ ಕೈಬೀಸಲು, ಚಕ್ಕಳದ ಏಪ್ರನ್ನಿನ ಒಂದೇ ಪಟ್ಟಿ ಕಟ್ಟಿಕೊಂಡವನು, ಹಾಗೇ ಬಾಗಿಲ ಬಳಿಗೆ ಧಾವಿಸಿದ.

ತಲೆಯ ಮೇಲೆ ಧರಿಸಿದ್ದ ಟೋಫನ್(ವಿಗ್)ಗಳ ಕೂದಲು ಅಕ್ಟೋಬರ್ ತಿಂಗಳ ಬಿಸಿಲಿನಲ್ಲಿ ಹೊಳೆಯುತ್ತಿತ್ತು. ಅವನನ್ನು ಕಂಡೊಡನೆ ಅವರಲ್ಲಿ ಬಹು ಮಂದಿ ಮುಗುಳ್ನಕ್ಕು ಕೈಬೀಸಿದರು.

ಅವರಲ್ಲಿ ಹನ್ನೆರಡು ಮಂದಿ ಹೊಸಬರು. ಒಬ್ಬನೇ ಒಬ್ಬ ಕಾಸ್ಬಿ ಬೆಂಬಲಿಗ; ೩೮–೩೭ ರ ಕೇವಲ ಒಂದೇ ಒಂದು ಓಟಿನಿಂದ ಜಯಗಳಿಸಿದ್ದ. ಇನ್ನೊಬ್ಬ ಸ್ಟೈವ್‌ಸ್ಯಾಂಡ್, ಗವರ್ನರ್ ಪಕ್ಷದವ ನಲ್ಲದ್ದರಿಂದ ಅವನ ವಿರುದ್ಧ ಯಾರೂ ನಿಂತಿರಲಿಲ್ಲ.

ಮೆರವಣಿಗೆ ಬಾಗಿಲ ಬಳಿ ಬಂದಾಗ ಒಬ್ಬ ಆಲ್ಡರ್‌ಮನ್ ನಿಂತು ಜೆಂಗರ್ ಕಿವಿಯಲ್ಲಿ ಪಿಸುಗುಟ್ಟಿದ: "ಇದೇ ತಾನೇ ಗವರ್ನರ್ ನಮಗೆ ಉಪದೇಶ ಮಾಡಿದ. ಅವನು ನಿನ್ನ ವಿಷಯವನ್ನೇ ಆಲೋಚಿಸು ತ್ತಿದ್ದಾನೆ."

ಮೆರವಣಿಗೆ ನಗರ ಭವನದ ಕಡೆಗೆ ಸಾಗಿತು.

"ಉಫ್....!" ಎಂದ ಜೆಂಗರ್. ಬಿಸಿಲೂ ತಂಪಾದಂತೆ ತೋರಿತು, ಬಾಗಿಲು ಮುಚ್ಚಿದ.

ಹೊಸ ಆಲ್ಡರ್‌ಮನ್‌ಗಳಿಗೆ ಗವರ್ನರ್ ಹೇಳಿದ್ದನ್ನು ಸೋಮ ವಾರದ 'ಗೆಜೆಟ್' ಪ್ರಕಟಿಸಿತು. ಸಂಜೆ, ಬೆಂಕಿಯ ಬೆಳಕಿನಲ್ಲಿ ಜೆಂಗರ್ ಅದನ್ನೋದಿದ. ಬಲು ಬಿರುಸಾದ ಭಾಷಣ.

"ನಿಮ್ಮ ಚುನಾವಣೆಗಳ ವಿಷಯವನ್ನು ಪ್ರಸ್ತಾಪಿಸಿರುವ ಈ

ನಗರದ ಪತ್ರಿಕೆಯೊಂದರ ಕಡೆ ನಿಮ್ಮ ಗಮನ ಸೆಳೆಯುತ್ತೇನೆ. 'ಗವರ್ನರರ ಹಿತದ ವಿರುದ್ಧ'ವಾಗಿ ಚುನಾವಣೆಗಳು ಫಲಿಸಿವೆ, ಎಂದು ಅದರಲ್ಲಿ ಉಲ್ಲೇಖಿಸಲಾಗಿದೆ" ಎಂದು ಕಾಸ್ಬಿ ಆರಂಭಿಸಿದ್ದ. ಅನಂತರ ಚುನಾವಣೆಗಳಲ್ಲಿ ತನಗೆ ಆಸಕ್ತಿಯಿರಲಿಲ್ಲವೆಂದು ಒತ್ತಿ ಒತ್ತಿ ಸಾರಿದ್ದ. ಆ ಪತ್ರಿಕೆಯ ಮುದ್ರಕರೂ, ಲೇಖಕರೂ ಸೂಕ್ತ ಶಿಕ್ಷೆಗೆ ಗುರಿಯಾಗ ಬೇಕೆಂದೂ ಕೇಳಿದ್ದ.

ಉತ್ಕಟ ಪರಿಸ್ಥಿತಿ ಇದೆಂದು ಜೆಂಗರ್‌ಗೆ ಭಾಸವಾಯಿತು. ಓದುಕೂಡ ಚೆನ್ನಾಗಿ ಬಾರದಿದ್ದರೂ ಗವರ್ನರ್ ಚುನಾವಣಾ ಫಲಿತಾಂಶ ವನ್ನು ಸರಿಯಾಗಿ ಅರ್ಥಮಾಡಿಕೊಂಡಿದ್ದ.

ಪತ್ರಿಕೆ ಹಿಡಿದು ಜೆಂಗರ್ ಚಿಂತಿಸುತ್ತಿದ್ದಾಗ, ಬಾಗಿಲು ಬಡಿದ ಸಪ್ಪಳ ಕೇಳಿ ಬಂತು. ಅವನ ಹೆಂಡತಿ ಮತ್ತು ಅವಳ ತಂಗಿ ಹೊಲಿಯುತ್ತಿದ್ದವರು, ಕತ್ತೆತ್ತಿ ನೋಡಿದರು. ಅವರ ಮುಖದಲ್ಲಿ ಗಾಭರಿ ಮುದ್ರೆಯೊತ್ತಿತ್ತು.

ಬಾಗಿಲು ತೆರೆದಾಗ, ೫ ಮಂದಿ ಆಲ್ಡರ್‌ಮನ್‌ಗಳ ಸಮಿತಿ ಯೊಂದನ್ನು ಕಂಡ. ಹೆಂಗಸರು ಎರಡು ಕುರ್ಚಿಗಳಮೇಲಿದ್ದ ಕಾಗದದ ಕಟ್ಟುಗಳನ್ನೂ ಅಕ್ಷರಗಳ ಮೊಳೆಗಳನ್ನೂ ತೆಗೆದು, ಶುಭ್ರ ಗೊಳಿಸುತ್ತಿದ್ದಾಗ, ಬಂದವರಲ್ಲೊಬ್ಬ ದಪ್ಪ ಹಸ್ತಪ್ರತಿಯೊಂದನ್ನು ಜೆಂಗರ್ ಕೈಗಿತ್ತ.

"ಇದು ನಗರ ಘೋಷಣೆಯ ಒಂದು ಪ್ರತಿ: ರಚನೆಯಾಗಿ ೪ ವರ್ಷ ಕಳೆದಿದ್ದರೂ ಮುದ್ರಣ ಮುಖ ಕಂಡಿಲ್ಲ. ನಗರದ ಆಡಳಿತ ಹೇಗೆ ನಡೆಯಬೇಕೆಂಬುದನ್ನು ತಿಳಿವ ಹಕ್ಕು ಜನತೆಗಿದೆ. ನಿನ್ನ ಅಭಿಪ್ರಾಯವೇನು ?"

ಜೆಂಗರ್‌ಗೆ ಶರೀರದೊಳಗೆ ಬೆಳಕು ಮಿಂಚಿದಂತಾಯಿತು. ತನ್ನನ್ನು ಶಿಕ್ಷಿಸಬೇಕೆಂದು ಗವರ್ನರ್ ಆಜ್ಞೆಮಾಡಿದ್ದ. ಅದರ ಬದಲು ಆಲ್ಡರ್‌ಮನ್‌ಗಳು ತನಗೊಂದು ಬಹುಮಾನ ತಂದಿದ್ದರು.

ನಗುಮುಖದಿಂದ ದರದ ವಿಷಯ ಚರ್ಚಿಸತೊಡಗಿದ.

ಕ್ಯಾಥರೀನ್ ಇನ್ನಷ್ಟು ಮೇಣದ ಬತ್ತಿಗಳನ್ನು ಹಚ್ಚಿದಳು.

ಬಂದವರಿಗೆ ಬೀರು ಹಂಚಿದಳು. ಅರ್ಧಗಂಟೆಯ ಮಾತುಕತೆಗಳ ಅನಂತರ ಜೆಂಗರ್ ಅವರೊಡನೆ ಕರಾರಿಗೆ ಸಹಿ ಹಾಕಿದ. ಅವನು ೭ ಪೌಂಡುಗಳನ್ನು ಸ್ವೀಕರಿಸಿ (ಅವನ ದೃಷ್ಟಿಯಲ್ಲಿ ಬಹು ದೊಡ್ಡ ಮೊತ್ತ) ನಗರ ಸಭೆಗೆ ಘೋಷಣೆಯ ಆರು ಮುದ್ರಿತ ಪ್ರತಿಗಳನ್ನು ಕೊಡಬೇಕು. ಉಳಿದ ಮುದ್ರಿತ ಪ್ರತಿಗಳನ್ನು ಅವನು ಮೂರು ಷಿಲಿಂಗಿಗೆ ಒಂದು ಪ್ರತಿಯಂತೆ ಮಾರಿಕೊಳ್ಳಬಹುದು. ಒಳ್ಳೆ ವ್ಯವಹಾರ ಎಂದುಕೊಂಡ.

'ಜರ್ನಲ್' ಮುದ್ರಣದಿಂದ ಬಿಡುವಾದಾಗಲೆಲ್ಲಾ 'ಘೋಷಣೆ'ಯ ಕೆಲಸವನ್ನು ಒಂದು ತಿಂಗಳಕಾಲ ನಿರ್ವಹಿಸಿದ.

ಗವರ್ನರ್ ಭಾಷಣದಲ್ಲಿದ್ದ ಸವಾಲನ್ನು ಅವನ ಪತ್ರಿಕೆ ಸ್ವೀಕರಿಸಿತು. ನಗರ ಚುನಾವಣೆಯಲ್ಲಿ ಗವರ್ನರಿಗೆ ಆಸಕ್ತಿಯಿರಲಿಲ್ಲವೆಂಬ ಸುಳ್ಳು ಹೇಳಿಕೆಗೆ ಸುಲಭವಾಗಿ ಉತ್ತರ ಕೊಡಲಾಯಿತು. ಗವರ್ನರ್ ತನ್ನ ಉಮೇದುವಾರರುಗಳಿಗೆ, ಪ್ರತ್ಯಕ್ಷವಾಗಿ ಸಹಾಯ ಮಾಡಿದ್ದರೆಂಬುದಕ್ಕೆ ಋಜುವಾತನ್ನು ' ಜರ್ನಲ್ ' ಪ್ರಕಟಿಸಿತು.

ಅದಕ್ಕೂ ಗವರ್ನರ್ ಕಾಸ್ಬಿ ಒಂದು ಪ್ರತ್ಯುತ್ತರ ಹುಡುಕಿದ.

ಒಂದು ಮಧ್ಯಾಹ್ನ ಜೆಂಗರ್ ತಂಗಿ ಕ್ಯಾಥಿ ಬಾಗಿಲು ತಳ್ಳಿಕೊಂಡು ನುಗ್ಗಿದಳು. ತೀವ್ರ ಗಾಭರಿಯಿಂದ ಕಣ್ಣುಗಳು ಕೆದರಿದ್ದವು. ಮೌನವಾಗಿ ಆಕೆ ಮುದ್ರಿತ ಕಾಗದವೊಂದನ್ನು ಅಣ್ಣನ ಕೈಗಿತ್ತಳು. ಉಸಿರು ಕೂಡಿಸಿಕೊಂಡಾಗ, ಬಾಯಿಬಿಟ್ಟು ಗಾಭರಿಯಿಂದಲೇ ನುಡಿದಳು "ಈ ಪರಿಪತ್ರದ ಪ್ರತಿಗಳನ್ನು ಎಲ್ಲಾ ಹೋಟೆಲುಗಳಲ್ಲೂ ಹಾಕಲೇಬೇಕು."

ಜೆಂಗರ್ ಓದಿದ. ರಾಜಪ್ರತಿನಿಧಿ ಮಂಡಳದ ನಿರೂಪ:

'ನ್ಯೂಯಾರ್ಕ್ ವೀಕ್ಲಿ ಜರ್ನಲ್'ನ ಕೆಲವು ನಿರ್ದೇಶಿತ ಪ್ರತಿಗಳನ್ನು "ಗಲ್ಲುಗಾರ ಅಥವಾ ಛಡಿ ಶಿಕ್ಷೆಗಾರ ಈ ನಗರದ ಪಿಲ್ಲೇರಿ (ಶಿಕ್ಷಿತರನು ಕುತ್ತಿಗೆ, ಕೈಗಳನ್ನು ಮರದ ಪಟ್ಟಿಗಳ ಮಧ್ಯೆ ಇಟ್ಟು ನಿಲ್ಲಿಸುವ ಕಂಬ)ಯ ಬಳಿಯಲ್ಲಿ ೬ನೇ ಬುಧವಾರ ಮಧ್ಯಾಹ್ನ ೧೧ರಿಂದ ೧೨ ಗಂಟೆಯೊಳಗೆ ಸುಟ್ಟುಹಾಕಬೇಕು."

ಈ ಸಂಗತಿ ಒಂದು ಸಮಸ್ಯೆಯಂತೆ ತೋರಿತು. ಈ ಕ್ರಮ ದಿಂದ ಗವರ್ನರ್ ಗಳಿಸಬೇಕೆಂದಿರುವ ಇಷ್ಟಾರ್ಥವಾದರೂ ಏನು?

"ನನಗೆ ಎಚ್ಚರಿಕೆ ನೀಡುವ ಉದ್ದೇಶವಿರಬೇಕು. ಗಾಭರಿ ಯಾಗಬೇಡ." ತಂಗಿಗೆ ಸಮಾಧಾನ ಹೇಳಿದ.

ಆ ಕರಪತ್ರವನ್ನು ಆಕೆಯ ಕೈಗಿತ್ತ. "ತಗೋ. ಇದನ್ನು ನಿನ್ನ ಹೋಟೆಲಿನ ಬಾಗಿಲ ಮೇಲೆ ಇಟ್ಟು ಮೊಳೆ ಹೊಡಿ. ನನಗೂ ಸ್ನೇಹಿತರಿದಾರೆಯೇ ಹೇಗೆಂಬುದು ಬೇಗ ಗೊತ್ತಾಗುತ್ತದೆ."

ಮರು ಬೆಳಿಗ್ಗೆ ಅಲೆಕ್ಸಾಂಡರ್ ಮುದ್ರಣಾಲಯಕ್ಕೆ ಧಾವಿಸಿ ಬಂದ. "ನಿನ್ನ ಧೈರ್ಯ ಯಾವ ಸ್ಥಿತಿಯಲ್ಲಿದೆ ಜೆಂಗರ್ ?"

ಮುದ್ರಕ ನಗು ಬೀರಿದ. "ತರಗೆಲೆಯಂತೆ ಗಡಗಡನೆ ನಡುಗು ತ್ತಿದ್ದೇನೆ." ಎಂದು ಗಟ್ಟಿಯಾಗಿ ನಕ್ಕ.

"ಇನ್ನೊಬ್ಬ ಪೀಟರ್ ವಿಷಯ ಹೇಳುತ್ತೇನೆ ಕೇಳು" ವೃದ್ಧ ಲಾಯರ್ ಮಾತನ್ನಾರಂಭಿಸಿದ. ಸತಿ ಅಲೆಕ್ಸಾಂಡರ್ ಬಳಿ ಅದೇ ಹೆಸರಿನ ವೃದ್ಧ ಗುಲಾಮನೊಬ್ಬನಿದ್ದಾನೆ. ಆಕೆ ತನ್ನ ಅನೇಕ ಮಂದಿ ಸ್ನೇಹಿತರಿಗೂ, ಸಂಬಂಧಿಗಳಿಗೂ ಸತ್ಕಾರ ಏರ್ಪಡಿಸಿದಾಗಲೆಲ್ಲ ಆ ಗುಲಾಮ ಹಾಜರಿರುತ್ತಾನೆ. ಆಕೆಯ ಕುರ್ಚಿಯ ಹಿಂದೆ ನಿಂತು, ಮೇಜಿನ ಮೇಲೆ ಬಂದು ಕೂಡರುವ ನೊಣಗಳನ್ನು ನವಿಲುಗರಿಯ ದೊಡ್ಡ ಬೀಸಣಿಗೆಯಿಂದ ಓಡಿಸುವುದೇ ಅವನ ಕೆಲಸ. ಈ ಉದ್ಯೋಗದಲ್ಲಿ ಅನೇಕರ ಸಂಭಾಷಣೆಗಳನ್ನೂ ವೃದ್ಧ ಪೀಟರ್ ಕೇಳಿದ್ದಾನೆ.

ಅಂತೆ, ಕಾಸ್ಬಿ, ವಾರೆಲ್ ಎಂಬ ನ್ಯಾಯವಾದಿಯನ್ನು ಆ ಪೀಟರ್ ಬಳಿಗೆ ಕಳಿಸಿದ. ಜೆಂಗರ್ 'ಜರ್ನಲ್'ಗೆ ಲೇಖನಗಳನ್ನು ಬರೆಯು ವವರು ಯಾರೆಂಬುದನ್ನು ಹೇಳುವುದಾದರೆ ಸ್ವಾತಂತ್ರ್ಯ ಕೊಡಿಸುವುದಾಗಿ ಹೇಳಿಕಳಿಸಿ ಅದಕ್ಕೆ ತಕ್ಕಷ್ಟು ವಿಮೋಚನಾ ಹಣವನ್ನೂ ನ್ಯಾಯವಾದಿ ಯೊಡನೆ ಕಳಿಸಿದ್ದ.

ಪೀಟರ್ ಎತ್ತರದ ಆಸಾಮಿ, ತೆಳು ಕಪ್ಪು, ನೊರೆಯುತ್ತಿದ್ದ ಗುಂಗುರು ಕೂದಲು. ಶರೀರವನ್ನು ನೆಟ್ಟಗೆ ಮಾಡಿಕೊಂಡು ಕಾಸ್ಬಿ

ಕಳಿಸಿದ ನ್ಯಾಯವಾದಿ ಇತ್ತ ಹಣವನ್ನು ಬಾಗಿಲಿನಿಂದಾಚೆಗೆ ಎಸೆದು, ಬಂದಂತೆ ವಾಪಸ್ ಮರಳಲು ಹಾದಿ ತೋರಿಸಿದ.

ಮುಂದಿನ ಮೂರು ದಿನಗಳೊಳಗೆ ಪೀಟರ್ ಈ ಸುದ್ದಿಯನ್ನು 'ಜರ್ನಲ್' ಲೇಖಕರೆಲ್ಲರ ಕಿವಿಗಳಿಗೆ ಮುಟ್ಟಿಸಿದ್ದ. ಅವರೆಲ್ಲರೂ ಪಾಪ್ಯುಲರ್ ಪಕ್ಷದ ನಾಯಕರೇ.

ವಿಧೇಯತೆಯನ್ನೂ, ನೇರವ್ಯವಹಾರವನ್ನೂ ಸದಾ ಮೆಚ್ಚುವ ಜೆಂಗರ್ "ವೃದ್ಧ ಪೀಟರಿಗೆ ಒಳ್ಳೆಯದಾಗಲಿ!" ಎಂದ.

ಆಗ ಬಾಗಿಲು ತಳ್ಳಿದ ಶಬ್ದ ಕೇಳಿಬಂತು. ಇಬ್ಬರಲ್ಲೊಬ್ಬರು ಬಾಗಿಲ ಬಳಿಗೆ ಹೋಗುವ ಮುನ್ನವೇ, ಬಾಗಿಲು ತಳ್ಳಿ, ನ್ಯೂಯಾರ್ಕ್ ನಗರದ ಷರೀಫ್ ಸೈವರ್ಸ್ ನುಗ್ಗಿ ಬಂದ. ಅವನ ಹಿಂದೆ ಕುರೂಪಿ ಗಲ್ಲುಗಾರ ಹೆಜ್ಜೆ ಇಟ್ಟ.

ಷರೀಫ್ ಸ್ಫುರದ್ರೂಪಿಯಲ್ಲ. ಆದರೆ ಜೆಂಗರ್‌ಗೆ ಅವನ ಮೇಲೆ ಅಭಿಮಾನ. ಆ ಡಚ್ಚನ ಮೂಗು ದಪ್ಪ, ಕಿವಿಗಳೂ ದೊಡ್ಡವು. ಈ ಮುಂಚೆ ಒರಟೊರಟಾಗಿ ನುಗ್ಗಿ ಬಂದಿದ್ದರೂ, ಅಲೆಕ್ಸಾಂಡರ್ ಮುಖ ಕಂಡೊಡನೆ, ಅವನ ವರ್ತನೆ ಬದಲಾಯಿಸಿತು. ಇದ್ದಕ್ಕಿದ್ದಂತೆ ವಿನಯಪರನಾದ. ಚಕ್ಕಳದ ಟೋಪಿಯನ್ನು ತೆಗೆದು, ತಲೆ ಬಾಗಿಸಿದ. "ಕ್ಷಮಿಸಿ ಸ್ವಾಮಿ. ಆದರೆ ನಾವು ಜೆಂಗರ್ ಪತ್ರಿಕೆಯ ಈ ಸಂಚಿಕೆಗಳಿಗೆಲ್ಲ ಕೈ ಹಾಕಬೇಕಾಗಿದೆ." ಕೈಲಿದ್ದ ಕರಪತ್ರವನ್ನು ತೋರಿಸಿದ.

ಜೆಂಗರ್ ಮುಗುಳುನಕ್ಕ. "ಹೋಗಿ, ಹುಡುಕಿ." ದೊಡ್ಡ ಕವಾಟವೊಂದನ್ನು ತೆಗೆದ. "ನಮ್ಮ ಪತ್ರಿಕೆಯ ಪ್ರತಿಗಳನ್ನೆಲ್ಲ ಇಲ್ಲೇ ತಾರೀಖುವಾರು ಜೋಡಿಸಿಡುತ್ತೇವೆ. ಹುಡುಕಿ ನೋಡಿ"

ಷರೀಫ್ ಮತ್ತು ಗಲ್ಲುಗಾರರಿಬ್ಬರೂ ಅಲ್ಲೂ, ಮನೆಯ ಇತರ ಕಡೆಗಳಲ್ಲೂ ಹುಡುಕಿದರು. ಪತ್ರಿಕೆಯ ಉಳಿದ ಸಂಚಿಕೆಗಳೆಲ್ಲ ದೊರೆತರೂ, ಸುಟ್ಟುಹಾಕಬೇಕಾದ ಸಂಚಿಕೆಗಳ ಪ್ರತಿಗಳು ಎಲ್ಲೂ ಸಿಕ್ಕಲಿಲ್ಲ.

"ವಿಚಿತ್ರವಲ್ಲವೆ!" ಜೆಂಗರ್ ವ್ಯಾಖ್ಯಾನಿಸಿದ. "ನೆನ್ನೆ ದಿನ ಅವೆಲ್ಲ ಇಲ್ಲೇ ಇದ್ದವು. ಆದರೆ ಇಂದು ಅವೆಲ್ಲ ವಿಚಿತ್ರ ರೀತಿಯಲ್ಲಿ

ಹೇಗೋ ಮಾಯವಾಗಿವೆ.”

ಷರೀಫ್ ಮತ್ತು ಗಲ್ಲುಗಾರ ಗುಟುರುಗುಟ್ಟಿ ಹೊರಬಿದ್ದರು. ಪತ್ರಿಕೆಯ ಪ್ರತಿಗಳನ್ನು ಕೇಳುತ್ತ ಅವರು ಮನೆಯಿಂದ ಮನೆಗೆ ಹೋಗುತ್ತಿದ್ದುದನ್ನು ಜೆಂಗರ್ ಗಮನಿಸಿದ.

ಕಿಟಕಿಯ ಬಳಿ ಕುಳಿತು ಪಿಲ್ಲೋರಿಯನ್ನು ನೋಡಬಹುದಾದಂತಹ, ತನ್ನ ಸ್ನೇಹಿತನೊಬ್ಬನ ಮನೆಗೆ ಪತ್ರಿಕಾ ದಹನದ ದಿನ ಜೆಂಗರ್ ಹೋದ.

ಪತ್ರಿಕಾ ದಹನದ ಆಜ್ಞೆಯನ್ನು ಒಳಗೊಂಡ ಹಸ್ತ ಪ್ರತಿಗಳನ್ನು ನ್ಯಾಯಮೂರ್ತಿ ಹ್ಯಾರಿಸನ್ ಬ್ರಾಡ್‌ಫರ್ಡ್‌ನ ಮುದ್ರಣಾಲಯದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಮುದ್ರಿಸಿದ್ದ. ಚರ್ಚುಗಳ ಮೇಲೂ, ಹೋಟೆಲುಗಳ ಮೇಲೂ ನಗರಾದ್ಯಂತ ಅಂಟಿಸಲಾಗಿತ್ತು. ಮನರಂಜನೆಯ ಅವಕಾಶವೇ ಇಲ್ಲದಿದ್ದ ಆ ನಗರದಲ್ಲಿ, ಏನು ನೋಟ ಕಂಡರೂ ಜನ ಕಿಕ್ಕಿರಿದು ನೆರೆಯುತ್ತಿದ್ದರು.

ಪಾಪ್ಯುಲರ್ ಪಾರ್ಟಿಯೂ ಸಾಕಷ್ಟು ಸಿದ್ಧತೆಗಳನ್ನು ಮಾಡಿತ್ತು. ದಹನ ಕಾಲದಲ್ಲಿ ಹಾಜರಿರಬೇಕೆಂಬ ಪ್ರತಿನಿಧಿ ಮಂಡಲದ ವಿಶೇಷ ಆಜ್ಞೆಯನ್ನು ಉಲ್ಲಂಘಿಸಬೇಕೆಂದು, ಹೊಸ ಆಲ್ಡರ್‌ಮನ್‌ಗಳು ಅಭಿಮತವಿತ್ತಿದ್ದರು. ತಮ್ಮ ಗಲ್ಲುಗಾರನಿಗೂ ಅದರಲ್ಲಿ ಭಾಗವಹಿಸದಂತೆ, ನಿಷೇಧಹಾಕಿದ್ದರು.

ಮಧ್ಯಾಹ್ನ ನ್ಯಾಯಮೂರ್ತಿ ಹ್ಯಾರಿಸನ್, ನಗರ ಭವನದಿಂದ ಗವರ್ನರರ ನಾಲ್ವರು ಸೇನಾಧಿಕಾರಿಗಳು, ಷರೀಫ್ ಮತ್ತು ಆತನ ನೀಗ್ರೋ ಗುಲಾಮ ಒಟ್ಟಿಗೆ ಹೊರಟುದನ್ನು ಜೆಂಗರ್ ನೋಡಿದ. ಷರೀಫನ ಕೈಯಲ್ಲಿ ೨೦-೩೦ ಚಿಕ್ಕ ಪತ್ರಿಕೆಗಳಿದ್ದವು.

ಬ್ರಾಡ್‌ಸ್ಟ್ರೀಟ್ ಮತ್ತು ವಾಲ್‌ಸ್ಟ್ರೀಟ್‌ಗಳಲ್ಲಿ ಸೈನಿಕರು ಸುತ್ತ ಕಣ್ಣು ಹೊರಳಿಸಿದರು. ಪತ್ರಿಕಾ ದಹನದ ಸುದ್ದಿಯನ್ನು ಸಾಕಷ್ಟು ಪ್ರಚುರಪಡಿಸಲಾಗಿತ್ತು; ಅಲ್ಲದೆ ಆಗ ಉಪಹಾರದ ವೇಳೆ; ಸಾಮಾನ್ಯವಾಗಿ ನೂರಾರು ಕೆಲಸಗಾರರು ಅಲ್ಲಿ ಅಡ್ಡಾಡುವಕಾಲ; ಆದರೂ ಯಾರೊಬ್ಬರೂ ಕಣ್ಣಿಗೆ ಬೀಳಲಿಲ್ಲ.

ಇಬ್ಬರು ಅಧಿಕಾರಿಗಳೂ ಹೆಗಲು ಹಾರಿಸಿದರು, ಮುಖ ಗಂಟಿಕ್ಕಿತು. ಒಳ್ಳೆ ವಿಚಿತ್ರ ಜೋಡಿ. ಷರೀಫ್ ಸೈಮ್ಸ್ ಎತ್ತರವಾದ ಡಚ್ ಮನುಷ್ಯ. ಕಳಾಹೀನ ಮುಖ, ದೊಡ್ಡ ವಿಕಾರವಾದ ಕೈಗಳು, ಅಳುಚೊಳಕು ಉಡುಪು. ಹ್ಯಾರಿಸನ್ ಚುರುಕು, ಹರಿತವಾದ ಮುಖ, ಮೈಮೇಲೆ ಅದೇ ತಾನೇ ಇಸ್ತ್ರಿಮಾಡಿದ ಮುಂಕು ನೇರಿಳೆ ಬಣ್ಣದ ಸೂಟು, ಕೈಯಲ್ಲಿ ಚಿನ್ನದ ಹಿಡಿ ಹಾಕಿದ ಬೆತ್ತ.

"ಬೆಂಕಿ ಹೊತ್ತಿಸಿ!" ಹ್ಯಾರಿಸನ್ ತನ್ನ ಷರಟಿನ ಲೇಸ್ ಕಫ್‌ಗಳನ್ನು ಇಳಿಬಿಡುತ್ತಾ ಆಜ್ಞಾಪಿಸಿದ.

ಸೈಮ್ಸ್ ಪ್ರತಿಭಟಿಸಿದ, "ಷರೀಫ್ ತನ್ನ ಕೈಗಳಿಂದ ಬೆಂಕಿ ಹಚ್ಚಲಾರ! ಅದು ಗೌರವದ ಕೃತಿಯಲ್ಲ!"

"ಹಾಗಾದರೆ ಹೊತ್ತಿಸುವಂತೆ ನಿನ್ನ ಗುಲಾಮನಿಗೆ ಹೇಳು!"

ಷರೀಫ್ ಸೈಮ್ಸ್ ತನ್ನ ಗುಲಾಮನ ಕಡೆ ತಿರುಗಿ "ಸ್ವಲ್ಪ ಸೌದೆ ತಂದು ಬೆಂಕಿ ಹೊತ್ತಿಸು!" ಎಂದ.

ಹತ್ತಿರದಲ್ಲೆಲ್ಲೂ ಚಕ್ಕೆಗಳನ್ನಾಗಲಿ, ಮರದ ತುಂಡುಗಳನ್ನಾಗಲಿ ಕಾಣದೆ, ಹುಡುಕಿ ತರಲು ಗುಲಾಮ ಹೊರಟ. ಸ್ವಲ್ಪದೂರದ ಬಡಗಿ ಶಾಲೆಯಲ್ಲಿ ಒಂದಷ್ಟು ಮರದ ಪುಡಿ ಕಂಡು, ಅದನ್ನು ಬಾಚಿಕೊಂಡ. ಬಡಗಿ ಕಿಟಕಿಯಾಚೆಗೆ ತಲೆಯಿಟ್ಟು "ಕಳ್ಳ! ದರೋಡೆಕೋರ! ನನ್ನ ಮರ ಕದಿಯುತ್ತಿದಾನೆ! ಹೋಗು, ನಡಿ!" ಎಂದು ಗಟ್ಟಿಯಾಗಿ ಕಿರುಚಿದ.

ಆ ಬಡ ಗುಲಾಮ ಮರದ ಚೂರುಗಳನ್ನು ಅಲ್ಲೇ ಬಿಟ್ಟು ಓಡಿದ. ಎಲ್ಲೆಲ್ಲೂ ಇದೇ ಪರಿಸ್ಥಿತಿ ಅವನನ್ನೆದುರಿಸಿತು. ಯಾವೊಬ್ಬ ಅಂಗಡಿಯವನೂ ತನ್ನ ಕಸ ಕಡ್ಡಿಗಳನ್ನು ಕೂಡ ಇಂಥ ಅಕಾರ್ಯಕ್ಕೆ ಕೊಡಲೊಪ್ಪಲಿಲ್ಲ.

ಸಣ್ಣ ಉರಿ ಹಚ್ಚಲು ಸಾಕಾಗುವಷ್ಟು ಕಡ್ಡಿಗಳನ್ನೂ ಕಾಗದದ ಚೂರುಗಳನ್ನೂ ಕಸ ತುಂಬಿದ ಬೀದಿಯಲ್ಲಿ ಆರಿಸಿದ.

ದಪ್ಪ ಗಂಟಲಿನಲ್ಲಿ, ಷರೀಫ್ 'ಜರ್ನಲ್' ಸಂಚಿಕೆಗಳ ಸಂಖ್ಯೆಯನ್ನು ಓದಿದ. "ನಂಬರ್ ೭, ದಹಿಸಲಾಜ್ಞೆ! ನಂಬರ್ ೪೭,

ದಹಿಸಲಾಜ್ಞೆ! ನಂಬರ್ ೪೮, ದಹಿಸಲಾಜ್ಞೆ! ನಂಬರ್ ೪೯, ದಹಿಸ ಲಾಜ್ಞೆ !" ಮೆಲ್ಲಗೆ ಕೇಳಿದ "ದಹಿಸುವವರಾರು ?"

ನ್ಯಾಯಮೂರ್ತಿ ಹ್ಯಾರಿಸನ್ ಸಿಟ್ಟಿನಿಂದ ಕಾಲೆತ್ತಿ ಗಟ್ಟಿಸಿದ. "ನೀನೇ ಸುಟ್ಟುಹಾಕು !"

"ಹಿಡಿದುಕೋ ರಿಕಾರ್ಡ್ಡರ್ !" ಭಾರಿ ಶರೀರದ ಷರೀಫ್ ಪ್ರತಿಭಟಿಸಿದ. "ರಾಜಪ್ರತಿನಿಧಿ ಮಂಡಲದ ಆಜ್ಞೆಯಲ್ಲಿ ನನ್ನ ಪ್ರಸ್ತಾಪವಿಲ್ಲ. ಗಲ್ಲುಗಾರ ದಹಿಸಬೇಕೆಂದು ಅದು ಹೇಳುತ್ತದೆ. ಅವನಿಲ್ಲಿಲ್ಲ. ಕಾನೂನಿಗೆ ನಾನು ಅಡ್ಡಿ ಮಾಡುವುದಿಲ್ಲ. ಆದರೆ ಇದರಲ್ಲಿ ನನ್ನ ಕೈವಾಡವೇನಿಲ್ಲ ಎಂದು ಹೇಳಬಯಸುತ್ತೇನೆ!" ಪತ್ರಿಕೆಗಳನ್ನು ಗುಲಾಮನೆಡೆಗೆ ಎಸೆದು, ತನ್ನ ದೊಡ್ಡ ಕೈಗಳನ್ನು ಹಿಂದಕ್ಕೆ ಕಟ್ಟಿ, ಆಕಾಶದೆಡೆ ನೋಡಿದ.

ದಹನ ಪ್ರದೇಶದ ಕಡೆಗೆ ಹೋಗದಂತೆ ಜನರಿಗೆ ಎಚ್ಚರಿಕೆ ನೀಡಲು, ಬೀದಿ ಮೂಲೆಯೊಂದರಲ್ಲಿ ಪಹರೆ ನಿಂತಿದ್ದ, ವಾದ್ಯಗಾರ ಹೆಂಡ್ರಿಕ್ ಕುಕ್, ನಿಕ್ ಸಿಜ್, ವೀಲ್‌ರೈಟ್ ಇವರುಗಳನ್ನು, ಮನೆಗೆ ಹಿಂತಿರುಗುವಾಗ ಜೆಂಗರ್ ನೋಡಿದ.

"ನೋಡಿಲ್ಲಿ" ಹೆಂಡ್ರಿಕ್ ನುಡಿದ. "ಪತ್ರಿಕೆಗಳನ್ನು ಸುಡಲು ಅವನಿಗೆ ದೊರೆತ ಒಬ್ಬನೇ ವ್ಯಕ್ತಿ, ಗುಲಾಮ. ಬೇರೆ ಆಯ್ಕೆಗೆ ಅವಕಾಶವೇ ಇರಲಿಲ್ಲ."

ನಿಕ್ ತಲೆಯಾಡಿಸಿದ. "ಎಂಥ ದುರ್ದೆಸೆ ! ಮುದ್ರಣಕಾರ ಪೀಟರನ್ನಾಗಲಿ, 'ಜರ್ನಲ್'ನಾಗಲಿ, ದೂರು ಹೊರಿಸಿ, ವಿಚಾರಣೆಗೆ ಗುರಿಪಡಿಸಲು ಜ್ಯೂರಿಮಂಡಲ ನಿರಾಕರಿಸಲಿಲ್ಲವೇ ? ಈ ವಿಷಯ ಸ್ವಲ್ಪ ಕೇಳು, ಪೀಟರಿಗೆ ನ್ಯಾಯವಾದ ವಿಚಾರಣೆಗೆ ಅವಕಾಶವಿತ್ತೆ ? ತನ್ನ ಮತ್ತು ತನ್ನ ಪತ್ರಿಕೆಯ ಪರ ವಾದಿಸಲು ಅವಕಾಶ ದೊರೆಯಿತೆ ? ಅಥವಾ ಮೊದಲು ಶಿಕ್ಷೆ ವಿಧಿಸಿ ಅನಂತರ ವಿಚಾರಣೆ ನಡೆಸುವ ಅತ್ಯಾಧುನಿಕ ಮಾರ್ಗವನ್ನು ಅನುಸರಿಸಿದರೆ ?"

---

# ಅಧ್ಯಾಯ ೨೧

## ಜೆಂಗರ್ ಸಿಕ್ಕಿಬಿದ್ದ

ಎಲ್ಲಾ ಹೋಟಲುಗಳಲ್ಲೂ, ತನ್ನದರಲ್ಲೂ ಕೂಡ ಅಂಟಿಸ ಬೇಕಾಗಿದ್ದ ಕರಪತ್ರವೊಂದನ್ನು ಹಿಡಿದು ಜೆಂಗರ್‌ನ ತಂಗಿ ಕ್ಯಾಥಿ, ಮರುದಿನ ಬಂದಳು.

'ಜರ್ನಲ್' ಪತ್ರಿಕೆಯ ಲೇಖಕರ ಹೆಸರುಗಳನ್ನು ತಿಳಿಸುವ ಯಾರಿಗೇ ಆಗಲಿ, ೫೦ ಪೌಂಡು ಬಹುಮಾನ ಕೊಡುವುದಾಗಿ ಸಾರುವ ಗವರ್ನರ್ ಸಹಿಯಿದ್ದ ಘೋಷಣೆ ಅದರಲ್ಲಿತ್ತು.

ಜೆಂಗರ್ ಸಿಳ್ಳುಹಾಕಿದ, "ಭಾರಿ ಹಣವೇ!". ದಹನದ ಆಜ್ಞೆಗಿಂತ, ಈ ಸುದ್ದಿ ಅವನನ್ನು ಹೆಚ್ಚು ಕಳವಳಕ್ಕೆ ಈಡುಮಾಡಿತು. ಬಹುಮಾನದ ಈ ಕ್ರಮದ ವಿರುದ್ಧ ಅವನು ಹೋರಾಡುವಂತಿರಲಿಲ್ಲ. ಯಾರಾದರೊಬ್ಬರು ಹೇಳಿಯೇಬಿಟ್ಟರೆ !

ಅತ್ಯುಗ್ರವಾದ ಟೀಕೆಗಳನ್ನು ಬರೆದವರಲ್ಲಿ ಅವನೂ ಒಬ್ಬ. ಉಳಿದವರೆಂದರೆ ಅಲೆಕ್ಸಾಂಡರ್, ಲೂಯಿಮಾರಿಸ್ ಜ್ಯೂನಿಯರ್, ಮತ್ತು ಜೆಂಗರ್‌ಗೆ ಸ್ವಂತ ಮುದ್ರಾಣಾಲಯ ಸ್ಥಾಪಿಸಿ ಪತ್ರಿಕೆ ಹೊರಡಿಸಲು ಸಹಾಯ ಮಾಡಿದವರು. ಅವರಿಗೆಲ್ಲ ಏನಾದೀತು ? ರಾಜದ್ರೋಹವೆಂದು ಶಿಕ್ಷೆ ವಿಧಿಸಿದರೆ ಅವರೆಲ್ಲ ನೇಣುಗಂಬದಿಂದ ನೇತಾಡಬೇಕಾದೀತು !

ಅವಳು ತಂದಿದ್ದ ಕರಪತ್ರದಿಂದ ತನಗುಂಟಾಗಿದ್ದ, ತೀವ್ರ ಕಳವಳವನ್ನು ಮರೆ ಮಾಡುತ್ತಾ, ಅವಳಿಗೆ, "ನೀನು ತಗಲುಹಾಕಲೇ ಬೇಕಾದ್ದರಿಂದ ಗೋಡೆಗಿಟ್ಟು ಮಳೆ ಹೊಡಿ. ಕತ್ತಲೆಯ ಸ್ಥಳ ಆರಿಸಿ ತಗಲುಹಾಕು" ಎಂದ ಬಾಗಿಲವರೆಗೂಹೋಗಿಅವಳನ್ನುಕಳಿಸಿಕೊಟ್ಟು, ಘೋಷಣೆಯನ್ನು ಕುರಿತು ವಿನೋದ ತುಷಾರವೊಂದನ್ನು ಕಲ್ಪಿಸಲು

ಯೋಚಿಸುತ್ತ, ಬಿಸಿಲು ಕಾಯುತ್ತಿದ್ದ ಬೀದಿಯ ಸುತ್ತೆಲ್ಲ ಕಣ್ಣು ಹಾಯಿಸಿದ. ಅವನಿಗೊಂದು ಹಾಸ್ಯದ ತುಣಕೂ ಹೊಳೆಯದೇ ಹೋದುದು ಈ ಸಾರೆ ಮಾತ್ರ.

ಹಳೆ ಡಚ್ ಚರ್ಚಿನ ವಾದ್ಯಗಾರನಾದ ಜೆಂಗರ್ ಮಾಮೂಲಿನಂತೆ ಮರು ಭಾನುವಾರ ಬೆಳಿಗ್ಗೆ ಚರ್ಚಿಗೆ ಹೋಗುತ್ತಿದ್ದಾಗ ಬ್ರಾಡ್‌ಸ್ಟ್ರೀಟಿನಲ್ಲಿ ಶ್ರೇಷ್ಠ ನ್ಯಾಯಮೂರ್ತಿ ಡಿಲಾನ್ಸೆಯ ಮುಖಾಮುಖಿ ಭೇಟಿಯಾಯಿತು.

" ಕ್ಷಮಿಸಿ ಮಹಾಸ್ವಾಮಿ " ತನ್ನ ಮೇಲೆ ತಪ್ಪು ಹೊರಿಸಬೇಕೆಂದು ಶ್ರೇಷ್ಠ ಜೂರಿ ಮಂಡಳಕ್ಕೆ ಆಜ್ಞಾಪಿಸಿದ್ದ ನ್ಯಾಯಮೂರ್ತಿಗೆ ಡಿಕ್ಕಿ ಹೊಡೆಯಲಿದ್ದ ಚರ್ಚ್ ವಾದ್ಯಗಾರ ವಿನಯವಾಗಿ ಬೇಡಿಕೊಂಡ.

ಡಿಲಾನ್ಸೆ ಪ್ರತಿಯಾಗಿ ಮುಗುಳು ನಕ್ಕದ್ದನ್ನು ಕಂಡು, ಜೆಂಗರ್ ಚಕಿತನಾದ. " ಓ, ಜೆಂಗರ್ " ಎಂದು ನ್ಯಾಯಮೂರ್ತಿ ಸ್ನೇಹಪರ ಧ್ವನಿಯಲ್ಲಿ ಮಾತು ಆರಂಭಿಸಿದ. " ನಿನ್ನೊಡನೆ ಮಾತನಾಡಬೇಕೆಂದಿದ್ದೆ. ಗವರ್ನರ್ ನಿನಗೊಂದು ವೈಯಕ್ತಿಕ ಸಂದೇಶವನ್ನು ನನ್ನೊಡನೆ ಕಳಿಸಿದ್ದಾರೆ. ನಿನ್ನ ' ಜರ್ನಲ್ ' ಗೆ ಬರೆವ ಲೇಖಕರ ಹೆಸರುಗಳನ್ನು ತಿಳಿಸುವ ಉಪಕಾರ ಮಾಡುವಿಯಾದರೆ, ನಿನಗೆ, ಬಹಿರಂಗವಾಗಿ ಪ್ರಕಟಿಸಿರುವ ಬಹುಮಾನದ ಎರಡರಷ್ಟು ಮೊತ್ತವನ್ನು ದಯಪಾಲಿಸುತ್ತಾರೆ. ದೊಡ್ಡ ಮೊತ್ತ, ನೀನೂ, ನಿನ್ನ ಕುಟುಂಬವೂ ಕೆಲಕಾಲ ಜೀವನ ಮಾಡಲೂ ಸಾಕಾಗುವಷ್ಟು ದೊಡ್ಡ ಮೊತ್ತ-ಎಂದು ನೀನೂ ಒಪ್ಪುವಿಯೆಂದು ನಂಬುತ್ತೇನೆ. ಇಷ್ಟೇ ಅಲ್ಲದೆ, ಇನ್ನೂ ಹೆಚ್ಚಿನ ಬಹುಮಾನವಾಗಿ, ನಿನಗೆ ಯಾವ ತೊಂದರೆಯೂ ಆಗದೆಂಬ ಭದ್ರ ಭರವಸೆಯನ್ನು ಗವರ್ನರ್ ವೈಯಕ್ತಿಕವಾಗಿ ನೀಡುತ್ತಾರೆ."

ಜೆಂಗರ್ ತನ್ನ ಪ್ರಬಲ ಬಾಹುಗಳನ್ನು ಎತ್ತರಿಸಿದ, ಹ್ಯಾಟನ್ನು ತಲೆಯ ಮೇಲೆ ಕುಕ್ಕಿಕೊಂಡು ಅಲ್ಲಿಂದ ಕಾಲ್ತೆಗೆಯಲು ತಿರುಗಿದ. ಮರುಕ್ಷಣದಲ್ಲಿ, ಮತ್ತೆ ಯೋಚಿಸಿ ತನ್ನ ಪತ್ರಿಕೆಯಲ್ಲಿ ಪ್ರಕಟವಾಗಿದ್ದ ವಾಕ್ಯವೊಂದನ್ನೇ ಉಚ್ಚರಿಸಿದ; " ಲಂಚದಾಸೆಗೆ ಮಿತ್ರರ ಹೆಸರು

ಗಳನ್ನು ಮಾರಿ ‘ ಲಂಚ ಪಡೆದ ದ್ರೋಹಿ ’ ಎಂಬ ಕುಖ್ಯಾತಿ ಪಡೆದವರ ವರ್ಗಕ್ಕೆ ಸೇರಿದವನು ನಾನಲ್ಲ !”

ನ್ಯಾಯಮೂರ್ತಿ ಡಿಲಾನ್ಸಿಯ ಮುಖ ತೀವ್ರ ಕೋಪದಿಂದ ಬಿಳುಪೇರಿತು.

ಜೆಂಗರ್ ಬೆನ್ನು ಸೆಟೆದುಕೊಂಡು, ನನಗೇನೂ ಹೆದರಿಕೆಯಿಲ್ಲ ಎಂದು ಹೇಳಿಕೊಳ್ಳುತ್ತ ಚರ್ಚಿಗೆ ನೇರವಾಗಿ ನಡೆದ.

ಮರು ಭಾನುವಾರ – ನವೆಂಬರ್ ೧೭ ರಂದು – ಅವನೂ ಅವನ ಕುಟುಂಬದವರೂ, ದೀರ್ಘ ಪ್ರವಚನದ ನಂತರ, ನಿದ್ದೆ ಬಂದವರಂತೆ ಕಾಲೆಳೆದುಕೊಂಡು ಚರ್ಚಿನಿಂದ ಮನೆಗೆ ನಡೆದರು. ಎಲ್ಲರಿಗಿಂತ ಮುಂದೆ ಎಲಿಜಬೆತ್, ಪುಟ್ಟ ಹುಡುಗಿ, ನೆಲ ಮುಟ್ಟುವ ಲಂಗವನ್ನೂ ಗಂಭೀರವಾದ ಹಣೆಯ ಮೇಲೆ ಲೇಸಿನ ಟೋಪಿಯನ್ನೂ ಧರಿಸಿದ್ದಳು; ಅವಳ ಹಿಂದೆ ನಿಕೋಲಾಸ್ ಮತ್ತು ಪೈಟರ್ ನಗುತ್ತ ಚಿಕ್ಕದೊಂದು ಕಲ್ಲನ್ನು ಒಬ್ಬರಿಂದೊಬ್ಬರ ಬಳಿಗೆ ಒದೆಯಲೆಳಿಸುತ್ತ ಸಾಗಿದ್ದರು; ಅವರ ಹಿಂದೆ ಜಾನ್, ೧೧ ವರ್ಷ ವಯಸ್ಸಿನ ಜಗಳಗಂಟಿ ಬಾಲಕ. ಎಲ್ಲರಿಗಿಂತ ಹಿಂದೆ ತಂದೆತಾಯಿಗಳು ಹೆಜ್ಜೆ ಹಾಕುತ್ತಿದ್ದರು. ಕ್ಯಾಥರೀನಳ ಪ್ರಾರ್ಥನಾ ಪುಸ್ತಕ ಅವಳ ಮುಂಗೈಗೆ ತೊಡಿಸಿದ ಸರಪಳಿಗೆ ಬಂಧಿತವಾಗಿ ಜೋತಾಡುತ್ತಿತ್ತು.

“ ಇಷ್ಟೊಂದು ಬೆದರಿಕೆಗಳ ನಂತರವೂ, ನಮಗೆ ಏನೂ ಆಗಿಲ್ಲ” ಗಂಡನ ತೋಳುಗಳ ಮೇಲೊರಗಿ, ನಿಟ್ಟುಸಿರುಬಿಡುತ್ತ ನುಡಿದಳು.

ಭಾನುವಾರಗಳಲ್ಲಿ ಮುದ್ರಣಾಲಯಕ್ಕೆ ಅಸಹಜ ಸ್ವರೂಪ ಬರುತ್ತಿತ್ತು. ತಮ್ಮ ಮಕ್ಕಳ ಚಿಕ್ಕ ಹಿಂಡನ್ನು ಗುಂಪಾಗಿ ನುಗ್ಗಿಸಿದಾಗ ನೀರವತೆ ಅಲ್ಲಿ ಮನೆ ಮಾಡಿರುತ್ತಿತ್ತು. ಮುದ್ರಣಕಾರ ಕ್ಷಣ ಹೊತ್ತು ನಿಂತು ಸುತ್ತೆಲ್ಲ ದಿಟ್ಟಿಸಿದ: ಖಾಲಿ ಮುದ್ರಣ ಮಂದಿರ. ಮರುದಿನದ ಪ್ರಕಟನೆಗೆಂದು, ಅರ್ಧ ಸಿದ್ಧವಾದ ‘ಜರ್ನಲ್’ ಪ್ರತಿಗಳು. ಬೆಕ್ಕು ಅಕ್ಷರ ಖಾನೆಯ ಸ್ಟಾಂಡಿನ ಮೇಲೆ ಕುಳಿತು ಮುಖ ಒರೆಸಿಕೊಳ್ಳುತ್ತಿತ್ತು. ಕ್ಯಾಥರೀ಼ನ್ ಮಕ್ಕಳನ್ನು ಅಡುಗೆ ಮನೆಗೆ ಕರೆದುಕೊಂಡು ಹೋದಳು. ಮೇರಿಯಾ ಎವರ್ಟ್ಸ್ ಮತ್ತು ಫ್ರೆಡರಿಕ್ಕರ

ಮೈ ತೊಳೆಸಿದಳು.

ಒಂಟಿಯಾಗಿ ಉಳಿದ ತಂದೆ, ಬೆಕ್ಕಿನ ಮೈ ತಟ್ಟಿದ. ಗೋಡೆ ಬದಿಯಲ್ಲಿ ಜೋಡಿಸಿಟ್ಟಿದ್ದ ನಗರ ಘೋಷಣೆಯ ಪುಟಗಳೆಡೆ ಮುಗುಳ್ನಗೆ ಬೀರಿದ. ದೊರೆಯುತ್ತಿದ್ದ ಅಲ್ಪ ಅವಕಾಶದಲ್ಲೇ ಅರ್ಧ ದಷ್ಟು ಪುಸ್ತಕವನ್ನು ಮುದ್ರಿಸಿದ್ದ.

" ದೊರೆಯ ಹೆಸರಿನಲ್ಲಿ, ನಿಲ್ಲು !"

ಅವನ ಹಿಂದಿನಿಂದ ಧ್ವನಿಯೊಂದು ಕೇಳಿಸಿತು. ಇದ್ದಕ್ಕಿದ್ದಂತೆ ಮಾತು ಕೇಳಿ ಬಂದಿದ್ದರಿಂದ, ಒಂದುಹೆಜ್ಜೆ ಹಾರಿ, ಅನಂತರ ತಿರುಗಿ, ದಿಟ್ಟಿಸಿದ. ಷರೀಫ್, ಜಾನ್ ಹೆಂಡ್ರಿಕ್ ಸೈವ್ಸನ ಗುರುತು ಸಿಕ್ಕಿತು.

ಇಬ್ಬರು ಪೋಲೀಸರು, – ಅವನಂತೆಯೇ ಅನುದ್ರಿಕ್ತ ಸ್ವಭಾವದ ಕೆಲಸಗಾರರು – ಆರಡಿ ಉದ್ದದ ಕೋಲುಗಳನ್ನು ಹಿಡಿದು, ಹೆಜ್ಜೆ ಹಾಕುತ್ತ ಬಂದು, ಅವನ ಇಕ್ಕಡೆಗಳಲ್ಲಿ ನಿಂತರು.

"ಏನು ಸಮಾಚಾರ?". ಕೋಪಕ್ಕಿಂತಲೂ, ಏನೂ ಅರಿಯದವ ನಾಗಿ ಜೆಂಗರ್ ಪ್ರಶ್ನಿಸಿದ.

" ನಿನ್ನ ದಸ್ತಗಿರಿಯಾಗಿದೆ " ಷರೀಫ್ ಉತ್ತರವಿತ್ತ.

ಕಡೆಗೆ ಬಂದವನು ನ್ಯಾಯಮೂರ್ತಿ ಹ್ಯಾರಿಸನ್. ದುಬಾರಿ ಬೆಲೆಯ ಹೊಸ ನೀಲಿ ರೇಷ್ಮೆ ಕೋಟನ್ನೂ, ರಕ್ತವರ್ಣದ ಕತ್ತು ಪಟ್ಟಿಯನ್ನೂ ಧರಿಸಿದ್ದ. ಪಾದವನ್ನೂ ಮೊಳಕೈಯನ್ನೂ ಅಲ್ಲಾಡಿ ಸುತ್ತಿದ್ದ.

ಗಂಟು ಕಟ್ಟಿದ ಅವನ ಮುಖದಿಂದ ಯಮಸಿಟ್ಟೂ, ಹಿಂಸಾ ಸಕ್ತಿಯೂ ಕೆಂಡವುಗುಳುತ್ತಿದ್ದವು. ಮೈ ಮೇಲೆ ಹತೋಟಿಯೇ ಅವನಿ ಗಿರಲಿಲ್ಲ. " ಆಜ್ಞೆಯನ್ನು ಓದು, ಮೂರ್ಖ! ಬೇಗ ಹೊರಡು! ಮತ್ತಾರಾದರೂ ಬಂದಾರು !" ಎಂದು ಅರಚಿದ.

ಮುದ್ರಕನನ್ನು ಬಂಧಿಸಿ ಜೈಲಿಗೆ ಹಾಕುವಂತೆ ರಾಜಪ್ರತಿನಿಧಿ ಮಂಡಳ ಹೊರಡಿಸಿದ್ದ ಆಜ್ಞೆಯನ್ನು ಷರೀಫ್ ಸೈವ್ಸ್ ಗಟ್ಟಿಯಾಗಿ ಓದಿದ.

ಜೆಂಗರ್‌ಗೆ ವಿಸ್ಮಯವೇನೂ ಆಗಿರಲಿಲ್ಲ. ಆದರೆ ವಿಷಾದ



ಜೆಂಗರನ ದಸ್ತಗಿರಿ

(ಚಿತ್ರದ ಮುಂಭಾಗದಲ್ಲಿ ಕಾಣುವುದು ಆಗಿನ ಕಾಲದ ಮುದ್ರಣ ಯಂತ್ರ)

ಉನ್ಮೂಲಿಸಿತು. “ ಒಳ್ಳೇದು – ” ಅಂಜಿಕೆಯಿಂದ ಮಾತು ಮುಂದು ವರಿಸಿದ “ ಒಂದು ನಿಮಿಷ ತಡೆದರೆ, ಒಂದಷ್ಟು ಬಟ್ಟೆ ಕೂಡಿಸಿ ಕೊಂಡು, ಪತ್ನಿಗೆ ಕೊನೆಮಾತು ಹೇಳಿ ಬರುತ್ತೇನೆ – ”

“ ಹಿಡಿದು ಹೊರಗೆಳೆಯಿರೋ !” ಹ್ಯಾರಿಸನ್ ಅಬ್ಬರಿಸಿದ. ಕೋಪ ಗಂಟಲನ್ನೂ ಬಿಗಿ ಹಿಡಿದಿತ್ತು. ಆಡಿದ ಮಾತುಗಳಲ್ಲಿ ಸ್ಪಷ್ಟತೆ ಇರಲಿಲ್ಲ.

ಷರೀಫ್, ಪೋಲೀಸರಿಗೆ ಸೂಚನೆ ಕೊಟ್ಟೊಡನೆಯೇ ಅವರು ಜೆಂಗರ್‌ನ ತೋಳುಗಳನ್ನು ಹಿಡಿದುಕೊಂಡರು.

ಅವನನ್ನು ಬಾಗಿಲಿನಿಂದಾಚೆಗೆ ನಡೆಸಿಕೊಂಡು ಹೋಗುತ್ತಿದ್ದಂತೆ ಮಳಿಗೆಯ ಇನ್ನೊಂದು ಕಡೆಗೆ ಬಂದ ಕ್ಯಾಥರೀನ್ ಚೀರಿದಳು.

ಅಧಿಕಾರಿಗಳು ತಮ್ಮ ಬಲಿಯನ್ನು ಆತುರದಿಂದ ಎಳೆದುಕೊಂಡು ಹೊರಟರು. ಹೋಗಬೇಕಾಗಿದ್ದ ದೂರ ಅತ್ಯಲ್ಪ. ಬ್ರಾಡ್ ಸ್ಟ್ರೀಟಿನ ನಾಲ್ಕು ಬ್ಲಾಕುಗಳನ್ನು ದಾಟಿದರೆ ನಗರ ಭವನ.

ಕ್ಯಾಥರೀನ್ ಮುದ್ರಣಾಲಯದ ಬಾಗಿಲಲ್ಲಿ ನಿಂತಳು. ಮಕ್ಕಳು ಅವಳ ಸುತ್ತ ಚೀರುತ್ತಿದ್ದವು. “ ಬನ್ನಿ! ಬನ್ನಿ! ನನ್ನ ಗಂಡನನ್ನು ಎಳೆದುಕೊಂಡು ಹೋಗುತ್ತಿದ್ದಾರೆ! ಬನ್ನಿ” ಎಂದವಳು ಅರಚತೊಡಗಿದಳು.

ಬ್ರಾಡ್ ಸ್ಟ್ರೀಟಿನ ಬಾಗಿಲುಗಳೂ, ಕಿಟಕಿಗಳೂ ತೆರೆದವು. ಏನು ನಡೆಯುತ್ತಿದೆಯೆಂಬುದನ್ನು ನೋಡಲು ಗಂಡಸರೂ, ಹೆಂಗಸರೂ ಹೊರಗೆ ಬಂದರು. ಅಧಿಕಾರಿಗಳನ್ನು ಪ್ರತಿಭಟಿಸಬೇಕೆಂಬ ಭಾವನೆ, ಜೆಂಗರ್‌ಗೆ ಹೊಳೆಯಲೇ ಇಲ್ಲ. ಆದರೆ ಅವನ ನೆರೆಯವರು ಕೆಲವರು, ಕೋಪದಿಂದ ಅಟ್ಟಿಸಿಕೊಂಡು ಬಂದರು. ಜನ, ತಮ್ಮ ಭಾನುವಾರದ ಪ್ರಶಾಂತ ಸ್ಥಿತಿಯಿಂದ ಎಚ್ಚೆತ್ತು, ದಂಗೆಯೇಳುವ ಮುನ್ನವೇ ನಗರ ಭವನವನ್ನು ತಲುಪಬೇಕೆಂದು ಅಧಿಕಾರಿಗಳು ಸರಸರನೆ ಹೆಜ್ಜೆ ಹಾಕಿದರು. ಗೊಳ್ಳನೆ ಅಳುತ್ತಿದ್ದ ಮುದ್ರಕನ ಪತ್ನಿಯ ಚೀರಾಟ ಬ್ರಾಡ್ ಸ್ಟ್ರೀಟಿನ ಉದ್ದಕ್ಕೂ, ಅವರನ್ನು ಹಿಂಬಾಲಿಸಿತು.

# ಅಧ್ಯಾಯ ೨೨

## ಜೈಲಿನಲ್ಲಿ ಜೆಂಗರ್

ಮಧ್ಯಾಹ್ನವೆಲ್ಲ, ಬೀಗ ಹಾಕಿದ ನಗರ ಭವನದ ಮುಂದೆ ಜನ ಕಿಕ್ಕಿರಿದು ನೆರೆದು ಗದ್ದಲ ಮಾಡತೊಡಗಿದರು. ಅಂದು ಭಾನುವಾರ ವಲ್ಲದಿದ್ದರೆ ಅವರು ದೊಂಬಿಮಾಡುತ್ತಿದ್ದುದೂ ಖಚಿತ.

ಭವನದೊಳಗೆ ಸ್ಥಳಾಂತರ ಕಾರ್ಯಗಳು ನಡೆಯುತ್ತಿದ್ದವು. ಜೈಲು ನೆಲದ ಮಟ್ಟದಲ್ಲಿತ್ತು. ತಳಹದಿಯ ಕೆಳಗೆ ಒಂದು ಕತ್ತಲೆ ಕೋಣೆ ಅಲ್ಲಿದ್ದ ಮೂರೇ ಕೊಟಡಿಗಳಲ್ಲೆಲ್ಲಾ ಗಂಡಸರು, ಹೆಂಗಸರು, ಕೊಲೆಗಾರರು, ಕಳ್ಳರು, ವೃದ್ಧರು, ಹುಡುಗರು, ರೋಗಗ್ರಸ್ತರು, ಹುಚ್ಚರು ಈ ರೀತಿ ಎಲ್ಲ ವಿಧವಾದ ಪಾತಕಿಗಳನ್ನೂ ಕೂಡಿಹಾಕ ಬೇಕಿತ್ತು. “ ನಮ್ಮನ್ನು ಒಟ್ಟಿಗೆ ಕೂಡಬೇಡಿ !” ಎಂದವರು ಕಿರುಚುತ್ತಿದ್ದುದು ಜೆಂಗರ್ ಕಿವಿಗೂ ಬಿತ್ತು.

ಬಹು ಹೊತ್ತು ಕಳೆದ ಮೇಲೆ, ಅವನನ್ನು ಮೆಟ್ಟಲಿಳಿಸಿ ಚಿಕ್ಕ ಕೋಣೆಯೊಂದಕ್ಕೆ ತಳ್ಳಿದರು. ಅದು ಕ್ರಿಮಿಕೀಟ ತುಂಬಿದ ತೇವದ, ಕತ್ತಲು ಕೋಣೆ. ಬಾಗಿಲಿಗೆ ಬೀಗ ಮುದ್ರೆ ಬಿತ್ತು. ಕತ್ತಲು ಕಣ್ಣಿಗೆ ಒಗ್ಗಿದೊಡನೆ, ಆ ಕಿರಿದಾದ ಸ್ಥಳವನ್ನು ಪರೀಕ್ಷಿಸತೊಡಗಿದ. ನೆಲದ ಮೇಲೆ ಹರಡಿದ ಹುಲ್ಲು, ಅದರ ಮೇಲೆ ಇಬ್ಬರು, ಮೂವರು ಮಲಗಿದ್ದರು. ಮೂರು ಕಾಲಿನ ಒಂದು ಸ್ಟೂಲು, ಮುರಿದ ಒಂದು ಮೇಜು, ಇವಿಷ್ಟೇ ಅಲ್ಲಿನ ಮರ ಮುಟ್ಟುಗಳು. ಮೈ ಸೆಡೆತಗಟ್ಟು ವಂಥ ಛಳಿ, ಕೋಣೆಯಲ್ಲಿ.

ಕೆಲ ಗಂಟೆಗಳು ಕಳೆದವು. ದಪ್ಪ ಮರದ ಬಾಗಿಲಿನಲ್ಲಿ ಕೊರೆದಿದ್ದ ಮಾತನಾಡುವ ಕಿಂಡಿಯ ಮೂಲಕ ಇದ್ದಕ್ಕಿದ್ದಂತೆ, ಬೆಳಕು ಚೆಲ್ಲಿತು. ಕತ್ತೆತ್ತಿದ. ಹೊತ್ತಿಸಿದ ಮೇಣದ ಬತ್ತಿಯನ್ನು ಹಿಡಿದ



ಕಾರಾಗೃಹದಲ್ಲಿ ಜೆಂಗರ್

ಕೈಯೊಂದು, ರಂಧ್ರದ ಮೂಲಕ ತೂರಿಬಂತು. "ತಗೊ ಇದನ್ನು". ಜೈಲರಿನ ಧ್ವನಿ ಕೇಳಿಸಿತು.

ಮುಂದೇನಾದೀತೆಂದು ಚಿಂತಿಸುತ್ತ, ಜೆಂಗರ್ ಹೆದರಿಕೆಯಿಂದಲೆ ಆ ಮೇಣದ ಬತ್ತಿಯ ತುಂಡನ್ನು ಇಸಿದುಕೊಂಡ.

"ದುಡ್ಡು ಕೊಟ್ಟರೆ, ಹೋಟಲಿಂದ ಊಟ ತರಿಸಿಕೊಡುತ್ತೇನೆ" ಜೈಲರ್ ನುಡಿದ.

ಕಿಂಡಿಯ ಮೂಲಕ ಜೆಂಗರ್ ಶಿಲಿಂಗಿನ ನೋಟೊಂದನ್ನು ಚಾಚಿದ.

ಜೈಲರ್ ಮಾತು ಮುಂದುವರಿಸಿದ, "ಹುಲ್ಲನ್ನೆಲ್ಲ ಒದ್ದು ಒಲೆಗೆ ತಳ್ಳಿ ಸುಟ್ಟುಬಿಡು. ಮಲಗುವುದಕ್ಕೆ ಶುಭ್ರವಾದ ಬೇರೆ ಒಣ ಹುಲ್ಲನ್ನು ತಂದುಕೊಡುತ್ತೇನೆ. ಆದರೆ ಕಟ್ಟಡಕ್ಕೆಲ್ಲಾದರೂ ಬೆಂಕಿ ತೋರಿಸೀಯೆ." ಜೈಲರಿಗೆ ಆತನಲ್ಲಿ ನಂಬುಗೆಯಿತ್ತು, ಎನ್ನುವುದಕ್ಕೆ ಇದೊಂದು ಸೂಚನೆ. ಎಷ್ಟೋ ಜನ ಬಂದಿಗಳು ಕಟ್ಟಡಕ್ಕೆ ಬೆಂಕಿಯಿಟ್ಟಿದ್ದರು, ಆ ಮೂಲಕ ತಪ್ಪಿಸಿಕೊಂಡೂ ಇದ್ದರು.

ಜೆಂಗರ್ ಆಸಕ್ತಿಯಿಂದ ನುಡಿದ, "ನನ್ನನ್ನು ಬಂದು ನೋಡುವಂತೆ ನನ್ನ ಹೆಂಡತಿಗೆ ಹೇಳಿಕಳಿಸಬೇಕಾಗಿದೆ."

"ಅವಳಾಗಲೇ ಇಲ್ಲಿಗೆ ಬಂದಿದ್ದಾಳೆ. ಆದರೆ ನಿನ್ನನ್ನು ನೋಡಲು ಬಿಡುವಂತಿಲ್ಲ"

"ಏಕೆ?" ಜೆಂಗರ್ ಸಿಟ್ಟಿನಿಂದ ಪ್ರಶ್ನಿಸಿದ. ಪತ್ನಿಗೂ, ಕುಟುಂಬದವರಿಗೂ ಬಂಧಿಗಳನ್ನು ನೋಡಲು ಅವಕಾಶವಿದ್ದೇ ಇದೆಯೆಂಬುದು, ಅವನಿಗೆ ಗೊತ್ತಿತ್ತು.

"ನಮಗಾರೀತಿ ಆಜ್ಞೆ ಮಾಡಲಾಗಿದೆ" ಜೈಲರ್ ಉತ್ತರವಿತ್ತ. "ಹಾಗಾದರೆ, ಕಾಗದ, ಶಾಯಿ, ಲೇಖಣಿಗಳನ್ನು ಕೊಡು, ನನ್ನ ಲಾಯರಿಗೆ ಬರೆಯಬೇಕಾಗಿದೆ!" ಜೆಂಗರ್ ಒತ್ತಿ ಕೇಳಿದ.

"ಅದನ್ನು ನಾವು ಮಾಡುವಂತಿಲ್ಲ"

ಜೆಂಗರ್ ರೇಗಿದ "ತನ್ನ ಲಾಯರೊಡನೆ ವಿಚಾರವಿನಿಮಯ ಮಾಡುವ ಹಕ್ಕನ್ನು ಬಂದಿಯಿಂದ ನೀವು ಕಿತ್ತುಕೊಳ್ಳುವಂತಿಲ್ಲ!"

ಆ ಮನುಷ್ಯ ಉತ್ತರ ಕೊಡದೆ ಅಲ್ಲಿಂದ ಕಾಲ್ದೆಗೆದ.

"ನನಗೆ ಗೊತ್ತು, ಎಲ್ಲಿಂದ ಈ ಆಜ್ಞೆಗಳು ನಿನಗೆ ಬಂದಿವೆ ಎಂಬುದು!" ಜೆಂಗರ್ ಆಬ್ಬರಿಸಿದ.

ಮಹಡಿ ಮೆಟ್ಟಲುಗಳ ಮೇಲ್ತುದಿಯ ಪಕ್ಕದ ಕೋಣೆಯಲ್ಲಿ ಜೈಲರ್ ವಾಸಿಸುತ್ತಿದ್ದ. ಅಲ್ಲಿಬ್ಬರು ಸದಾ ಕಾವಲು ಕಾಯುತ್ತಿದ್ದರು. ಅವರ ಸರದಿ ಮುಗಿದೊಡನೆ ಮತ್ತಿಬ್ಬರು ಬರುತ್ತಿದ್ದರು. ನಗರ ಅಂತಹ ಆರು ಮಂದಿಯನ್ನು ಕೆಲಸಕ್ಕಿಟ್ಟುಕೊಂಡಿತ್ತು.

ಜೈಲರ ಸಂಬಳವಲ್ಲದೆ, ಬಂದಿಗಳ ಹಾಸಿಗೆಗಾಗಿ ತಿಂಗಳಿಗೆ ಆರು ಗಾಡಿ ಹೊಸ ಒಣ ಹುಲ್ಲನ್ನೂ, ತಮ್ಮ ಹೊಟ್ಟೆಗೆ ಹೊಂಚಿ ಕೊಳ್ಳಲಾರದ ಬಂದಿಗಳಿಗೆ ತಲಾ, ವಾರಕ್ಕೆ ನಾಲ್ಕು ಷಿಲ್ಲಿಂಗುಗಳ ಅನ್ನ ಭತ್ಯವನ್ನೂ ನಗರ ಒದಗಿಸುತ್ತಿತ್ತು.

ಛಳಿಗಾಲದಲ್ಲಿ ಬಂದಿಗಳೇನೂ ಸೆಡೆತುಕೊಳ್ಳುತ್ತಿರಲಿಲ್ಲ. ಕಟ್ಟಿಗೆ ಒದಗಿಸಬಲ್ಲ ಬಂಧು ಮಿತ್ರರಾರೂ, ಅವರಿಗಿಲ್ಲದಿದ್ದರೆ, ಚರ್ಚುಗಳು ಆಗಾಗ ಕನಿಕರದಿಂದ ಸೌದೆಯನ್ನು ಮುಫತ್ತಾಗಿ ಕಳಿಸುತ್ತಿದ್ದವು.

ಬಂದಿಗಳು ಜೈಲಿನಲ್ಲಿ ದೀರ್ಘಾವಧಿಯವರೆಗೆ ಇರುತ್ತಿದ್ದುದು ಅಪರೂಪ. ಕೊಲೆಗಾರರು, ದರೋಡೆಕೋರರು, ಕಳ್ಳರು, ಸುಳ್ಳು ಸೃಷ್ಟಿಗಾರರು, ತಪ್ಪಿತಸ್ಥರೆಂದು ತೀರ್ಮಾನವಾದೊಡನೆಯೇ ಗಲ್ಲಿಗೇ ರಿಸಲ್ಪಡುತ್ತಿದ್ದರು. ಗಂಡಸರಾಗಲಿ, ಹೆಂಗಸರಾಗಲಿ, ಒಂದು ತುಣುಕು ರೊಟ್ಟಿಯನ್ನು ಕದ್ದವರೂ ಕೂಡ ಬಹಿರಂಗವಾಗಿ ಛಾಟಿ ಯಿಂದ ಹೊಡೆಯಲ್ಪಡುತ್ತಿದ್ದರು.

ಎಷ್ಟೋ ಸಾರಿ ಈ ಶಿಕ್ಷೆಯೇ ಅವರ ಪ್ರಾಣಹರಣ ಮಾಡು ತ್ತಿತ್ತು. ಒಂದು ಸಮಯ ಅವರು ಬದುಕಿದರೆ ಆರು ತಿಂಗಳ ಕಾಲ ಜೈಲಿನಲ್ಲಿಟ್ಟು ಅನಂತರ ಬಿಡುಗಡೆ ಮಾಡುತ್ತಿದ್ದರು.

ಮರು ಬೆಳಿಗ್ಗೆ ಪಹರೆಯವರು ತಮ್ಮ ಬೆರಟುಗಳಿಗೆ ಕಟ್ಟಿ ಕೊಳ್ಳುವ ಗಂಟೆಯ ಧ್ವನಿ ಜೆಂಗರ್‌ಗೆ ಕೇಳಿಸಿತು. ಬಂದೀಖಾನೆಯ ಬಾಗಿಲು ತೆರೆಯಿತು. "ಮಹಡಿಯ ಮೇಲೆ ಬರಬೇಕಂತೆ." ಬಂದ ವನು ಉಚ್ಚರಿಸಿದ.

ಎರಡನೆ ಅಂತಸ್ತಿನ ಕೊಠಡಿಯೊಂದಕ್ಕೆ, ಅವನ ಜೊತೆಯಲ್ಲೇ ಇಬ್ಬರು ಪಹರೆಯವರೂ ಬಂದರು. 'ಜರ್ನಲ್' ಸಂಪಾದಕ ಅಲೆಕ್ಸಾಂಡರ್ ಮತ್ತು ಅವನ ಪಾಲುದಾರ ಸ್ಮಿತ್‌ರನ್ನು ಕಂಡೊಡನೆ ಅವನಲ್ಲಿ ಧೈರ್ಯ ಕೂಡಿಕೊಂಡಿತು. "ಕನಕ್ಟಿಕಟ್ಟಿನ ವ್ಯಾಸ್ಟಿಫ್ (ವಿಜಾತಿ ನಾಯಿ)" ಎಂಬ ಹೆಸರು ತಳೆದ, ಸ್ಮಿತ್ತಿಗೆ ಹೆದರುತ್ತಿದ್ದ, ಗವರ್ನರ್ ಪಕ್ಷವೇ ಅವನನ್ನು ಕರೆಸಿತ್ತು. ಸ್ಮಿತ್ ಮತ್ತು ಅಲೆಕ್ಸಾಂಡರು ಗಳು ಸಮಗ್ರವಸಾಹತಿನಲ್ಲೇ ಅತ್ಯುತ್ತಮ ನ್ಯಾಯವಾದಿಗಳೆಂಬ ಪ್ರಖ್ಯಾತಿ ಪಡೆದವರು.

"ಸತಿ ಜೆಂಗರ್ ಈ ಸುದ್ದಿ ಹೇಳಿಕಳಿಸಿದಳು" ಎಂದ ಅಲೆಕ್ಸಾಂಡರ್. "ನಾನು ಊರಲ್ಲಿರಲಿಲ್ಲ, ಆದರೆ ತಿಳಿದೊಡನೆಯೇ ಸಾಧ್ಯವಿದ್ದಷ್ಟು ಬೇಗ ಬಂದೆ."

"ನೀನು ಧೈರ್ಯಶಾಲಿ ಜೆಂಗರ್." ಸ್ಮಿತ್, ಜೆಂಗರನ ಕೈಯನ್ನು ಹಿಡಿದು, ಅವನ ಕಣ್ಣುಗಳನ್ನೇ ಎವೆಯಿಕ್ಕದೆ ನೋಡುತ್ತ ನುಡಿದ. "ನಿನ್ನ ಪತ್ರಿಕೆಗಳನ್ನು ಬಹಿರಂಗವಾಗಿ ಸುಟ್ಟು ಹಾಕಿದ ಮೇಲೂ, ಲೇಖಕರಾದ ನಮ್ಮ ಹೆಸರುಗಳನ್ನು ತಿಳಿಸಲು ನಿರಾಕರಿಸಿದೆ ಎಂಬುದನ್ನು ಕೇಳಿದೆವು. ಬೆನ್ನೆಲುಬು ಬಲವಾಗಿರುವ ಮನುಷ್ಯನೆಂದರೆ ನನಗಭಿಮಾನ. ನಿನಗೆ ಸಹಾಯ ಮಾಡಲೆಂದೇ ನಾವಿಲ್ಲಿಗೆ ಬಂದಿದ್ದೇವೆ."

ಮುದ್ರಕ ಆಕ್ಷೇಪಣೆಯೆತ್ತಿದ: "ಒಬ್ಬ ಲಾಯರಿಗೆ ಕೊಡುವಷ್ಟು ಹಣವೇ ನನ್ನಲ್ಲಿಲ್ಲ. ಇನ್ನಿಬ್ಬರಿಗೆಲ್ಲಿಂದ ಬಂದೀತು!"

ಪಾಪ್ಯುಲರ್ ಪಾರ್ಟಿಯ ನಾಯಕ ಅಲೆಕ್ಸಾಂಡರ್ ಮುಗುಳು ನಕ್ಕ. "ದುಡ್ಡಿನ ಪ್ರಸ್ತಾಪ ಬೇಡ ಗೆಳೆಯ. ಇದು ನಮ್ಮ ಹೋರಾಟ. ನೀನು ಸೋತರೆ ನಾವೆಲ್ಲ ಆ ಪ್ರಜಾಪೀಡಕನ ಅಡಿಯಾಳುಗಳಾಗಬೇಕಾದೀತು. ಈಗಾಗಲೇ ನ್ಯಾಯಮೂರ್ತಿ ನಿನ್ನ ವಿರುದ್ಧ ನಿರ್ಣಯಿಸಿರುವುದರಿಂದ ನಾವೇನೂ ಮಾಡುವಂತಿಲ್ಲ. ಆದರೆ ದಬ್ಬಾಳಿಕೆಗೆ ತುತ್ತಾಗಿ, ಈ ಕೋರ್ಟಿನ ಶ್ರೇಷ್ಠ ನ್ಯಾಯಮೂರ್ತಿಯ ಸ್ಥಾನದಿಂದ ವಜಾ ಮಾಡಲ್ಪಟ್ಟ, ಮಾಜಿ ನ್ಯಾಯಮೂರ್ತಿ ನಮ್ಮ ಗೆಳೆಯ

ಮಾರಿಸ್, ಇಂಗ್ಲೆಂಡಿಗೆ ಪ್ರಯಾಣ ಹೊರಟಿದ್ದಾರೆ. ಅವರು ನಮ್ಮ ಮನವಿಯೊಂದನ್ನು ಖುದ್ದಾಗಿ ಇಂಗ್ಲೆಂಡಿನ ಅಧಿಕಾರಿಗಳಿಗೆ ಕೊಡುತ್ತಾರೆ. ಆ ಅಧಿಕಾರಿಗಳಿಗೆ ಮನಸ್ಸು ಬಂದರೆ, ಅವರು ಗವರ್ನರ್ ಕಾಸ್ಬಿಗೆ ಆಜ್ಞೆ ಕಳಿಸಬಹುದು. ಹಿಂದೊಮ್ಮೆ ಮಾರಿಸ್ ಲಂಡನ್ನಿಗೆ ಹೋಗಿ, ಸದ್ಗುಣಿ ರಾಣಿ ಆನ್‌ಗೆ, ಗವರ್ನರ್ ಕಾರ್ನ್‌ಬರಿ ವಿರುದ್ಧ ಅರ್ಜಿಯೊಂದನ್ನು ಒಪ್ಪಿಸಿದಾಗ, ಆ ಗವರ್ನರ್ ಇದೇ ಜೈಲಿನಲ್ಲಿ ಒಂದು ವರ್ಷ ಶಿಕ್ಷೆ ಅನುಭವಿಸಬೇಕಾಯಿತು. ಆದರೆ ಇಂದಿನ ದೊರೆಯಿಂದ ಅಷ್ಟು ಬೇಗ ಆಜ್ಞೆ ದೊರೆವ ಸಂಬವವಿಲ್ಲ. ಅಷ್ಟು ಮೇಧಾಶಕ್ತಿ ರಾಜನದು!—ಅಲೆಕ್ಸಾಂಡರ್ ಸ್ವಲ್ಪ ಕೆಮ್ಮಿ ಮುಂದುವರೆದ. "ಆದರೂ ಒಳ್ಳೆಯದಾದೀತೆಂದು ನಿರೀಕ್ಷಿಸಬಹುದು. ಈ ಮಧ್ಯೆ ನಿನಗೆ ಸಹಾಯ ಮಾಡಲು ನಮಗೆ ಅಧಿಕಾರ ನೀಡುವ ಈ ಪತ್ರಕ್ಕೆ ನೀನು ಸಹಿ ಹಾಕಿದರೆ ಸ್ಮಿತ್ ಮತ್ತು ನಾನು ಹೇಬಸ್ ಕಾರ್ಪಸ್ ರಿಟ್ ಪಡೆದು, ಜಾಮೀನಿನ ಮೇಲೆ ನೀನು ಮನೆಗೆ ಮರಳುವಂತೆ ಮಾಡುತ್ತೇವೆ."

ನಡಗುವ ಕೈಯಿಂದ ಜೆಂಗರ್ ಸಹಿ ಹಾಕಿದ. ಅನಂತರ ಅವನನ್ನು ಬಂಧನದ ಕೊಠಡಿಗೆ ಸರಕ್ಕನೆ ಕರೆದೊಯ್ದರು.

ಎರಡು ದಿನಗಳ ನಂತರ ಮತ್ತೆ ತನ್ನ ನ್ಯಾಯವಾದಿಗಳನ್ನು ಭೇಟಿ ಮಾಡಲು, ಅವನನ್ನು ಉಪ್ಪರಿಗೆಗೆ ಕರೆದೊಯ್ಯಲಾಯಿತು.

ಸ್ಮಿತ್ ವಿವರಿಸಿದ, "ನಾನು ಹೇಳುವುದನ್ನು ಅರ್ಥ ಮಾಡಿಕೋ. ಇಲ್ಲಿ ನಡೆಯಲಿರುವ ವಿಚಾರಣೆ, ಕೇವಲ ಒಬ್ಬ ಮುದ್ರಕನದಲ್ಲ. ಅಮೆರಿಕನ್ನರು ಕಾನೂನು ಪಾಲಕ ಗವರ್ನರುಗಳ ಅಧೀನದಲ್ಲಿ ಸ್ವಾತಂತ್ರ್ಯದಿಂದ ಬಾಳಬೇಕೇ ಅಥವಾ ಕಾನೂನು ಉಲ್ಲಂಘಿಸುವ ಗವರ್ನರುಗಳ ಅಧೀನದಲ್ಲಿ ಗುಲಾಮರಂತೆ ಬಾಳಬೇಕೇ, ಎಂಬುದನ್ನು ಈ ವಿಚಾರಣೆ ನಿರ್ಣಯಿಸಲಿದೆ."

ಬಂಧನದ ನಂತರ ಮೊಟ್ಟಮೊದಲ ಬಾರಿಗೆ ಜೆಂಗರ್ ಸ್ವಲ್ಪ ನಕ್ಕ. ಖಡಾಖಡಿ ಹೋರಾಟ ಅವನಿಗೆ ಪ್ರಿಯ. ಇಬ್ಬರು ಪ್ರಬಲ ಮಿತ್ರರು ತನ್ನ ಕಡೆ ಇದಾರೆಂಬುದು, ಅವನಲ್ಲಿ ಉತ್ಸಾಹ ತುಂಬಿತು. "ಒಳ್ಳೆಯದು ಇತರರಿಗೂ ನನ್ನಿಂದ ಸಹಾಯವಾಗುವುದಾದರೆ,

ನಾನಿಷ್ಟೂ ಚಿಂತಿಸುವುದಿಲ್ಲ" ಎಂದು ನಿಧಾನವಾಗಿ ಉತ್ತರಿಸಿದ.

ಮೂವರೂ ಜೊತೆಯಾಗಿ ಕೋರ್ಟಿಗೆ ಕಾಲಿಟ್ಟರು. ಪ್ರೇಕ್ಷಕರಾಗಿಯೂ, ಗಾಭರಿಕಾರಕ ಘಟನೆಗಳ ಅರ್ಥ ತಿಳಿಯುವ ಸಲುವಾಗಿಯೂ ಆಸಕ್ತಿ ಕುತೂಹಲಗಳಿಂದ ಬಂದಿದ್ದ ಜನರಿಂದ ಕೋರ್ಟ್ ಪ್ರಾಂಗಣ ಅರ್ಧ ತುಂಬಿತ್ತು. ಕೋರ್ಟ್ ಪಕ್ಷದ ನಾಯಕ, ನ್ಯಾಯಮೂರ್ತಿ ಡಿಲಾನ್ಸೆ ಒಳಬಂದು, ತನ್ನ ಸ್ಥಾನದಲ್ಲಿ ಕುಳಿತ. ಸೊಗಸಾದ ಉಡುಪನ್ನೂ ವಂಕಿ ವಂಕಿಯಾಗಿ ಇಳಿಬಿದ್ದಿದ್ದ ರೇಷ್ಮೆ ಟೋಫನ್ (ವಿಗ್)ನನ್ನೂ ಧರಿಸಿ ಠೀವಿಯನ್ನು ಪ್ರದರ್ಶಿಸುತ್ತಿದ್ದ ಡಿಲಾನ್ಸೆ ಮುಖದಲ್ಲಿ ಸ್ವಲ್ಪ ಕಳವಳವೂ ಇದ್ದಂತೆ ಭಾಸವಾಯಿತು.

ಹೆಚ್ಚು ಉದ್ದವಿಲ್ಲದ, ಹೊಸ, ಕುದುರೆ ಬಾಲದ ಟೋಫನ್ನನ್ನು (ವಿಗ್) ಎಂದಿಗಿಂತ ಇನ್ನೂ ನಯವಾಗಿದ್ದ ಕೋಟನ್ನು ಧರಿಸಿದ್ದ ಅಲೆಕ್ಸಾಂಡರ್, "ವಿನಾಯಿತಿ" ಎಂದು ಕರೆವ ಪತ್ರವನ್ನು ನ್ಯಾಯಮೂರ್ತಿಯ ಕೈಗಿತ್ತ. ರಾಜಪ್ರತಿನಿಧಿ ಮಂಡಲದಿಂದ ಬಂದ ಆಜ್ಞೆಯ ಮೇಲೆ ಜೆಂಗರ್‌ನನ್ನು ಬಂಧಿಸಿರುವುದು ಅಕ್ರಮ ಎಂದು ಅದನ್ನು ಅವನು ತಿಳಿಸಿದ್ದ. "ನ್ಯಾಯ ಸಮ್ಮತವಾದ ಜಾಮೀನಿನ ಮೇಲೆ ಬಂಧಿತನನ್ನು ಬಿಡುಗಡೆ ಮಾಡಬೇಕೆಂದು ಕೇಳುತ್ತೇನೆ" ಎಂದೂ ನುಡಿದ.

ಆ ಅರ್ಜಿಯನ್ನು ಓದುತ್ತಿದ್ದಂತೆಯೇ ನ್ಯಾಯಮೂರ್ತಿ ಡಿಲಾನ್ಸೆಯ ಮುಖದ ಬಣ್ಣ ಇಳಿದು ಹೋಯಿತು; ಔಡು ಕಚ್ಚಿತು. ಅವನ ಬಾಯಿಂದ ಬಂದ ಮಾತುಗಳು ಇಷ್ಟೆ: "ಈ ವಿನಾಯಿತಿ ಅರ್ಜಿಯನ್ನೂ, ಜಾಮೀನು ಸೂಚನೆಯನ್ನೂ ಶನಿವಾರ ಮಧ್ಯಾಹ್ನ ವಾದವಿವಾದಕ್ಕೆ ತೆಗೆದುಕೊಳ್ಳಬಹುದು."

ಜೆಂಗರ್ ಮತ್ತು ಅವನ ನ್ಯಾಯವಾದಿಗಳ ನಡುವೆ ಪಿಸುಮಾತಿನ ಶೀಘ್ರ ವಿಚಾರ ವಿನಿಮಯ ನಡೆಯಿತು.

ಮಾಮೂಲಿನಂತೆ ಸಮ್ಮೋಹಕ ಧಾಟಿಯಲ್ಲಿ ಸ್ಮಿತ್ ಮುಂದಕ್ಕೆ ಹೆಜ್ಜೆ ಇಟ್ಟ "ಮಹಾಸ್ವಾಮಿ, ಜೈಲಿನಲ್ಲಿ ಬಂಧಿತನಾದಾಗಿನಿಂದ ವಿಪರೀತ ನಿರ್ಬಂಧಕ್ಕೆ ಒಳಗಾಗಿದೇನೆಂದು, ನನ್ನ ಕಕ್ಷಿ ದೂರಿಟ್ಟಿದ್ದಾನೆ;

ಕಾಗದ, ಮಸಿ, ಲೇಖಣಿಗಳನ್ನು ಹೊಂದುವ, ಪತ್ನಿ, ಸ್ನೇಹಿತರು, ತಾನು ವಾದ್ಯಗಾರನಾಗಿದ್ದ ಚರ್ಚಿನ ಬೋಧಕ ಅಥವಾ ಇನ್ನಾರೊಡನೆಯಾದರೂ ಮಾತನಾಡುವ ಸಾಮಾನ್ಯವಾದ ಅವಕಾಶವಿರುವ ಹಕ್ಕುಗಳನ್ನು ಕೂಡ ಅವನಿಗೆ ನಿರಾಕರಿಸಲಾಗಿದೆ. ಈ ರಹಸ್ಯ ಕ್ರಮಗಳಿಗೆ ಆಜ್ಞೆ ಮಾಡಿದವರಾರು ಎಂದು ಕೇಳ ಬಯಸುತ್ತೇನೆ? ಈ ಕೋರ್ಟೇ ಆ ರೀತಿ ಆಜ್ಞಾಪಿಸಿದೆಯೆ? ಅಥವಾ ಈ ಕೋರ್ಟಿನ ಅಧಿಕಾರವನ್ನು ಅಕ್ರಮವಾಗಿ ಉಲ್ಲಂಘಿಸಿ ಬೇರೆ ಅಧಿಕಾರಿಗಳಾರಾದರೂ ಆ ರೀತಿ ಆಜ್ಞೆ ಮಾಡಿದಾರೆಯೆ? ಈ ಕೋರ್ಟಿದ ಉದ್ದೇಶ—?"

ರೇಗಿದ್ದ ನ್ಯಾಯವಾದಿಯನ್ನೂ, ಸಿಟ್ಟೇರಿದ್ದ ಕಾರ್ಮಿಕ ಪ್ರೇಕ್ಷಕ ಗಣವನ್ನೂ, ಅವರಲ್ಲಿ ಕೆಲವರಾಗಲೇ ರೊಚ್ಚಿಗೆದ್ದು ಆಸನಗಳಿಂದ ಏಳುತ್ತಿದ್ದುದನ್ನೂ, ಕಳವಳದಿಂದ ಗಮನಿಸಿದ ನ್ಯಾಯಮೂರ್ತಿ, ಈ ಅಪಾಯಕರವಾದ ಪ್ರಶ್ನೆಗಳ ಸುರಿಮಳೆಗೆ ತಡೆ ಹಾಕುವ ಉದ್ದೇಶದಿಂದ ಆತುರವಾಗಿ ಬಾಯಿಹಾಕಿ, "ನಿಮ್ಮ ದೂರಿನ ಅರ್ಥವಾಗಿದೆ, ಅಟಾರ್ನಿ. ಯಾವ ಬಂದಿಯೇ ಆಗಲಿ ಬಾಹ್ಯ ಸಂಪರ್ಕವಿಲ್ಲದೆ ಪ್ರತ್ಯೇಕವಾಗಿ ಇಡಲ್ಪಡುವುದು, ಈ ಕೋರ್ಟಿಗೆ ಸಮ್ಮತವಲ್ಲ ಎಂಬುದನ್ನು ಷರೀಫ್, ದಯೆಯಿಟ್ಟು ಗಮನಿಸಬೇಕು. ಈ ವಿಚಾರಣೆಯನ್ನು ಮುಂದಕ್ಕೆ ಹಾಕಲಾಗಿದೆ" ಎಂದ.

ನಾತ ಬಡಿವ, ತೇವದ ಕೋಣೆಗೆ ಜೆಂಗರ್‌ನನ್ನು ವಾಪಸ್ ಕರೆದೊಯ್ದರು.

ಆ ಮಧ್ಯಾಹ್ನ ಬಾಗಿಲು ಬಡಿದ ಶಬ್ದ ಕೇಳಿ ಬಂತು. ಹಿಂದೆಯೇ "ಪೀಟರ್!" ಎಂದು ಕರೆವ ಹೆಣ್ಣು ಧ್ವನಿ.

ಬಾಗಿಲಿಗೆ ಬಂದು, ತಂತಿಯ ಮೂಲಕ ಜೆಂಗರ್ ಇಣುಕಿದ. ತನ್ನ ಪತ್ನಿ ಮತ್ತು ಸಾಕಷ್ಟು ಎತ್ತರವಾಗಿ ಬೆಳೆದ ಮಗ ಜಾರ್ಜ್ ಮೆಟ್ಟಲುಗಳ ಕಡೆಯಿಂದ ಬಂದ ಬೆಳಕಿನಲ್ಲಿ ಕಾಣಿಸಿದರು.

ತೀವ್ರ ಆಸಕ್ತಿಯಿಂದ ಉಳಿದ ಮಕ್ಕಳ ಯೋಗಕ್ಷೇಮವನ್ನು ವಿಚಾರಿಸಿದ. ಆಹಾರ, ಸೌದೆ, ರಗ್ ಮತ್ತು ಬೆಚ್ಚನೆಯ ಕೋಟುಗಳನ್ನು ಜಾರ್ಜ್ ತಂದುಕೊಡಲು ಏರ್ಪಾಡುಮಾಡಿದ.

"'ಜರ್ನಲ್'ದೇ ನನಗೆ ಚಿಂತೆ. ಮುಂದಿನ ಸಂಚಿಕೆ ಹೊರ ತರುವ ಹೊತ್ತಿಗೆ ನಾನು ಮನೆಗೆ ಬರಲಾರೆ. ಶನಿವಾರ ಸಂಜೆಯ ವರೆಗೂ ಬಿಡುಗಡೆಗೆ ಅವಕಾಶವಿಲ್ಲ. ಅನಂತರವೂ ಹೇಳಲಾರೆ. ಜಾಮೀನಿಗೆ ಹಣವನ್ನೆಲ್ಲಿಂದ ತರಲಿ? ನನ್ನ ಬಂಧನದ ಮರುದಿನ 'ಜರ್ನಲ್' ಪ್ರಕಟವಾಗಲಿಲ್ಲ ಅಲ್ಲವೇ?"

"ಇಲ್ಲ" ಎಂದಳು ಕ್ಯಾಥರೀನ್, "ನನ್ನ ಯೋಚನೆಯೆಲ್ಲ ನ್ಯಾಯವಾದಿಗಳಿಗೆ ಸುದ್ದಿ ಮುಟ್ಟಿಸುವುದು ಮತ್ತು ನಿನ್ನನ್ನು ನೋಡುವುದು – ಇಷ್ಟಕ್ಕೇ ಮೀಸಲಾಗಿತ್ತು. ನೆನ್ನೆಯಿಂದ ಪತ್ರಿಕೆಯ ವಿಷಯ ಆಲೋಚಿಸುತ್ತಿದ್ದೇನೆ. ನನ್ನ ಪಕ್ಕದಲ್ಲಿ ನಿಂತಿರುವ ಈ ಗಟ್ಟಿ ಜಾರ್ಜ್ ಮತ್ತು ನಮಗೆ ವಿಧೇಯನಾಗಿರುವುದಾಗಿ ಸಾರಿ ಹೇಳಿರುವ ಕೆಲಸಗಾರ, ಈ ಇಬ್ಬರ ಸಹಾಯದಿಂದ, ನೀನು ಈ ಕಿಂಡಿಯ ಮೂಲಕ ನಿರ್ದೇಶಗಳನ್ನು ಕೊಡವಿಯಾದರೆ, ಪತ್ರಿಕೆಯ ಪ್ರಕಟನೆ ಯನ್ನು ಮುಂದುವರಿಸಲು ಸಾಧ್ಯವಾದೀತೆಂದು ನಂಬುತ್ತೇನೆ."

ಜೆಂಗರ್ ಹರ್ಷಧ್ವನಿ ಮಾಡಿದ. "ಜೈ, ಗವರ್ನರ್ ಗುಂಪಿನ ವರು ನಮ್ಮ ಬಾಯ್ಮುಚ್ಚಲಾರರು!"

"ಅವರು ಬೆಚ್ಚಿ ಬೆರಗಾದಾರು!" ಕ್ಯಾಥರೀನ್ ಪ್ರತಿಯಾಗಿ ನುಡಿದಳು.

"ಅಂದರೆ, ನಾವು ಉಳಿದೆಲ್ಲ ಕೆಲಸಗಳ ಕೈ ಬಿಡಬೇಕಾಗುತ್ತದೆ. ನೀನು ಬಿಡುಗಡೆಯಾಗುವವರೆಗೆ, ನಗರ ಘೋಷಣೆಯ ಮುದ್ರಿತ ಹಾಳೆಗಳನ್ನು ಒಂದು ಬೀರುವಿನಲ್ಲಿ ಅಡಕ ಮಾಡಿಡುತ್ತೇನೆ. ಆದರೆ 'ಜರ್ನಲ್' ಮಾತ್ರಾ ಎಂದಿನಂತೆಯೇ ಜಾಜ್ವಲ್ಯಮಾನವಾಗಿ ಪ್ರಕಾಶಿಸುವುದು." ಎಂದಳು.

"ಶಾಯಿ, ಕಾಗದ, ಲೇಖಣಿ ತಾ!" ಜೆಂಗರ್ ಒತ್ತಿನುಡಿದ. "ನಾನೇ ಲೇಖನ ಬರೆಯುತ್ತೇನೆ."

"ತಂದು ಕೊಡುತ್ತೇನೆ" ಆಕೆ ಭರವಸೆಯಿತ್ತಳು. "ಜೈಲರೂ ಈಗ ಸಮ್ಮತಿಸಿದಾನೆ"

# ಅಧ್ಯಾಯ ೨೩

## ಜೆಂಗರ್ ವಿಮೋಚನೆಗೆ ಹೋರಾಟ

ತನ್ನ ನ್ಯಾಯವಾದಿಗಳೊಡನೆ ಮಾತನಾಡಲು, ಶನಿವಾರ ಮಧ್ಯಾಹ್ನ ಜೆಂಗರ್‌ನನ್ನು ಮೇಲಂತಸ್ತಿಗೆ ಕರೆತರಲಾಯಿತು. ಅಲ್ಲಿ ಕ್ಯಾಥರೀನ್ ಕೂಡ ಇದ್ದುದನ್ನು ಕಂಡು ಸಂತೋಷಿಸಿದ. ಬಳಲಿಕೆ ಹಾಗೂ ಕಳವಳ ಮುಖದಲ್ಲಿ ಸ್ಪಷ್ಟವಾಗಿದ್ದರೂ, ದೃಢತೆ ಅವಳನ್ನ ಗಲಿರಲಿಲ್ಲ. ಕಣ್ಣುಗಳು ಅವನನ್ನೇ ದಿಟ್ಟಿಸಿದವು.

ಸ್ಮಿತ್, ಎದೆಯುರಳಿಸಿ ನುಡಿದ, “ ಜಾಮೀನಿಗಾಗಿ ಎಷ್ಟು ಹಣ ಕೊಡಬೇಕೆಂದು ನ್ಯಾಯಮೂರ್ತಿ ಕೇಳಬಹುದೋ ನಾವರಿಯೆವು. ಗವರ್ನರ್ ಪಕ್ಷದ ನಾಯಕನಾದ ಅವನು, ನಿನ್ನ ಪತ್ರಿಕೆಯ ಪ್ರಕಟನೆಯನ್ನು ನಿಲ್ಲಿಸಿಬಿಡುವ ಉದ್ದೇಶದಿಂದ, ನಿನ್ನನ್ನು ಬಂಧನದಲ್ಲಿ ಉಳಿಸಬೇಕೆಂದೇ ಬಯಸುವುದು ಸಹಜ. ನೀನೆಷ್ಟು ಠೇವಣಿ ಕೊಡಬಲ್ಲೆ?”

ಜೆಂಗರ್ ಪತ್ನಿಯ ಕಡೆ ತಿರುಗಿದ. ಇಬ್ಬರೂ ಸೇರಿ ಲೆಖ್ಖ ಹಾಕಿದರು. ಕ್ಯಾಥರೀನ್ ಹೇಳಿದಳು, “ ನಾವು ಕೂಡಿಟ್ಟಿರುವ ಎಲ್ಲಾ ಹಣವೂ ಸೇರಿದರೆ ಸುಮಾರು ೩೮ ಪೌಂಡುಗಳಾಗಬಹುದು.”

ಸ್ಮಿತ್ ಹೇಳಿಕೆ ಸಿದ್ಧಗೊಳಿಸಿದ : “ ಜಾನ್ ಪೀಟರ್ ಜೆಂಗರ್ ಆದ ನಾನು, ನನ್ನ ಉದ್ಯಮದ ಉಪಕರಣಗಳು ಮತ್ತು ಬಟ್ಟೆ ಬರೆಗಳನ್ನು ಬಿಟ್ಟು, ೪೦ ಪೌಂಡುಗಳಷ್ಟೂ ಹಣವುಳ್ಳವನಲ್ಲ ”

ಜೆಂಗರ್ ಓದಿದ. “ ಇದು ಸತ್ಯಾಂಶ ” ಎಂದ.

“ ಹಾಗಾದರೆ ದಯವಿಟ್ಟು ಸಹಿ ಹಾಕು.” ನ್ಯಾಯವಾದಿ ವಿವರಿಸಿದ. “ ನ್ಯಾಯಮೂರ್ತಿ ಹೆಚ್ಚಿನ ಠೇವಣಿ ಕೇಳಿದರೆ – ನೂರು ಪೌಂಡು ಕೇಳಿದರೂ – ನಿನ್ನ ಸ್ನೇಹಿತರು ಸಾಲಕೊಟ್ಟಾರೆಂದು ನನ್ನ ನಂಬುಗೆ. ನೀನು ಪ್ರಪ್ರಥಮವಾಗಿ ಮುದ್ರಿಸಿದ ಕಿರಿಪುಸ್ತಕ

ಸಾರಿದಂತೆ, ನ್ಯೂಯಾರ್ಕ್ ಅನೇಕ ದರ ಇಳಿತಾಯಗಳನ್ನು ಅನುಭವಿಸುತ್ತಿರುವುದೊಂದೇ ಕಷ್ಟ. ನಮ್ಮ ಸ್ನೇಹಿತರಲ್ಲಿ ಅನೇಕರು ಹಡಗುಗಳ, ಮನೆಗಳ, ಭಾರಿ ಸ್ವತ್ತುಗಳ ಮಾಲಿಕರಾಗಿದ್ದರೂ, ಅವರುಗಳ ಬಳಿ ಇರುವ ನಗದು ಅತ್ಯಲ್ಪ. ಅಲ್ಲದೆ ಸಾಲ ಪಡೆಯೋಣವೆಂದರೆ ಲಂಡನ್ನಿನಲ್ಲಿರುವಂತೆ, ನ್ಯೂಯಾರ್ಕಿನಲ್ಲಿ ಬ್ಯಾಂಕು ಕೂಡ ಇಲ್ಲ"

ಜೆಂಗರ್ ಜೋರಾಗಿ ತಲೆಯಾಡಿಸಿದ. "ನಾನೀಗಾಗಲೆ ಆ ಜನಕ್ಕೆಲ್ಲ ಋಣಿ. ಅವರಿಂದ ಇನ್ನೂ ಹೆಚ್ಚು ಸಾಲಪಡೆವ ಯೋಚನೆ ಮಾಡಲಾರೆ."

"ಕಾನೂನಿನ ರೀತ್ಯ ನೀನು ಆ ರೀತಿ ಮಾಡಬೇಕಾದ ಅಗತ್ಯವೂ ಇಲ್ಲ" ಅಲೆಕ್ಸಾಂಡರ್ ಕೊನೆಮಾತು ಹೇಳಿದ. "ಹೋಗೋಣವೇನು?"

ಬಾಗಿಲ ಮೂಲಕ ಕೋರ್ಟಿಗೆ ಪ್ರವೇಶಮಾಡಿದಾಗ, ನೆರೆದಿದ್ದ ಪ್ರೇಕ್ಷಕಗಣದ ಭಾರಿ ಸಮೂಹವನ್ನು ಕಂಡು ವಿಸ್ಮಿತನಾದ. ಅನೇಕ ನೂರು ಮಂದಿ ನಿವಾಸಿಗಳು ಸೇರಿದ್ದಿತೆಂದು ಐತಿಹಾಸಿಕ ದಾಖಲೆಗಳು ಹೇಳುತ್ತವೆ. ಎಲ್ಲ ಗೋಡೆಗಳ ಸುತ್ತ, ಒತ್ತಾಗಿ ನಿಂತಿದ್ದ, ಹೊರತೂ, ಅಷ್ಟೊಂದು ಜನ ಸೇರಿದ್ದರೆಂದು ನಂಬಲು ಸಾಧ್ಯವೇ ಇಲ್ಲ.

ಇಬ್ಬರು ನ್ಯಾಯಮೂರ್ತಿಗಳೂ ಆಸೀನರಾದಮೇಲೆ, ಡಿಲಾನ್ಸೆ ಘೋಷಿಸಿದ: "ಬಂದಿಯನ್ನು ಜಾಮೀನಿನ ಮೇಲೆ ಬಿಡಬಹುದೇ ಹೇಗೆ ಎಂಬ ಬಗೆಗೆ ಕೋರ್ಟು ವಾದವಿವಾದಗಳನ್ನು ಕೇಳುವುದು."

ಜೆಂಗರ್ ೪೦ ಪೌಂಡುಗಳಷ್ಟು ಹಣವಂತನಲ್ಲ ಎಂದು ಸಾರುವ ಅವನ ಹೇಳಿಕೆಯನ್ನು ಅಲೆಕ್ಸಾಂಡರ್, ಡಿಲಾನ್ಸೆ ಕೈಗಿತ್ತ.

ಶ್ರೇಷ್ಠ ನ್ಯಾಯಮೂರ್ತಿ ಅದನ್ನೋದಿ, ಗುರುಗುಟ್ಟಿದ "ಇದು ಏನೇನೂ ಸಾಲದು."

ಜೆಂಗರ್‌ನ ಎದೆ ಭುಜಗಳು ನಡುಗಿದವು. ಒಂದು ಕ್ಷಣ, ತಾನಿದ್ದ ಬಂದಿಖಾನೆಯ ಚಿತ್ರ ಮನಸ್ಸಿನಲ್ಲಿ ಮೂಡಿ, ಉಳಿದೆಲ್ಲವು

ಅಳಿಸಿಹೋಯಿತು. ಅದರ ತೇವ, ಛಳಿ, ಕತ್ತಲೆ ಎಲ್ಲವನ್ನೂ ಅನುಭವಿಸಿದ. ವಿಚಾರಣೆಗಾಗಿ ಕಾಯುತ್ತ, ವಾರಗಳ ಕಾಲ ತಾನು ಅದರಲ್ಲುಳಿಯಬೇಕೆ ?

ನ್ಯಾಯವಾದಿಗಳು ಜಾಮೀನು ಮೊತ್ತವನ್ನು ಕುರಿತು ವಾದಿಸಲಾರಂಭಿಸಿದರು. ಅಲೆಕ್ಸಾಂಡರ್ ಮ್ಯಾಗ್ನಕಾರ್ಟಾದಿಂದ ಆರಂಭಿಸಿ, ಎಲ್ಲಾ ಇಂಗ್ಲಿಷರಿಗೂ ನ್ಯಾಯ ಸಮ್ಮತವಾದ ಜಾಮೀನಿನ ಭರವಸೆಯನ್ನು ನೀಡುವ ಪ್ರಕರಣವನ್ನು ಉಚ್ಚರಿಸಿದ. ಪಾರ್ಲಿಮೆಂಟಿನ ಶಾಸನಗಳನ್ನು ಹೆಸರಿಸಿದ. ೧೬೮೯ರ ಹಕ್ಕುಗಳ ಮಸೂದೆಯಂತೆ "ದುಬಾರಿ ಠೇವಣಿಯನ್ನು ಎಂದೂ ಕೇಳುವಂತಿಲ್ಲ." ಎಂದೂ ಸ್ಪಷ್ಟವಾಗಿ ಘೋಷಿಸಿದ.

'ಗೆಜೆಟ್'ನಲ್ಲಿ ಅನೇಕ ಸಾರೆ ಉಲ್ಲೇಖಿತವಾಗಿದ್ದ, ಕಾನೂನು ಪುಸ್ತಕವೊಂದನ್ನು ಅಟಾರ್ನಿ ಜನರಲ್ ಬ್ರಾಡ್ಲೆ ತಿರುವಿಹಾಕುತ್ತಿರುವುದನ್ನು ಕಂಡು, ಅಲೆಕ್ಸಾಂಡರ್, ಅವನ ಬಳಿಗೆಹೋಗಿ, ವಿನಯವಾಗಿ, "ಒಂದು ನಿಮಿಷ, ನಾನದನ್ನು ನೋಡಬಹುದೆ?" ಎಂದು ಕೇಳಿದ.

ಅಟಾರ್ನಿ ಜನರಲ್ ತಲೆಯೆತ್ತಿ, ಚಕಿತನಾಗಿ, "ಅದಕ್ಕೇನು" ಎಂದು ಗೊಣಗಿದ.

ನಿರ್ದಿಷ್ಟ ಪುಟವೊಂದನ್ನು ತೆರೆದು ಅಲೆಕ್ಸಾಂಡರ್ ಗಟ್ಟಿಯಾಗಿ ಓದಿದ.

ಇಂಥ ವ್ಯವಹಾರಗಳಲ್ಲಿ, ವಿಚಾರಣೆಯ ದಿನದವರೆಗೂ, ಬಂಧಿಯ ವಿಮೋಚನೆಮಾಡಲೇಬೇಕು ಎಂದು, ತನ್ನ ನ್ಯಾಯವಾದಿ, ಸಿದ್ಧಾಂತ ಪಡಿಸಿದುದನ್ನು ಕೇಳಿ, ಜೆಂಗರ್‌ನ ಭರವಸೆಯ ಬಳ್ಳಿ ಕುಡಿಯೊಡೆಯಿತು.

ಆದರೆ ಬ್ರಾಡ್ಲೆಯ ದೊಡ್ಡ ಮುಷ್ಟಿಗಳು ಬೀಗಿದವು; ಅವನ ಔಡು ಕಚ್ಚಿತು. ಎದುರು ನ್ಯಾಯವಾದಿ, ಗವರ್ನರ್ ಪಕ್ಷದ ಪ್ರಿಯ ಪುಸ್ತಕವನ್ನೇ ತನ್ನ ವಿರುದ್ಧ ಬಳಸುತ್ತಿದ್ದಾನೆ. ಭಾರವಾಗಿ ಎದ್ದು ನಿಂತು ವಾದಿಸಿದ; ರಾಜಪ್ರತಿನಿಧಿ ಮಂಡಳದ ಆಜ್ಞೆಯಿಂದ ಬಂಧಿತ

ನಾದ, ನಿಂದನೆಮಾಡಿದ ಆರೋಪದ ಬಂದಿಯನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡಲೇಕೂಡದು. ಇನ್ನೂ ಹೆಚ್ಚಿನ ವಾದಬಲ ವನ್ನು ಮುಂದಿಡಲು ಸ್ಮಿತ್ ಎದ್ದ. ನಿಂದನೆಯ ಆರೋಪದಮೇಲೆ ಜೆಂಗರ್‌ನಂತೆ ಸುವಿಖ್ಯಾತ ಸಪ್ತ ಬಿಷಪ್‌ಗಳ ಬಂಧನವಾದಾಗ, ತಲಾ ನೂರು ಪೌಂಡುಗಳ ಜಾಮೀನಿನ ಮೇಲೆ ಅವರೆಲ್ಲರನ್ನೂ ಬಿಡ ಲಾಯಿತು. ನಲವತ್ತು ಪೌಂಡುಗಳಷ್ಟೂ ಹಣವಿಲ್ಲದ ಬಡ ಮುದ್ರಕ ನನ್ನು ಇನ್ನೂ ಕಮ್ಮಿ ಠೇವಣಿ ಪಡೆದು, ಬಿಡಬೇಕು.

ಬ್ರಾಡ್ಲೆ ಮತ್ತೆ ಎದ್ದು ನಿಂತು ಘರ್ಜಿಸಿದ: "ಅನಾಯಕತ್ವದ ಪ್ರತಿಪಾದನೆಗಳನ್ನು ನಮ್ಮ ಮಧ್ಯೆ ಪ್ರಕಟಿಸುತ್ತಿರುವ, ಕೊಳೆತು ನಾರುವ ಈ ದ್ರೋಹಿ, ಜಾರುಗಳ ಮುದ್ರಕನನ್ನು ಆರ್ಚ್ ಬಿಷಪ್ ಹಾಗೂ ಸಪ್ತಬಿಷಪ್‌ರೊಂದಿಗೆ ಹೋಲಿಸುವ ಎದೆ ಯಾರಿಗಿದ್ದೀತು !"

ಬ್ರಾಡ್ಲೆಯನ್ನು ಜಜ್ಜಿಹಾಕಬೇಕೆನ್ನಿಸಿತು ಜೆಂಗರ್‌ಗೆ. ನೆರೆದ ಗುಂಪು ಕೋಪದಿಂದ ಕೂಗುತ್ತಿದ್ದುದನ್ನೂ, ಸಿಳ್ಳುಹಾಕುತ್ತಿದ್ದುದನ್ನೂ ನಾನಾಬಗೆಯ ಶಬ್ದಮಾಡುತ್ತಿದ್ದುದನ್ನೂ ಆಲಿಸಿದ.

"ಮಾನವಿಲ್ಲದ ಬ್ರಾಡ್ಲೆ!" ಮಾತ್ತಾರೋ ಕೂಗಿದರು "ನೀನೇನು ಅಟಾರ್ನಿಯೋ ಪುಂಡನೋ ?"

ಸಮ್ಮೋಹಕ ರೀತಿಯಲ್ಲಿ ಮುಂದೆ ಬಂದ ಸ್ಮಿತ್, ಪ್ರಶ್ನೆಗಳ ಗದಾಘಾತಕ್ಕೆ ಆರಂಭಿಸಿದ. ಎದುರು ಕಕ್ಷಿಗಳು ಕೂಗಿ ಶಪಿಸುವ ವರೆಗೂ, ಸತ್ಯಾಂಶಗಳ ಸಂತತವಾದ ಪ್ರವಾಹದಲ್ಲಿ ಅವರನ್ನು ಮುಳು ಗಿಸಿದ. ಶ್ರೇಷ್ಠ ನ್ಯಾಯಾಧೀಶ ಕೂಡ ಸಿಟ್ಟನಿಂದ ವಾದ ವಿವಾದ ಗಳಲ್ಲಿ ಬಾಯಿ ಹಾಕಿ ಜೆಂಗರ್ ನ್ಯಾಯವಾದಿಗಳ ವಿರುದ್ಧ ಪಕ್ಷ ವಹಿಸಿದ. ಪ್ರೇಕ್ಷಕ ಗಣ ಬ್ರಾಡ್ಲೆ ಹಾಗೂ ಡಿಲಾನ್ಸೆಯ ಕಡೆ ಕಿರುಚಿ, "ನಾಚಿಕೆಗೇಡು! ಅವಮಾನ!" ಎಂದು ಕೂಗಿತು.

ವಿಮೋಚನೆಯ ಅವಕಾಶ ತನಗೆ ತಪ್ಪಿಹೋಯಿತೆಂದು ಜೆಂಗರ್ ಬೆದರಿದ. ಅವನನ್ನು ಜೈಲಿಗೆ ಸಾಗಿಸಬೇಕೆಂಬುದೇ, ಡಿಲಾನ್ಸೆಯ ಸಹಜ ಅಪೇಕ್ಷೆಯಾಗಿತ್ತು. ಮತ್ತೆ ತೇವದ, ಕತ್ತಲೆಯ ಏಕಾಂತದ ಕೋಣೆಯ ಚಿತ್ರ ಸ್ಫುರಿಸಿತು.

ಶ್ರೇಷ್ಠ ನ್ಯಾಯಮೂರ್ತಿ ತನ್ನ ಕೈ ಕೊಡತಿಯನ್ನೊಮ್ಮೆ ಮೇಜಿನ ಮೇಲೆ ಬಡಿದು "ಶಿಸ್ತು!, ಕೋರ್ಟಿನಲ್ಲಿ ಶಿಸ್ತು!" ಎಂದು ಅಬ್ಬರಿಸಿದ. ಅಸಹ್ಯ ಹಾಗೂ ಹೆದರಿಕೆಗಳ ಸಮ್ಮಿಶ್ರ ಭಾವನೆಯಿಂದ ಗದ್ದಲ ಮಾಡುತ್ತಿದ್ದ ಜನಗುಂಪನ್ನು ತೀಕ್ಷ್ಣವಾಗಿ ದಿಟ್ಟಿಸಿದ. ಸಾಕಷ್ಟು ಶಾಂತತೆ ನೆಲಸಿದೊಡನೆಯೇ, ಔಡು ಕಚ್ಚಿ, ಕೋಪ ಧ್ವನಿಯಲ್ಲಿ ಘೋಷಿಸಿದ, "ಮೊಕದ್ದಮೆಯ ಸಕಲಾಂಶಗಳನ್ನು ಸಾಕಷ್ಟು ಪರಿಶೀಲಿಸಿದ ನಂತರ, ಬಂಧಿತನನ್ನು, ನಾಲ್ಕು ನೂರು ಪೌಂಡುಗಳ ಸ್ವಂತ ಜಾಮೀನು ಮತ್ತು ತಲಾ ಇನ್ನೂರು ಪೌಂಡುಗಳನ್ನು ಕೊಡುವ ಇಬ್ಬರು ಜಾಮೀನುದಾರರ ಭರವಸೆಗಳ ಮೇಲೆ ಬಿಡುಗಡೆ ಮಾಡಬಹುದೆಂದು ಆಜ್ಞೆ ಮಾಡಲಾಗಿದೆ. ಕೇವಣಿಗಳು ಸಂದಾಯವಾಗುವವರೆಗೂ ಬಂಧಿತನು ಜೈಲಿನಲ್ಲಿರಬೇಕು."

ನಿರೀಕ್ಷೆ ಮುಗಿಯಿತು. ಸುತ್ತಲ ಗದ್ದಲವನ್ನೂ ಗಮನಿಸದೆ, ಜೆಂಗರ್ ಕುರ್ಚಿಯಲ್ಲೊರಗಿದ.

ಪ್ರೇಕ್ಷಕರ ಕಡೆಯಿಂದ ಭಾರಿ ಗದ್ದಲ, ಕೂಗು, ಕಾಲು ಕುಟ್ಟುವ ಸಪ್ಪಳ ಕೇಳಿಬಂದಿದ್ದರಿಂದ, ನ್ಯಾಯಮೂರ್ತಿಗಳು ಆತುರ ಆತುರವಾಗಿ ಸಾಗಿಹೋದರು.

ಜೆಂಗರ್ ಕೈ ಬೆರಳುಗಳಿಂದ ಒಟ್ಟು ಮೊತ್ತದ ಲೆಖ್ಖ ಹಾಕಿದ. ೮೦೦ ಪೌಂಡು! ತಾನು ಬಾಡಿಗೆಗೆ ಪಡೆದಿದ್ದ, ಮಳಿಗೆ ಮತ್ತು ಮನೆಗಳನ್ನು ಮಾರಿದರೂ ಅಷ್ಟು ದುಡ್ಡು ದೊರಕಲಾರದು. ತನ್ನ ಅಭಿಮಾನಿಗಳು ಸಾಲ ಕೊಡಲು ಮುಂದೆ ಬಂದರೂ, ಅಷ್ಟೊಂದು ಹಣವನ್ನು ಸ್ವೀಕರಿಸುವುದು ಅವಮಾನ. ಮುದ್ರಣಯಂತ್ರ ಹಾಗೂ ಅಚ್ಚಿನ ಮೊಳೆಗಳಿಗಾಗಿ ಲ್ಯೂಯಿ ಮಾರಿಸ್, ಜ್ಯೂನಿಯರ್ ಹ್ಯಾಟು ಹಿಡಿದು ಐವತ್ತು ಪೌಂಡುಗಳನ್ನು ಸಂಗ್ರಹಿಸಿದಾಗ ಮತ್ತು ಪತ್ರಿಕೆಗಾಗಿ ಇನ್ನಷ್ಟು ಹಣವನ್ನು ಆ ಸದ್ಗೃಹಸ್ಥ ಮುಂಗಡ ಕೊಟ್ಟಾಗ, ಆ ವ್ಯವಹಾರವೆಲ್ಲ, ಜೆಂಗರ್ ಕಷ್ಟಪಟ್ಟು ದುಡಿದು ವಾಪಸ್ ಮಾಡಬಹುದೆನ್ನುವ, ವ್ಯಾಪಾರ ಸ್ವರೂಪದ್ದಾಗಿತ್ತು. ಆದರೆ ಇಂದಿನ ಅಗತ್ಯ ೮೦೦ ಪೌಂಡುಗಳು! ಅದನ್ನು ಜೆಂಗರ್

ಸ್ವೀಕರಿಸಿದರೆ, ಅದು ದಾನ ಸ್ವೀಕಾರವಾದೀತು.

"ನನಗೆ ಯಾರಾದರೂ ಸಹಾಯ ನೀಡಬಹುದು. ಆದರೆ ಅವರಿಗೆ ನಾನು ಜಾಮೀನು ನಿಂತರೆ ಎಷ್ಟು ಹಣವನ್ನು ಒದಗಿಸ ಬಲ್ಲೆನೋ ಅದರ ಹತ್ತು ಪಟ್ಟು ಹಣ ಈಗ ಬೇಕಾದ ಮೊತ್ತ. ಆದ್ದರಿಂದ ಆ ಷರತ್ತುಗಳ ಮೇಲೆ ನನಗೆ ಜಾಮೀನು ನಿಲ್ಲಿರೆಂದು ನಾನಾರನ್ನೂ ಕೇಳಲಾರೆ" ಎಂದು ಹೇಳುವಷ್ಟು ಹೊತ್ತು ಮಾತ್ರ ಜೆಂಗರ್ ವಿಚಾರವಿನಿಮಯದ ಕೊಠಡಿಯಲ್ಲಿ ತನ್ನ ನ್ಯಾಯವಾದಿ ಗಳೊಡನೆ ನಿಂತ.

"ಅಷ್ಟೊಂದು ಹಣ ಕೂಡಿಸುವುದು ಪ್ರಯಾಸವೇ ಆದರೂ ತಲಾ ಇನ್ನೂರು ಪೌಂಡು ಠೇವಣಿ ಕೊಟ್ಟು ನಿನಗೆ ಜಾಮೀನು ನಿಲ್ಲಲು ನಾನು ಮತ್ತು ಸ್ಮಿತ್ ಸಿದ್ಧರಿದ್ದೇವೆ. ನಿನ್ನ ಠೇವಣಿಗಾಗಿ ನಾಲ್ಕು ನೂರು ಪೌಂಡ್ ಸಂಗ್ರಹಿಸಲು ಸಾಧ್ಯವೇ ಎಂದು ನಿನ್ನ ಮಿತ್ರರು ಗಳನ್ನು ಕೇಳುತ್ತೇವೆ" ಎಂದು ಅಲೆಕ್ಸಾಂಡರ್ ಸಲಹೆ ಮಾಡಿದ.

"ಬೇಡ, ಬೇಡ!" ಜೆಂಗರ್ ಒತ್ತಾಯಪಡಿಸಿದ.

"ನಾನದನ್ನೆಂದೂ ಸ್ವೀಕರಿಸಲಾರೆ!". ಜೆಂಗರ್ ವಿಷಾದದಿಂದ, ಆದರೆ ಹೆಮ್ಮೆಯನ್ನು ಮಾತ್ರ ಭದ್ರವಾಗಿ ಕಾಪಾಡಿಕೊಂಡು, ತನ್ನ ಸೆರೆ ಕೊಠಡಿಗೆ ಮರಳಿದ.

——— ———

# ಅಧ್ಯಾಯ ೨೪

## ಪ್ರಥಮ ಮಹಿಳಾ ಪತ್ರಿಕಾ ಸಂಪಾದಕಿ

ಇಷ್ಟಾದರೂ ಸೋಮವಾರ ಬೆಳಿಗ್ಗೆ ಜೆಂಗರ್‌ನ ಇಬ್ಬರು ಹಿರಿಯ ಮಕ್ಕಳು 'ಜರ್ನಲ್' ಪತ್ರಿಕೆಯ ಹೊಸ ಸಂಚಿಕೆಗಳನ್ನು ಕೈಯಲ್ಲಿ ಹಿಡಿದು, ಕೂಗುತ್ತಾ ರಸ್ತೆಯಲ್ಲಿ ಬಂದಾಗ, ಗವರ್ನರ್ ಕಾಸ್ಬಿಯ ಗೆಳೆಯರು ಬೆರಗಾಗಿ ತಮ್ಮ ಹ್ಯಾಟನ್ನು ಹಿಂದಕ್ಕೆ ತಳ್ಳಿ ಕೋಪದಿಂದ ಗೊಣಗಾಡಿದರು.

ಜೆಂಗರ್ ಜೈಲಿನಿಂದ ಬರೆದ ಪತ್ರ ಪತ್ರಿಕೆಯಲ್ಲಿ ಪ್ರಥಮ ಸ್ಥಾನವನ್ನಲಂಕರಿಸಿತ್ತು.

ಪತ್ರಿಕೆಯ ಉಳಿದ ಸ್ಥಳವೆಲ್ಲ ವ್ಯವಹಾರದ ದಾಖಲೆಗಳಿಂದ ತುಂಬಿತ್ತು. ನ್ಯಾಯಮೂರ್ತಿ ಡಿಲಾನ್ಸೆ ಶ್ರೇಷ್ಠ ಜ್ಯೂರಿಮಂಡಲವನ್ನು ಉದ್ದೇಶಿಸಿ ಮಾಡಿದ ಭಾಷಣವೊಂದನ್ನು ಅಚ್ಚು ಹಾಕಲಾಗಿತ್ತು. ಕೆಲ ಓದುಗರಿಗೆ ಇದು ಒಂದು ಸಮಸ್ಯೆಯಾಗಿ ಕಂಡಿತು. "ತನ್ನ ವಿರುದ್ಧದ ಭಾಷಣವನ್ನು 'ಜರ್ನಲ್' ಪ್ರಕಟಿಸಿರುವುದರ ರಹಸ್ಯವೇನು ?" ಗವರ್ನರ್ ಕಾಸ್ಬಿಯ ಗೆಳೆಯನೊಬ್ಬ ಟಾಡ್ಸ್ ಹೋಟೆಲಿನಲ್ಲಿ ಮದೀರಾ ತುಂಬಿದ ಲೋಟ ಹಿಡಿದು ಪ್ರಶ್ನಿಸಿದ. ತಮ್ಮ ಮಾತೆಲ್ಲ ದಬ್ಬಾಳಿಕೆಯ ಅಬ್ಬರಗಳು. ಜನತೆಗೆ ಅದನ್ನು ಮನದಟ್ಟು ಮಾಡಿಕೊಡಲು ಸತಿ ಜೆಂಗರ್ ಮಾಡಬೇಕಾದ ಕೆಲಸವೆಂದರೆ, ಅವನ್ನೇ ಮುದ್ರಿಸುವುದು, ಆಕೆ ಮಾಡಿರುವುದೂ ಅದೇ ಎಂಬುದನ್ನೆಲ್ಲ ಅರ್ಥ ಮಾಡಿಕೊಳ್ಳುವ ಚೈತನ್ಯ ಗವರ್ನರ್ ಪಕ್ಷದವರಿಗಿರಲಿಲ್ಲ.

ಪತ್ರಿಕೆಯ ಕೊನೆಯಲ್ಲಿ ದಪ್ಪಕ್ಷರದ ಸಾಲು ಮುಂಚಿನಂತೆಯೇ ಇತ್ತು. "ಮುದ್ರಕ ಮತ್ತು ಮಾರಾಟಗಾರ, ಜಾನ್ ಪೀಟರ್ ಜೆಂಗರ್" ಆದರೆ ಉಸ್ತುವಾರಿ ನೋಡಿದವಳು ಕ್ಯಾಥರೀನ್. ಹಣ

ಕಾಸಿನ ಲೆಕ್ಕ ಇಟ್ಟಳು. ಕಾಗದ ಮಸಿ ಕೊಂಡಳು. ಅಕ್ಷರದ ಮೊಳೆ ಜೋಡಿಸಿದಳು, ಕರಡು ತಿದ್ದಿದಳು, ವಿದೇಶವಾರ್ತೆಯನ್ನೂ ಬರೆದಳು. ಮಕ್ಕಳಿಗಂತೂ ಹಿಂದೆಂದಿಗಿಂತ ಹೆಚ್ಚು ಕಲಿಸಿದಳು. ಪೈಟರನ್ನು ಮಾತ್ರವಲ್ಲ ೭ ವರ್ಷದ ನಿಕೊಲಾಸನ್ನೂ, ಅಕ್ಷರ ಜೋಡಿಸುವ ಕೆಲಸಕ್ಕೆ ನಿಲ್ಲಿಸಿದಳು. ಕೆಲಸಗಾರನ ಕೈಲಿದ್ದ ವಿಸ್ಕಿ ಸೀಸೆಯನ್ನು ಕಿತ್ತುಕೊಂಡು ಪತ್ರಿಕೆಯ ಮುದ್ರಣವೆಲ್ಲಾ ಮುಗಿಯುವವರೆಗೂ ಆತ ನಿಶಾರಹಿತನಾಗಿ ಉಳಿಯುವಂತೆ ಮಾಡಿದಳು. ಒಂದೇ ಮಾತಿನಲ್ಲಿ ಹೇಳುವುದಾದರೆ, ಆಕೆ ಪತ್ರಿಕಾ ಪ್ರಕಟನೆ ಕಾರ್ಯವನ್ನು ಕಲಿಯತೊಡಗಿದಳು.

ಡಿಸೆಂಬರ್ ತಿಂಗಳ ಒಂದು ದಿನ ಓಡಿಹೋಗಿದ್ದ ಕರಾರು ಬಂಧಿತ ಒಬ್ಬ ಸೇವಕ ಮತ್ತು ಇಬ್ಬರು ಘಾತಕಿಗಳೊಡನೆ ಮೆಟ್ಟಿಲುಗಳ ಮೇಲ್ತುದಿಯ ತನ್ನ ಸೆರೆ ಕೊಠಡಿಯ ಬಾಗಿಲ ಕಿಂಡಿಯ ಮೂಲಕ ಜೆಂಗರ್ ಮಾತನಾಡುತ್ತಿದ್ದ. ತಲೆಯ ಮೇಲಿನ ಎರಡನೆ ಅಂತಸ್ತಿನಲ್ಲಿ ಹೊಸ ಆಲ್ಡರ್‌ಮನ್‌ಗಳ ಸಭೆ ಸೇರಿತ್ತು. ಕೋರ್ಟಿನ ಪ್ರಾಂಗಣ ವನ್ನು ಅವನು ಪ್ರವೇಶಿಸುತ್ತಿದ್ದಂತೆ, ಅವರ ಓಡಾಟದ ಕಾಲು ಸಪ್ಪಳ ಮಬ್ಬಾಗಿ ಕೇಳಿ ಬಂತು.

ಈಗಾಗಲೆ ಅವನು ಅರ್ಧ ಮುದ್ರಿಸಿದ್ದ, ಹೊಸ ನಗರ ಘೋಷ ಣೆಯ ರೀತ್ಯ, ಹೊಸ ಆಲ್ಡರ್‌ಮನ್‌ಗಳಲ್ಲಿ ಅರ್ಧಮಂದಿ (ಏಳು ವಾರ್ಡುಗಳಿಂದಲೂ ವಾರ್ಡಿಗೆ ಒಬ್ಬರಂತೆ) ನಗರದ ಕೋರ್ಟುಗಳ ನ್ಯಾಯಮೂರ್ತಿಗಳಾಗಿದ್ದರು. ಅವರುಗಳು ಆಪಾದಿತನ ವಿಚಾರಣೆ ನಡೆಸುವಾಗ, (ಗವರ್ನರ್ ನೇಮಿಸಿದ) ರಿಕಾರ್ಡರ್ ಶ್ರೇಷ್ಠ ನ್ಯಾಯ ಮೂರ್ತಿಯ ಸ್ಥಾನದಲ್ಲಿ ಕುಳಿತುಕೊಳ್ಳುತ್ತಿದ್ದ.

ಹೊಸದಾಗಿ ಚುನಾಯಿತರಾದ ಆಲ್ಡರ್‌ಮನ್‌ಗಳಲ್ಲಿ ಒಬ್ಬ ಎದ್ದು ನಿಂತ.

"ನ್ಯೂಯಾರ್ಕಿನ ಗೆಳೆಯ ನ್ಯಾಯಮೂರ್ತಿಗಳೇ, ಈ ಪ್ರಾಂತ್ಯದ ಎರಡು ಶ್ರೇಷ್ಠ ಜ್ಯೂರಿ ಮಂಡಲಗಳು, ಈ ಕೋರ್ಟಿನ ರಿಕಾರ್ಡರಾದ ಮಾನ್ಯ ಫ್ರಾನ್ಸಿಸ್ ಹ್ಯಾರಿಸನ್ ಅವರ ಮೇಲೆ ಕೆಲವು ಪಾತಕಗಳ ಆಪಾದನೆಗಳನ್ನು ಹೊರಿಸಿರುವುದರ ಕಡೆ ನಿಮ್ಮ ಲಕ್ಷ್ಯ

ಸೆಳೆಯಬಯಸುತ್ತೇನೆ."

ಎಂದಿನಂತೆಯೇ ಚಿತ್ತಾಕರ್ಷಕ ವಸ್ತ್ರವಿಭೂಷಿತನಾಗಿ, ಅಧ್ಯಕ್ಷ ಸ್ಥಾನದಲ್ಲಿ ಕುಳಿತಿದ್ದ ನ್ಯಾಯಮೂರ್ತಿ ಹ್ಯಾರಿಸನ್ ಗರಕ್ಕನೆ ತಿರುಗಿ ಗಾಭರಿ ಮಿಶ್ರಿತ ಆಶ್ಚರ್ಯದಿಂದ ಅವನೆಡೆ ದುರುಗುಟ್ಟಿದ.

ಆಲ್ಡರ್‌ಮನ್ ಮಾತು ಮುಂದುವರಿಸಿದ. "ಈ ಎರಡು ಆಪಾದನೆಗಳನ್ನು ಹೊರಿಸಿದ ಮೇಲೆ ಅವುಗಳ ಗತಿ ಏನಾಯಿತೆಂಬುದು ಮಾನ್ಯ ಗವರ್ನರಿಗೆ ಮಾತ್ರ ಗೊತ್ತು." ಕೆಲ ಕಾಗದಗಳನ್ನು ಆಲ್ಡರ್ ಮನ್ ಎತ್ತಿಕೊಂಡ. "ಹ್ಯಾರಿಸನ್ನರ ಮೇಲಿನ ಆಪಾದನೆಗಳ ದಾಖಲೆಗಳೂ, ಅವನಿಂದಾಗಿರಬಹುದಾದ ಅತ್ಯಾಚಾರಗಳಿಗೆ ಬಲಿಯಾದವರ ಸಾಕ್ಷ್ಯದ ನಕಲುಗಳೂ ಇಲ್ಲಿ ನನ್ನ ಬಳಿ ಇವೆ."

ಶ್ರೇಷ್ಠ ನ್ಯಾಯಮೂರ್ತಿ ಆಸನದಿಂದ ನೆಗೆದು, ಪ್ರಚಂಡ ಕೋಪದಿಂದ ನಡುಗುವ ಧ್ವನಿಯಲ್ಲಿ ನುಡಿದ. "ಇದು ಅವಮಾನ! ನೀನೆಂದಿಗೂ........"

ಹೊಸ ಆಲ್ಡರ್‌ಮನ್ ಮಧ್ಯೆ ಬಾಯಿಹಾಕಿ ನುಡಿದ.

"ಈ ನಗರ ಕೋರ್ಟಿಗೆ ಆಯ್ಕೆಯಾಗಿರುವ ಈ ನ್ಯಾಯಮೂರ್ತಿಗಳನ್ನು ಬೆದರಿಕೆಗಳಿಂದ ಬಾಯ್ಮುಚ್ಚಿಸಲಾಗುವುದಿಲ್ಲ."

ತನ್ನ ಕೋಪವನ್ನು ಹತೋಟಿಗೆ ತಂದುಕೊಳ್ಳಲು ನ್ಯಾಯಮೂರ್ತಿ ಹ್ಯಾರಿಸನ್ ಹೆಣಗಾಡಿದ. ಕೊನೆಗೆ ಒರಲಿದ, "ಇಂಥ ನಿಂದನೆಗಳನ್ನು ಲಕ್ಷ್ಯಕ್ಕೆ ತಂದುಕೊಳ್ಳುವುದು, ದೊರೆಗಳ ಸರಕಾರದ ಸದಸ್ಯನ ಘನತೆಗೆ ಕುಂದು". ನಡುಗುವ ಹೆಜ್ಜೆಗಳಿಂದ, ಮುಂಗಾಲ ಮೇಲೋ ಎನ್ನುವಂತೆ, ತ್ವರೆಯಿಂದ ಹ್ಯಾರಿಸನ್ ಸಾಗಿಹೋದ.

ಉಳಿದವರು ಮೌನವಾಗಿ, ಅವನ ಬೆನ್ನು ಕಡೆ ನೋಡಿದರು. ಸ್ವಲ್ಪ ಹೊತ್ತಿನ ನಂತರ, ಅವನ ಸ್ಥಾನದಲ್ಲಿ ಕುಳಿತುಕೊಳ್ಳಲು ತಮ್ಮಲ್ಲೇ ಒಬ್ಬನನ್ನು ಉಪಾಧ್ಯಕ್ಷನನ್ನಾಗಿ ಆರಿಸಿದರು.

ಮಾತನಾಡುತ್ತಿದ್ದ ಆಲ್ಡರ್‌ಮನ್ ಮುಂದುವರಿಸಿದ, "ಗೆಳೆಯ ನ್ಯಾಯಮೂರ್ತಿಗಳೆ, ನಾವು ನಮ್ಮದೇ ಶ್ರೇಷ್ಠ ಜ್ಯೂರಿ ಮಂಡಲವನ್ನು ಕರೆದು, ಈ ಸಾಕ್ಷ್ಯವನ್ನೆಲ್ಲ ಪರಿಶೀಲಿಸಿ, ತಮ್ಮ ನಿರ್ಧಾರಗಳನ್ನು

ನಮಗೊಪ್ಪಿಸುವಂತೆ, ಅವರಿಗೆ ನಿರ್ದೇಶ ನೀಡಬೇಕೆಂದು ನಾನು ಸೂಚಿಸುತ್ತೇನೆ."

ಮತ್ತೊಬ್ಬ ಕೇಳಿದ, "ನಮಗೆ ನಗರದ ವ್ಯವಹಾರಗಳ ಬಗ್ಗೆ ಮಾತ್ರ ಮಾನ್ಯ ರಿಕಾರ್ಡರ ಮೇಲೆ ಹತೋಟಿಯಿದೆ. ನಗರ ಶಾಸನಗಳಾವುದನ್ನಾದರೂ ಉಲ್ಲಂಘಿಸಿದ ಆಪಾದನೆ ಇದೆಯೇ ?"

"ಇದೆ. ರಚಿಸಲು ತಾನೇ ಸಹಾಯ ನೀಡಿದ ನಗರ ಘೋಷಣೆಯನ್ನು ಉಲ್ಲಂಘಿಸಿದ ಆಪಾದನೆ ಕೂಡ ಇದೆ. ಮುದ್ರಕನೊಬ್ಬನ ಶರೀರಕ್ಕೆ ಆಘಾತವುಂಟುಮಾಡುವ ಪ್ರಯತ್ನ ಮಾಡಿದ, ಹೋಟಲೊಂದರಲ್ಲಿದ್ದ ನಾವಿಕರು ಮತ್ತು ಬಂದರು ಹಮಾಲಿಗಳನ್ನು ದೊಂಬಿಯೇಳುವಂತೆ ಪ್ರೇರೇಪಿಸುವ ಪ್ರಯತ್ನಮಾಡಿದ, ಒಬ್ಬನನ್ನು ತನ್ನ ಸೇವಕನಿಂದ ಸಾಯ ಹೊಡೆಸಿದ, ಭಿಕ್ಷುಕರ ಗುಂಪೊಂದಕ್ಕೆ ಅಪಾಯಕರ ಅಸ್ತ್ರಗಳನ್ನು ಕೊಟ್ಟು, ಅವರನ್ನು ನಗರದಾಚೆಗೆ ಯುದ್ಧಕ್ಕೆ ಹೊರಟವರಂತೆ ಕರೆದೊಯ್ದು, ತನ್ನ ಸಹಾಯಕನೊಬ್ಬನನ್ನು ಒಂಬತ್ತು ವಾರಗಳ ಕಾಲ ಅಕ್ರಮವಾಗಿ ಬಂಧಿಸಿದ (ಈ ಆಪಾದನೆ ಋಜುವಾತಾಗಿದ್ದರೂ ಇನ್ನೂ ಶಿಕ್ಷೆಯಾಗಿಲ್ಲ). ರಾಜಪ್ರತಿನಿಧಿ ಮಂಡಳದ ಸದಸ್ಯರೊಬ್ಬರಿಗೆ ಬಂದ ಟಪಾಲುಗಳಿಗೆ ಕೈಹಾಕಿದ, ತಡೆಹಾಕಿದ – ಆಪಾದನೆಗಳಲ್ಲದೆ, ಇನ್ನೂ ಅನೇಕ ಆಪಾದನೆಗಳು ನ್ಯಾಯಮೂರ್ತಿ ಹ್ಯಾರಿಸನ್ನರ ತಲೆಯ ಮೇಲಿವೆ."

ಸ್ವಲ್ಪ ಚರ್ಚೆಯ ನಂತರ, ಮುಂದಿನ ವಾರ ಶ್ರೇಷ್ಠ ಜ್ಯೂರಿ ಮಂಡಲದ ಪಟ್ಟಿಯನ್ನು ಸಿದ್ಧಗೊಳಿಸಬೇಕೆಂದು ನಿರ್ಧರಿಸಿದರು.

ನ್ಯಾಯಮೂರ್ತಿ ಹ್ಯಾರಿಸನ್ ಗವರ್ನರರ ಆಪ್ತ ಎಂಬುದನ್ನು ತಿಳಿದಿದ್ದ ನಗರದ ಶ್ರೇಷ್ಠ ಜ್ಯೂರಿಮಂಡಲ, ಅಧಿವೇಶನ ಸೇರಿದಾಗ, ಅವನ ಶಕ್ತಿಗೆ ಬೆದರಿದಂತೆ ಕಂಡು ಬಂದರು. ಜ್ಯೂರರುಗಳು ಕೇವಲ ಕಾಲಹರಣ ಮಾಡಿದರು. ಒಂದು ವಾರ ಕಳೆಯಿತು.

ಛಳಿಗಾಲದ ಒಂದು ಮಧ್ಯಾಹ್ನ, ಹಿಮ ಬಿರುಗಾಳಿ ಬೀಸುತ್ತಿದ್ದಾಗ, ಮತ್ತೆ ಚರ್ಚಿಸಿದರು, ವಾದಿಸಿದರು. ಕಟ್ಟಕಡೆಗೆ ಆಪಾದನೆ ಹೊರಿಸಬೇಕೆಂದು ಅಭಿಮತವಿತ್ತರು.

ಹೊಸ ಆಲ್ಡರ್‌ಮನ್‌ಗಳು ಮತ್ತೆ ಸೇರಿದರು. ಗವರ್ನರರ ಕೋಪಕ್ಕೆ ಪಾತ್ರವಾಗಬೇಕಾಗುತ್ತದೆಂಬುದನ್ನು ಅರಿತೂ, ನ್ಯೂಯಾರ್ಕ್ ನಗರದ ರಿಕಾರ್ಡರನ್ನು ಬಂಧಿಸಿ ಜೈಲಿಗೆ ಹಾಕುವ ವಾರಂಟನ್ನು ಸಿದ್ಧಗೊಳಿಸಿದರು.

ನಗರಕ್ಕಿದ್ದುದು ಒಂದೇ ಜೈಲು. ಅದರಲ್ಲಿ ಜೆಂಗರ್ ಕಾಲ ಕಳೆಯುತ್ತಿದ್ದ.

ಷರೀಫ್ ಜಾನ್ ಹೆಂಡ್ರಿಕ್ ಸೈವರ್ಸ್, ಜೆಂಗರ್‌ನನ್ನು ಬಂಧಿಸಿದ ಅದೇ ಇಬ್ಬರು ಪೋಲೀಸರ ಜೊತೆಯಲ್ಲಿ ಬಂದು, ಹ್ಯಾರಿಸನ ಮನೆಯ ಬಾಗಿಲನ್ನು ತಟ್ಟಿದ. ಸತಿ ಹ್ಯಾರಿಸನ್ ಅತ್ತು, ಅತ್ತು ಕೆಂಪಡರಿದ ಕಣ್ಣುಗಳಿಂದ ಬಂದು ಬಾಗಿಲು ತೆರೆದಳು. ಆಕೆಯ ಇಬ್ಬರು ಹೆಣ್ಣು ಮಕ್ಕಳು ಗಾಭರಿಯಿಂದ, ಆಕೆಯ ಲಂಗವನ್ನು ಅವುಚಿಕೊಂಡಿದ್ದರು. ಬಂದವರು ಪ್ರತಿಯೊಂದು ಕೊಠಡಿಯನ್ನೂ ಶೋಧಿಸಿದರು.

ನ್ಯಾಯಮೂರ್ತಿ ಹ್ಯಾರಿಸನ್ ಎಲ್ಲೂ ಇರಲಿಲ್ಲ.

"ಅವರೆಲ್ಲಿ ?" ಷರೀಫ್ ಪ್ರಶ್ನಿಸಿದ.

"ನನಗೆ ತಿಳಿಯದು" ಆಕೆ ನಿಜವನ್ನೇ ನುಡಿದು, ಅಳತೊಡಗಿದಳು.

ನ್ಯಾಯಮೂರ್ತಿ ಹ್ಯಾರಿಸನ್ ಓಡಿಹೋಗಿದ್ದ. ಅವನ ಹೆಂಡತಿ ಮಕ್ಕಳುಗಳೇ ಅವನ ಕೊನೆಯ ಪಾತಕದ, ಬಲಿಗಳು. ಅವರನ್ನೆಲ್ಲ ನಡುನೀರಿನಲ್ಲಿ ಕೈಬಿಟ್ಟಿದ್ದ. ಅವನಿಂದ ಅವರಿಗೆ ಒಂದು ಕಾಗದ ಸಹಾ ಬರಲಿಲ್ಲ.

ಜೆಂಗರ್ ಮತ್ತು ಅವನ ಪತ್ನಿ ಈ ಸುದ್ದಿಯನ್ನು ಬಾಗಿಲ ಕಿಂಡಿಯ ಮೂಲಕ ಪಿಸುಮಾತಿನಲ್ಲಿ ಚರ್ಚಿಸಿದರು. ಸತಿ ಹ್ಯಾರಿಸನ ಡಚ್ ಸ್ತ್ರೀ, ಕ್ಯಾಥರೀನಳ ಚರ್ಚಿಗೇ ಸೇರಿದವಳು. ಅದನ್ನರಿತ ಅವಳಿಗೆ ಈ ಸಂಗತಿ ಬಹು ಕೆಡುಕೆನಿಸಿತು.

ಆದರೆ ಜೆಂಗರ್, ಗವರ್ನರ್ ವಿರುದ್ಧದ ತನ್ನ ಹೋರಾಟದ ಮೇಲೆ ಈ ಘಟನೆಯ ಪರಿಣಾಮ ಏನೆಂಬುದನ್ನು ಕುರಿತು ಚಿಂತಿಸುತ್ತಿದ್ದ.

“ನಮ್ಮ ‘ಜರ್ನಲ್’ ಓದುವ ಯಾರಿಗೇ ಆಗಲಿ, ಈ ಘಟನೆಯ ಹೊಣೆಗಾರಿಕೆಯನ್ನು ಕಾಸ್ಬಿಯ ತಲೆಯ ಮೇಲಕ್ಕೆ ಒರಗಿಸುವಷ್ಟು, ಸಂಗತಿಗಳು ತಿಳಿದೇ ತಿಳಿದಿರುತ್ತವೆಂದು ಭಾವಿಸುತ್ತೇನೆ.” ಎಂದ.

ಕ್ಯಾಥರೀನ್ ಈ ಮಾತಿಗೆ ತನ್ನ ಒಪ್ಪಿಗೆ ನೀಡಿದಳು.

“ಆತನ ಅಪರಾಧಗಳು ಬಯಲಿಗೆ ಬಿದ್ದ ಮೇಲೂ ಆತನನ್ನು ‘ಗೆಜೆಟ್’ ಪತ್ರಿಕೆಯ ಸಂಪಾದಕನಾಗಿ ಮುಂದುವರಿಸಿದವನು ಕಾಸ್ಬಿಯೇ!”

“ಆತನ ಮೇಲಿನ ಒಂದೋ ಎರಡೋ ಆಪಾದನೆ ಪತ್ರಗಳನ್ನು ಹರಿದು ಹಾಕಿದ.”

“ಮತ್ತೆ ಪ್ರತಿ ವರ್ಷವೂ ಅವನನ್ನೇ ನಗರದ ರಿಕಾರ್ಡರಾಗಿ ಪುನರ್ನೇಮಕ ಮಾಡುತ್ತಿದ್ದ.”

“ನನಗೆ ತಿಳಿದಿರೋ ಹಾಗೆ, ಕ್ಯಾಥರೀನ್, ಈ ಘಟನೆ ಪ್ರಾಯಶಃ ಗವರ್ನರಿಗೊಂದು ಪಾಠ ಕಲಿಸೀತು. ದುಷ್ಟರನ್ನು ತನ್ನ ಸಹಾಯಕರನ್ನಾಗಿ ಇಟ್ಟುಕೊಂಡರೆ, ಕೊನೆಗೆ ಅದರಿಂದ ತನಗೇ ಕುಖ್ಯಾತಿ ಬರುವುದು ಖಚಿತ ಎಂದು ಪ್ರಾಯಶಃ ಅವನಿಗೂ ಗೊತ್ತಿರಬೇಕು.”

———

# ಅಧ್ಯಾಯ ೨೫

## ಗವರ್ನರ್ ಅಂಕುಶದಲ್ಲಿ ನ್ಯಾಯಮೂರ್ತಿಗಳು

ಷರೀಫ್ ಮತ್ತು ಜೈಲರುಗಳಿಬ್ಬರೂ ಇದ್ದಕ್ಕಿದ್ದಂತೆ ಬದಲಾದದ್ದು ಜೆಂಗರ್‌ಗೆ ಆಶ್ಚರ್ಯವನ್ನುಂಟುಮಾಡಿತು. ಯಾವ ಕಾರಣವನ್ನೂ ಕೊಡದೆ ಅವನನ್ನು ಕತ್ತಲೆಯ ಕೋಣೆಯಿಂದ, ಮೇಲಂತಸ್ತಿನ ಬೆಳಕು, ಗಾಳಿಗಳು ಸಮೃದ್ಧವಾಗಿದ್ದ, ಬೆಚ್ಚನೆಯ ಕೋಣೆಗೆ ವರ್ಗಾಯಿಸಿದರು. ಷರೀಫ್ ಸ್ಮೈಮ್ಸ್ ಗವರ್ನರ್ ಪಕ್ಷದವನಾದರೂ ಆಗಾಗ್ಗೆ ಜೈಲಿಗೆ ಬಂದು ಮುದ್ರಕನೊಡನೆ ವಿಶ್ವಾಸದಿಂದ ಹರಟುತ್ತಿದ್ದ.

ಇಂಗ್ಲಿಷ್ ಸೆರೆಮನೆಗಳ ಸಂಪ್ರದಾಯದಂತೆ ಅವನ ಪತ್ನಿ ಮತ್ತು ಮಕ್ಕಳಿಗೆ ಯಾವಾಗ ಬೇಕಾದರೂ ಬಂದು ಜೆಂಗರ್‌ನನ್ನು ಭೇಟಿ ಮಾಡಲು ಅವಕಾಶ ಕೊಡಲಾಯಿತು. ಒಮ್ಮೆ ರಿಪ್‌ವಾನ್ ಡಾಂ ತನ್ನ ಮೊಮ್ಮಗನೊಡನೆ ಹಂದಿ ಮಾಂಸವನ್ನು ಸತಿ ಜೆಂಗರ್‌ಗೆ ಕಳಿಸಿದ. ಆಕೆ ಅದನ್ನು ಅಡುಗೆ ಮಾಡಿ, ಜೈಲಿಗೆ ತೆಗೆದುಕೊಂಡು ಹೋಗಿ, ಜೈಲರ್ ಮತ್ತು ಇತರ ಬಂದಿಗಳನ್ನು ಆಹ್ವಾನಿಸಿದಳು. ಎಲ್ಲರೂ ಆ ಹಬ್ಬದೂಟಕ್ಕಾಗಿ, ದೊಡ್ಡದೊಂದು ಸೆರೆಖಾನೆಯಲ್ಲಿ ಸೇರಿದರು. ಕಳ್ಳರು, ಕುಡಿದಾಗ ಮತ್ತೊಬ್ಬನನ್ನು ಇರಿದವನೊಬ್ಬ, ಖೋಟಾನಾಣ್ಯ ತಯಾರಿಸಿದವನೊಬ್ಬ (ಬ್ರಾಡ್‌ಫರ್ಡನ ಕೈಕೆಳಗೆ ಕೆಲಸಮಾಡುತ್ತಿರುವಾಗ ಜೆಂಗರ್ ಇವನನ್ನು ನೋಡಿದ್ದ), ಓಡಿಹೋದ ಕರಾರು ಬಂಧಿತ ಸೇವಕರಿಬ್ಬರು, ಮುದ್ರಕ, ಕ್ಯಾಥರೀನ್, ಮಕ್ಕಳೂ ಎಲ್ಲಾ ಒಟ್ಟಾಗಿ ಕುಳಿತು ಊಟ ಮಾಡಿದರು. ಮೇಣದ ಬತ್ತಿಗಳು ಉರಿದು ಹೋಗುವವರೆಗೂ ವಿನೋದವಾಗಿ ಹರಟಿದರು. ಹಾಡುಗಳನ್ನು ಹೇಳಿದರು.

ಮುದ್ರಕನನ್ನು ಜೈಲಿಗೆ ಹಾಕುವ ಮೂಲಕ, ತಾವು 'ಜರ್ನಲ್'

ಪತ್ರಿಕೆಯನ್ನು ಮಟ್ಟ ಹಾಕಿದ್ದೇವೆಂದು ಗವರ್ನರ್ ಸ್ನೇಹಿತರು ನಂಬಿದ್ದರೆ ಅವರು ಬೇಗ ನಿರಾಶೆಪಡಬೇಕಾಯಿತು.

ನ್ಯಾಯಮೂರ್ತಿಗಳಿಗೇ ಕಟ್ಟಾಜ್ಞೆ ನೀಡುತ್ತಿದ್ದ ಮೋಸಗಾರ ಗವರ್ನರ್ ವಿರುದ್ಧದ, ಕಿಡಿಹಾರಿಸುವ, ಕಟುಟೀಕೆಗಳ ಧಾಳಿಗಳೊಡನೆ ಪತ್ರಿಕೆ ಮತ್ತೆ ಹೋರಾಟಕ್ಕಿಳಿಯಿತು.

ಈಗ ಬ್ರಾಡ್‌ಫರ್ಡನೇ ಸಂಪಾದಕನಾದ 'ಗೆಜೆಟ್' ಹೋರಾಟದ ರಂಗದಿಂದ ದೂರವಾಯಿತು. ವಾಚಕರ ಪತ್ರಗಳನ್ನು ಪ್ರಕಟಿಸುವ ಅಭ್ಯಾಸವನ್ನು 'ಗೆಜೆಟ್' ಬೆಳೆಸಿಕೊಂಡಿತ್ತು. ಆದರೆ ಈಗ, ಸುಂದರವಾಗಿ ಕಾಣುವುದು ಹೇಗೆಂಬ ಮಹಿಳೆಯರನ್ನು ಕುರಿತ ಸಲಹೆಗಳು, ಪ್ರತಿಯೊಬ್ಬರೂ ಆರೋಗ್ಯವಂತರಾಗಲು ಏನು ಮಾಡಬೇಕೆಂಬ ಸೂಚನೆಗಳು ಇಂಥದಕ್ಕೆ ಮಾತ್ರ ಅದರ ಕಾಲಂಗಳು ಮೀಸಲಾಗತೊಡಗಿದವು. ಹಡಗುಗಳ ಹಗ್ಗಕ್ಕಾಗಿ, ಹೆಚ್ಚು ಸೆಣಬು ಬೆಳೆಯಲು ರೈತರಿಗೆ ಪ್ರೋತ್ಸಾಹ ನೀಡುವ ಶಾಸನವೊಂದು ರಚಿತವಾಗಬೇಕೆಂದು ಒಂದೆರಡು ಪತ್ರಗಳೂ ಪ್ರಕಟವಾದವು. ಅಂತೂ ಆ ಪತ್ರಿಕೆ ಕಳೆದ ವರ್ಷದ ಸ್ವರೂಪವನ್ನು ಸಂಪೂರ್ಣವಾಗಿ ತ್ಯಜಿಸಿತ್ತು.

ಅಟಾರ್ನಿ ಜನರಲ್ ಬ್ರಾಡ್ಲೆ ಮತ್ತೊಮ್ಮೆ ತನ್ನ ಮೇಲಿನ ವ್ಯವಹಾರವನ್ನು ಶ್ರೇಷ್ಠ ಜ್ಯೂರಿ ಮಂಡಲದ ಮುಂದೆ ಮಂಡಿಸಲಿರುವನೆಂದು, ಜನವರಿ ತಿಂಗಳ ಕೊನೆಯಲ್ಲಿ ಜೆಂಗರ್ ಅರಿತ. ಪ್ರಾಂಗಣದಿಂದಾಚೆಯ ಕೊಠಡಿಯಲ್ಲಿದ್ದ ಖೋಟಾ ನಾಣ್ಯ ತಯಾರಕನನ್ನು ಉದ್ದೇಶಿಸಿ ಜೆಂಗರ್ ಕೂಗಿದ: "ನಾನು ಜೈಲಿನಲ್ಲಿದ್ದೇನೆ. ಅಂತೆ ನನ್ನ ಪತ್ರಿಕೆಯಲ್ಲಿ ದ್ರೋಹಪೂರ್ಣ ನಿಂದನೆಗಳಿರಬೇಕು ಎಂದು ಅವರು ನಂಬಬಹುದೆಂಬ ಭಾವನೆ ಅವನಲ್ಲಿ ಮೂಡಿರಬೇಕು." ಎಂದ.

ಮಧ್ಯಾಹ್ನ ಷರೀಫ್ ಬಂದು ವರದಿಯೊಪ್ಪಿಸಿದ: "ಪೀಟರ್, ಶ್ರೇಷ್ಠ ಜ್ಯೂರಿ ಮಂಡಲ ಬೆಳಿಗ್ಗೆಯೆಲ್ಲ ನಿನ್ನ ವ್ಯವಹಾರವನ್ನು ಚರ್ಚಿಸಿತು. ಆದರೆ ನಿನ್ನ ವಿರುದ್ಧ ಅವರಿಗೇನೂ ದೊರಕಲಿಲ್ಲ"

ಜೆಂಗರ್ ಹರ್ಷಧ್ವನಿಮಾಡಿದ. ತನ್ನ ಬಿಡುಗಡೆಯಾದೀತೆಂದು ನಂಬಿದ.

"ನ್ಯಾಯಮೂರ್ತಿ ತನ್ನ ಹೇಳಿಕೆಯನ್ನು ಕಠಿಣ ಶಬ್ದಗಳಲ್ಲೇ ಮಂಡಿಸಿದ. ಜೆಂಗರ್ ಅಪರಾಧಿಯಲ್ಲವೆಂದು ನೀವು ನಿರ್ಧರಿಸುವು ದಾದರೆ ನೀವೇ ನ್ಯಾಯೋಲ್ಲಂಘನೆಯ ಅಪರಾಧಕ್ಕೆ ಗುರಿಯಾಗುವಿರಿ ಎಂದ" ಎಂದು ಷರೀಫ್ ತಿಳಿಸಿದ.

ಅದೇ ಮಧ್ಯಾಹ್ನ ಜೆಂಗರ್‌ನನ್ನು ಮೇಲಂತಸ್ತಿಗೆ ಕರೆದೊಯ್ಯ ಲಾಯಿತು. ವಿಚಾರ ವಿನಿಮಯದ ಕೊಠಡಿಯಲ್ಲಿ ತನ್ನಿಬ್ಬರು ನ್ಯಾಯ ವಾದಿಗಳನ್ನು ಸಂಧಿಸಿ, "ನನ್ನನ್ನು ಬಿಡುಗಡೆಮಾಡುವರೇನು ?" ಎಂದು ಕುತೂಹಲದಿಂದ ಪ್ರಶ್ನೆಹಾಕಿದ.

ಅಲೆಕ್ಸಾಂಡರ್ ಖಿನ್ನತೆಯಿಂದ ತಲೆಯಲ್ಲಾಡಿಸಿದ. ಅವನ ಟೋಪನ್ನಿನ (ವಿಗ್‌ನ) ಇಳಿಕೂದಲುಗಳು ಬೆನ್ನಿನಗಲಕ್ಕೂ ಓಲಾಡಿದವು.

"ಬ್ರಾಡ್ಲೆ ನಿನ್ನ ವಿರುದ್ಧ 'ಸಂಗತಿ' ಯೊಂದನ್ನು ಹಾಜರ್ ಪಡಿಸಿದ್ದಾನೆ."

ಜೆಂಗರ್ ಕುರ್ಚಿಯೊಳಕ್ಕೆ ದೊಪ್ಪನೆ ಕುಸಿದ.

"ಅದೇನು ?"

ನ್ಯಾಯವಾದಿ ವಿವರಿಸಿದ. "ಯಾರಮೇಲಿನ ಆಪಾದನೆಯ ನ್ನಾಗಲಿ ದಾಖಲು ಕಾಗದದಮೇಲೆ ಅಟಾರ್ನಿ ಜನರಲ್ ಬರೆಯುತ್ತಾನೆ. ಅವನು ಅದನ್ನು 'ಸಂಗತಿ' ಎಂದು ಕರೆಯುತ್ತಾನೆ. ಆಗ ಆಪಾದಿತ ಮನುಷ್ಯ, ತನ್ನ ಮೇಲೆ ಶ್ರೇಷ್ಠ ಜ್ಯೂರಿಮಂಡಲವೊಂದು ಆಪಾದನೆ ಯನ್ನು ಹೊರಿಸಿದೆಯೇನೋ ಎನ್ನುವಂತೆ, ವಿಚಾರಣೆಗೆ ಗುರಿಯಾಗ ಬೇಕು."

"ಆ ರೀತಿ ಮಾಡುವ ಹಕ್ಕು ಅವನಿಗಿದೆಯೇನು ?" ಜೆಂಗರ್ ಪ್ರತಿಭಟಿಸಿದ. "ಅದೂ ಶ್ರೇಷ್ಠ ಜ್ಯೂರಿಮಂಡಲ ನಕಾರಾತ್ಮಕ ನಿರ್ಧಾರ ಮಾಡಿದಮೇಲೆ ?" ಎಂದ.

ಅಲೆಕ್ಸಾಂಡರ್ ಉತ್ತರ ಹೇಳಿದ, "ನಾನು ಅಟಾರ್ನಿ ಜನರಲ್ ಆಗಿದ್ದಾಗ 'ಸಂಗತಿ'ಯೊಂದರ ಆಧಾರದ ಮೇಲೆ ಯಾರನ್ನಾದರೂ ವಿಚಾರಣೆಗೆ ಗುರಿಪಡಿಸಬಹುದಿತ್ತು. ಯಾರದಾದರೂ ಮೂಗಿನ ಆಕಾರ

ನನ್ನ ಮನಸ್ಸಿಗೆ ಬರದಿದ್ದರೆ ಅಂಥವನನ್ನು ವಿಚಾರಣಾ ಕಟಾಂಜನದ ಒಳಗೆ ನಿಲ್ಲಿಸಬಹುದಿತ್ತು. ಆದರೆ ನಾನೆಂದೂ ಹಾಗೆ ಮಾಡಲಿಲ್ಲ. ನಾನು ನಿವೃತ್ತನಾಗಿ ನ್ಯಾಯವಾದಿತ್ವವನ್ನು ಆರಂಭಿಸಿದಮೇಲೆ, ನನ್ನ ಸ್ಥಾನಕ್ಕೆ ಬ್ರಾಡ್ಲೆ ಬಂದ. ಅವನು ಅದೇ ಕೆಲಸವನ್ನು ಮಾಡುತ್ತಿದ್ದಾನೆ."

ಕಳವಳದಿಂದ ತನ್ನ ಕಾಗದಗಳನ್ನು ಆರಿಸತೊಡಗಿದ. "ಎಂಟು ವರ್ಷಗಳ ಕೆಳಗೆ ನಮ್ಮ ಗೆಳೆಯ ಮಾರಿಸ್, ಜೂನಿಯರ್ ರಾಜಪ್ರತಿನಿಧಿ ಮಂಡಲದ ಸದಸ್ಯನಾಗಿದ್ದಾಗ, ನಾನೂ ಅವನೂ ಸೇರಿ, 'ಸಂಗತಿ'ಗಳ ಆಧಾರದ ಮೇಲೆ ವಿಚಾರಣೆ ನಡೆಸುವುದನ್ನು ನಿಷೇಧಿಸುವ ಮಸೂದೆಯೊಂದನ್ನು ರಚಿಸಿದೆವು. ಅದನ್ನು ಶಾಸನಸಭೆ ಅಂಗೀಕರಿಸಿತು. ಈಗ ಆ ಶಾಸನ ಜಾರಿಯಲ್ಲಿದೆ. ಆದರೆ ದುರದೃಷ್ಟವಶಾತ್ ಅದರಲ್ಲೊಂದು ನ್ಯೂನತೆ ಉಳಿದುಬಿಟ್ಟಿತು. ಸುಪ್ರೀಂ ಕೋರ್ಟಿನ ಶ್ರೇಷ್ಠ ನ್ಯಾಯಮೂರ್ತಿಯ ಸಹಿ ಪಡೆಯುವುದಾದರೆ, ಅಟಾರ್ನಿ ಜನರಲ್ ಆ ಕ್ರಮ ಕೈಗೊಳ್ಳಬಹುದೆಂದು ಬರೆದಿದ್ದೆವು. ಆ ಕಾಲದಲ್ಲಿ ಮಾರಿಸ್ಸನ ತಂದೆ ಶ್ರೇಷ್ಠ ನ್ಯಾಯಮೂರ್ತಿಯಾಗಿದ್ದರು. ಆದ್ದರಿಂದ ದುಷ್ಟ ಗವರ್ನರನೊಬ್ಬನ ಕೈಗೊಂಬೆಯಾದ ನ್ಯಾಯಮೂರ್ತಿಯೊಬ್ಬನ ಅಂಕುಶಕ್ಕೆ ಎಂದಾದರೊಮ್ಮೆ ನಾವು ಸಿಕ್ಕಬಹುದೆಂಬ ಭಾವನೆ ಆಗ ನಮಗೆ ಹೊಳೆಯಲಿಲ್ಲ. ಆದರೆ ಇಂದು ಇಂತಹ ಪರಿಸ್ಥಿತಿ ಒದಗಿ ಬಂದಿದೆ. ಅಂತೆಯೇ ನಿನ್ನ ವಿಚಾರಣೆ ಆಗಲೇಬೇಕು."

"ನಾವಿಗೇನು ಮಾಡಬೇಕು ?" ಜೆಂಗರ್ ನಿರಾಶೆಯಿಂದ ನಿಟ್ಟುಸಿರಿಟ್ಟ. "ನಾನು ತಪ್ಪಿತಸ್ಥನೆಂದು ಈಗಾಗಲೇ ನ್ಯಾಯಮೂರ್ತಿ ಹೇಳಿಯೇಬಿಟ್ಟಿದ್ದಾನೆ !"

ವಿಲಿಯಂ ಸ್ಮಿತ್ ಜೆಂಗರ್ ಕಡೆ ತಿರುಗಿ, ಅವನನ್ನೇ ನೋಡುತ್ತ ತನ್ನ ಶಕ್ತಿಯುತವಾದ ಧ್ವನಿಯಲ್ಲಿ ನುಡಿದ. "ಈ ನ್ಯಾಯಮೂರ್ತಿಗಳು ಶಾಸನರೀತ್ಯ ನಿಖರವಾದ ಅಧಿಕಾರಗಳನ್ನು ಹೊಂದಿದವರಲ್ಲ ಎಂಬುದು ನಿನಗೂ ಗೊತ್ತಿರಬಹುದು ಜೆಂಗರ್. ಇವರು ಗವರ್ನರ್ 'ಇಷ್ಟಪ್ರಕಾರದ ಅವಧಿ'ಗೆ ನೇಮಕವಾದವರು. ಅದರರ್ಥವೇನೆಂಬು

ದನ್ನು ಕಾಸ್ಬಿ ಈಗಾಗಲೆ ನಮಗೆ ತೋರಿಸಿಕೊಟ್ಟಿದ್ದಾನೆ."

ಜೆಂಗರ್ ಆ ಮಾತಿಗೆ ಸಮ್ಮತಿಸಿದ. "ನನಗೂ ಜ್ಞಾಪಕವಿದೆ! ತನ್ನ ಸೂಚನೆಗೆ ವಿರುದ್ಧವಾಗಿ ತೀರ್ಪಿತ್ತರೆ ತಾನವರನ್ನು ಒದ್ದೋಡಿಸುವನೆಂದು ಅದರರ್ಥ. ವೃದ್ಧ ಮಾರಿಸ್‌ಗೆ ಅವನು ಮಾಡಿದ್ದೂ ಅದೇ"

"ನಿನ್ನ ವ್ಯವಹಾರದ ಇತ್ಯರ್ಥದಲ್ಲಿ ಕಾಸ್ಬಿಯ ಅಪೇಕ್ಷೆ ಏನು ಎನ್ನುವುದು ನಿನಗೂ ಗೊತ್ತು."

ಈ ಮಾತು ಕೇಳಿ ಜೆಂಗರ್ ನಡುಗಿದ. ಲ್ಯೂಯಿಮಾರಿಸ್, ಜೂನಿಯರ್ ಒಮ್ಮೆ ಹೇಳಿದ್ದದ್ದು ತತ್‌ಕ್ಷಣ ಸ್ಮರಣೆಗೆ ಬಂತು: 'ನ್ಯಾಯಮೂರ್ತಿಗಳು ಗವರ್ನರ ಅಂಕುಶದ ಹಿಡಿತದಲ್ಲಿರುವವರೆಗೂ, ಯಾರೂ ಸುರಕ್ಷಿತರಲ್ಲ' ಅಂದಿನ ಮಾತುಗಳ ಅರ್ಥ ಈಗ ಸ್ಪಷ್ಟವಾಯಿತು. ಗವರ್ನರ್ ಕಾಸ್ಬಿಗೆ ಬೇಕಿದ್ದುದೂ ಅದೇ, ಸಾಧ್ಯವಿದ್ದರೆ ಹಾಗೇ ಮಾಡುವಂತೆ ನ್ಯಾಯಮೂರ್ತಿಗಳಿಗೆ ಆಜ್ಞೆಮಾಡಿಯಾನು. ಕುಡಿವ ನೀರಿನ ಕೊಳದ ಬಳಿಯಲ್ಲಿ ಹೊಸದೊಂದು ನೇಣುಗಂಬವನ್ನು ನಿಲ್ಲಿಸಬಹುದು. ಕಾವಲಿನಲ್ಲಿ ಮೇಯುವ ಹಸುಗಳೇನೋ ಅದನ್ನು ಲಕ್ಷ್ಯಕ್ಕೆ ತಂದುಕೊಳ್ಳಲಾರವು. ಜನ ಗುಂಪೆಲ್ಲ ಮನೆಗೆ ತೆರಳಿದ ಮೇಲೆ ಪ್ರಾಯಶಃ ಹಕ್ಕಿಯೊಂದು ಹಾರಿಬಂದು ತನ್ನ ತಲೆಯಮೇಲೆ ಕುಳಿತುಕೊಳ್ಳಬಹುದು. ನ್ಯೂಯಾರ್ಕಿಗೆ ಪ್ರಥಮತಃ ತಾನು ಬಂದಾಗ, ಕಂಡಿದ್ದ ನೇಣುಗಂಬದ ಚಿತ್ರವನ್ನು ಸ್ಮರಿಸಿಕೊಂಡ.

ಸ್ಮಿತ್ ಮಾತು ಮುಂದುವರಿಸಿದ "ಇಂದು ನಾವು ನ್ಯಾಯಮೂರ್ತಿಗಳ ಅಧಿಕಾರಗಳನ್ನು ಕುರಿತು 'ವಿ ನಾ ಯಿ ತಿ' ಅರ್ಜಿಗಳನ್ನು ಸಲ್ಲಿಸುತ್ತೇವೆ. ನ್ಯಾಯಮೂರ್ತಿಗಳು ಯಾವ ಗವರ್ನರ ಹತೋಟಿಗೂ ಒಳಗಾಗಕೂಡದೆಂದು ವಾದಿಸುತ್ತೇವೆ"

"ಸರಿ" ಎಂದ ಜೆಂಗರ್ "ಹಾಗಾಗಲೇ ಕೂಡದು. ಅದರಿಂದ ನನ್ನ ಆರೋಗ್ಯಕ್ಕೂ ಕುಂದು!"

———

# ಅಧ್ಯಾಯ ೨೭

## ನ್ಯಾಯಮೂರ್ತಿಗಳ ಸ್ವಾತಂತ್ರ್ಯದ ಪ್ರಶ್ನೆ

ಕೋರ್ಟಿನಲ್ಲಿ, ನ್ಯಾಯವಾದಿಗಳು ತಮ್ಮ ವಿನಾಯಿತಿ ಅರ್ಜಿಗಳನ್ನು ಸಲ್ಲಿಸಿದರು. ಆದರೆ ನ್ಯಾಯವಾದಿ ಡಿಲಾನ್ಸೆ ಯಾವುದೋ ಒಂದು ಕ್ರಮದ ಪ್ರಶ್ನೆಯನ್ನೆತ್ತಿ ವಾದವಿವಾದಗಳಿಗೆ ನಿಧಾನಮಾಡಿದ. ಅಂತೇ ರಜಾಕಾಲ ಮುಗಿಯುವವರೆಗೂ ವ್ಯವಹಾರದ ವಿಚಾರಣೆ ಮುಂದುವರಿಯಿತು.

ಜೆಂಗರ್ ಇನ್ನೂ ಮೂರು ತಿಂಗಳ ಜೈಲುವಾಸಕ್ಕೆ ಸಿದ್ಧನಾದ. 'ಜರ್ನಲ್' ಮಾತ್ರ ತನ್ನ ಹೋರಾಟವನ್ನು ಎಂದಿನಂತೆ ಸಾಗಿಸಿತ್ತು.

ಏಪ್ರಿಲ್ ತಿಂಗಳು ಬಂದೊಡನೆಯೇ ಕೋರ್ಟು ಮತ್ತೆ ಆರಂಭವಾಯಿತು. ವಿಚಾರಣೆಯ ಆರಂಭದ ದಿನ ನೂರಾರು ಮಂದಿ ಕಿಕ್ಕಿರಿದು ನೆರೆದಿದ್ದರು. ಪ್ರೇಕ್ಷಕರಲ್ಲಿ ಹಲವಾರು ಮಂದಿ ಅಲ್ಲಿ ನುಡಿದ ಮಾತುಗಳ ವರದಿಗಳನ್ನು ಬರೆದುಕೊಳ್ಳುತ್ತಿದ್ದರು. ಇದನ್ನೂ, ಅವರೆಲ್ಲ ಉದ್ರೇಕಗೊಂಡಿದ್ದುದನ್ನೂ ಜೆಂಗರ್ ಗಮನಿಸಿದ.

ನ್ಯಾಯಮೂರ್ತಿಗಳು ಆಸೀನರಾದೊಡನೆ ಅಲೆಕ್ಸಾಂಡರ್ ವಾದವನ್ನು ಆರಂಭಿಸಿದ. ನ್ಯಾಯಮೂರ್ತಿ ಮತ್ತು ಅಲೆಕ್ಸಾಂಡರರ ಸ್ವರೂಪಗಳಲ್ಲಿ ಸ್ಪಷ್ಟವಾದ ಭಿನ್ನತೆ ಕಂಡು ಬರುತ್ತಿತ್ತು. ಎತ್ತರವಾದ, ವಿಕಟ ಲಕ್ಷಣಗಳ ನ್ಯಾಯವಾದಿಗೆ ೪೩ ವರ್ಷ ವಯಸ್ಸು, ಸಮರ್ಥ ಹಾಗೂ ಕಷ್ಟಾಧ್ಯಾಯಿಯೆಂದು ಹೆಸರುಗಳಿಸಿದ್ದ. ನ್ಯಾಯಮೂರ್ತಿಗೆ ಕೇವಲ ಮೂವತ್ತುವರ್ಷ. ಜಾಣ, ತಾನು ತಿಳಿದದ್ದೇ ಸತ್ಯವೆಂದು ನಂಬಿದವನಾದ್ದರಿಂದ, ಪುಸ್ತಕ ಬಿಚ್ಚುವ ಗೋಜಿಗೇ ಹೋಗುತ್ತಿರಲಿಲ್ಲ. ನಿಸ್ತೇಜವಾದ, ಕಳವಳ ತುಂಬಿದ ಮುಖದಲ್ಲಿ ಹೆಮ್ಮೆಯದೇ ಆಡಳಿತ.

ಕೈಲಿದ್ದ ಕಾಗದವೊಂದರಿಂದ ಅಲೆಕ್ಸಾಂಡರ್ ಓದತೊಡಗಿದ. "ಈ ಕಾರಣಗಳಿಗಾಗಿ, ಮಾನ್ಯ ಜೇಂಸ್ ಡಿಲಾನ್ಸೆ ಅವರಿಗೆ ಈ ವ್ಯವಹಾರದ ವಿಚಾರಣೆ ನಡೆಸುವ ಅಧಿಕಾರವಿಲ್ಲವೆಂದು ಜಾನ್ ಪೀಟರ್ ಜೆಂಗರ್ ಹೇಳ ಬಯಸುತ್ತಾನೆ...."

ಹೇಳಿದ್ದನ್ನೆಲ್ಲ ಕೇಳಿಸಿಕೊಳ್ಳುವ ಸಲುವಾಗಿ ಜೆಂಗರ್ ಸ್ವಲ್ಪ ಬಾಗಿದ. ಪ್ರತಿಯೊಂದು ವ್ಯವಹಾರವನ್ನೂ ನ್ಯಾಯ ಹಾಗೂ ಕಾನೂನುಗಳ ರೀತ್ಯ ನ್ಯಾಯಮೂರ್ತಿಗಳು ಇತ್ಯರ್ಥಪಡಿಸಬೇಕು ಎಂದು ಅವನ ನ್ಯಾಯವಾದಿ ಪ್ರತಿಪಾದಿಸಿದ. ಆದರೆ ಈ ನ್ಯಾಯ ಮೂರ್ತಿಗಳು ಆ ರೀತಿ ಮಾಡುವಂತಿಲ್ಲ. ಈ ಕೋರ್ಟಿನ ನ್ಯಾಯ ಮೂರ್ತಿಗಳಾರಾದರೂ ತನ್ನ ಆಜ್ಞೆಗಳನ್ನು ಪಾಲಿಸದೆ ಹೋದರೆ ಅವರು ವಜಾ ಮಾಡಲ್ಪಡುವರೆಂಬುದನ್ನು ಗವರ್ನರ್ ಕಾಸ್ಬಿ ಈಗಾಗಲೆ ನಿದರ್ಶಿಸಿ ತೋರಿಸಿದ್ದಾರೆ.

ಆದ್ದರಿಂದ ಈ ನ್ಯಾಯಮೂರ್ತಿಗಳು ಕಾನೂನಿನ ರೀತ್ಯ ಜೆಂಗರ್‌ನ ವಿಚಾರಣೆಯನ್ನು ನಡೆಸುವಂತಿಲ್ಲ.

ಆಪಾದಿತನ ಕಟಾಂಜನದಲ್ಲಿ ನಿಂತಿದ್ದ ಜೆಂಗರ್ ಈ ಧೀರ ಸವಾಲನ್ನು ಕೇಳಿ ಉದ್ರೇಕಗೊಂಡು ಕಟಕಟೆಯ ಮೇಲೆ ಬಲವಾಗಿ ಗುದ್ದಿದ. ಒಂದು ಕ್ಷಣ ಸುತ್ತ ಕಣ್ಣಾಡಿಸಿದ. ಗುಂಪು ಬೆರಗಾಗಿ ಕುಳಿತಿತ್ತು. ಆನೇಕರಿಗೆ ತನ್ನಂತೆಯೇ ಸಂತೋಷವಾಗಿದೆ ಎಂಬುದನ್ನು ಗುರುತಿಸಿದ. ಬೇಕಾದಷ್ಟು ಮಂದಿ ಪ್ರಬಲರು ತನ್ನ ಕಡೆಗಿದಾರೆ; ತಾನು ಭಾಗಿಯಾಗಿರುವುದು ಒಳ್ಳೆಯ ಹೋರಾಟದಲ್ಲಿ; ಅಂಥ ಪರಿಸ್ಥಿತಿಯಲ್ಲಿ ಉದಿಸುವ ಉತ್ಸಾಹ ಅವನಲ್ಲೂ ಚಿಮ್ಮಿತು.

ಅನಂತರ ನ್ಯಾಯಮೂರ್ತಿಯ ಕಡೆ ತಿರುಗಿದ.

ಡಿಲಾನ್ಸೆ ಕೋಪದಿಂದ ನಿಟ್ಟುಸಿರುಬಿಡುತ್ತ ಅಬ್ಬರಿಸಿದ, "ನೀವು ಮಾಡುತ್ತಿರುವ ಕಾರ್ಯದ ಪರಿಣಾಮವೇನೆಂಬುದನ್ನು ನೀವು ಮತ್ತು ಸ್ಮಿತ್ ಚೆನ್ನಾಗಿ ಪರ್ಯಾಲೋಚಿಸಬೇಕು"

"ನಾವು ಚೆನ್ನಾಗಿಯೇ ಪರಿಶೀಲಿಸಿದ್ದೇವೆ, ಮಹಾಸ್ವಾಮಿ." ಅಲೆಕ್ಸಾಂಡರ್ ಗಾಂಭೀರ್ಯದಿಂದ ಉತ್ತರವಿತ್ತ.

ಸ್ಮಿತ್ ಮೇಲಕ್ಕೆದ್ದ, ತನ್ನ ಶಕ್ತಿಯ ಅರಿವಾಗುವಂತೆ, ಮುಂದಕ್ಕೆ ಸಾಗಿಬಂದ, ಎಂದೆಂದಿಗಿಂತಲೂ ಬಿರುಸಾದ ರೀತಿಯಲ್ಲಿ ವಾದವನ್ನಾರಂಭಿಸಿದ. "ಈ ವಿನಾಯಿತಿಗಳ ಪರಿಣಾಮವೇನೆಂಬುದನ್ನು ನಾನೂ ಕೂಡ ಎಚ್ಚರಿಕೆಯಿಂದ ಪರಿಶೀಲಿಸಿದ್ದೇನೆ, ಮಹಾಸ್ವಾಮಿ. ಇಷ್ಟೇ ಅಲ್ಲ ಇಬ್ಬರು ನ್ಯಾಯಾಧೀಶರ ಅಧಿಕಾರಗಳ ವಿಷಯದಲ್ಲಿ ಅಂಥ, ಅಧಿಕಾರ ಅಕ್ರಮ ಎಂದು ಅವನು ಭಾವಿಸಿದರೆ 'ವಿನಾಯಿತಿ' ಮಂಡಿಸಲು ಬ್ರಿಟಿಷ್ ಪ್ರಜೆಗಿರುವ ಹಕ್ಕಿನ ವಿಷಯದಲ್ಲಿ ನನಗೆಷ್ಟು ಖಚಿತತೆ ಎಂದರೆ, ಆ ಒಂದು ಅಂಶಕ್ಕಾಗಿ ನನ್ನ ಜೀವವನ್ನೇ ಧೈರ್ಯದಿಂದ ಪಣವಾಗಿಡಬಲ್ಲೆ!"

ಒಂದು ಕ್ಷಣ ಹೊತ್ತು, ಗವರ್ನರ್ ಪಕ್ಷದ ನ್ಯಾಯಮೂರ್ತಿ ಡಿಲಾನ್ಸೆ ಮತ್ತು ಪಾಪ್ಯುಲರ್ ಪಾರ್ಟಿಯ ಅಲೆಕ್ಸಾಂಡರ್, ತೀವ್ರ ಮೌನದಲ್ಲಿ, ಪರಸ್ಪರ ದಿಟ್ಟಿಸಿದರು.

ಸ್ಮಿತ್ ನಾಲ್ಕು ಪುಸ್ತಕಗಳನ್ನು ಆರಿಸಿಕೊಂಡು "ಮಹಾಸ್ವಾಮಿಯವರು ನನ್ನ ವಾದವನ್ನು ಲಾಲಿಸುವರೇ?" ಎಂದ.

ನ್ಯಾಯಮೂರ್ತಿ ಡಿಲಾನ್ಸೆ ವ್ಯಂಗ್ಯವಾಗಿ ಉತ್ತರವಿತ್ತ, "ನಾವು ನಿಮ್ಮ ವಾದವನ್ನು ಕೇಳುವುದೂ ಇಲ್ಲ, ವಿನಾಯಿತಿಗಳಿಗೆ ಅವಕಾಶ ಕೊಡುವುದೂ ಇಲ್ಲ. ಈ ಕೋರ್ಟನ್ನು ವಿರೋಧಿಸುವುದರಿಂದ ನೀವೂ, ನಿಮ್ಮ ಗೆಳೆಯರೂ ಜನ ಪ್ರಶಂಸೆಯನ್ನು, ಜನ ಪ್ರಿಯತೆಯನ್ನು ಗಳಿಸುವುದಾಗಿ ಭಾವಿಸಿದಿರಿ. ಆದರೆ...." ಇದ್ದಕ್ಕಿದ್ದಂತೆ ಮುಂದಕ್ಕೆ ಬಾಗಿ, ಹೆಚ್ಚಿನ ಕಾವಿನಿಂದ ಮುಂದಿನ ಮಾತುಗಳನ್ನು ಉಚ್ಚರಿಸಿದ. "ನ್ಯಾಯಾಸ್ಥಾನದಿಂದ ನಮ್ಮ ಉಚ್ಚಾಟನೆ, ಇಲ್ಲ ನ್ಯಾಯವಾದಿ ಮಂಡಲದಿಂದ ನಿಮ್ಮ ಉಚ್ಚಾಟನೆ ಎಂಬಲ್ಲಿಗೆ ಪರಿಸ್ಥಿತಿಯನ್ನು ತಂದಿದ್ದೀರಿ. ಆದ್ದರಿಂದ ನಾವು ನಿಮ್ಮನ್ನೂ ಅಲೆಕ್ಸಾಂಡರನ್ನೂ ನ್ಯಾಯವಾದಿ ಮಂಡಲದಿಂದ ಕಿತ್ತೊಗೆಯುತ್ತೇವೆ."

ಈ ಮಾತುಗಳು ಅಲೆಕ್ಸಾಂಡರ್‌ಗೆ ಸರಿಯಾಗಿ ಕೇಳಿಸಿತೋ ಇಲ್ಲವೋ ಎಂದು ಚಿಂತಿಸುತ್ತ, ಸ್ಮಿತ್ ತನ್ನ ದಪ್ಪ ಕತ್ತನ್ನು ಗರಕ್ಕನೆ ತಿರುಗಿಸಿ, ಅವನ ಕಡೆ ದಿಟ್ಟಿಸಿದ. ಪ್ರೇಕ್ಷಕ ಗಣದ ಕಡೆಯಿಂದ

ಸಾಮೂಹಿಕ ಕೋಪ ಪ್ರದರ್ಶನ ವ್ಯಕ್ತವಾಯಿತು.

ಸ್ಮಿತ್ ನ್ಯಾಯಮೂರ್ತಿಯ ಕಡೆ ತಿರುಗಿ ಗುಡುಗಿದ, “ಇಂಥ ಕಾರಣಕ್ಕಾಗಿ ಎಂದೆಂದೂ ನ್ಯಾಯವಾದಿಯನ್ನು ತೆಗೆದು ಹಾಕಿರಲಿಲ್ಲ ! ಈ ಆಜ್ಞೆ ಕೇವಲ ದಬ್ಬಾಳಿಕೆ, ಮುಯ್ಯಿ !”

ಬೆಚ್ಚಿದ ಜೆಂಗರ್, ಬಸವಳಿದು, ಅವಲಂಬನಕ್ಕಾಗಿ ಕಟಕಟೆಯನ್ನು ಹಿಡಿದುಕೊಂಡ. ಕಾಲುಗಳನ್ನು ಕೊಚ್ಚಿದಂತೆ ಭಾಸವಾಯಿತು. ಸಮಗ್ರ ವಸಾಹತಿನಲ್ಲೇ ಅತ್ಯಂತ ಪ್ರಬಲರಾದ ಇಬ್ಬರು ನ್ಯಾಯವಾದಿಗಳು ತನ್ನ ಪರ ಹೋರಾಡುತ್ತಿದ್ದಾರೆಂಬ ಸಂತಸದಿಂದ ಉಬ್ಬಿದ್ದ. ರೆಪ್ಪೆ ಮುಚ್ಚಿ ಬಿಡುವುದರೊಳಗೆ ಅವರು ತನ್ನ ನ್ಯಾಯವಾದಿಗಳಾಗಿರುವುದು ತಪ್ಪಿಹೋಗಿತ್ತು. ತನ್ನ ವಿಚಾರಣೆಗೆ ತನ್ನ ಪರ ನ್ಯಾಯವಾದಿಯೇ ಇಲ್ಲ.

ಅವನ ಜೀವನಾನದಲ್ಲಿ ಮೊಟ್ಟಮೊದಲ ಬಾರಿಗೆ ನಿಜವಾದ ಹೆದರಿಕೆ ಎಂದರೆ ಏನೆಂಬುದು ಆಗ ಅರ್ಥವಾಯಿತು. ಎಷ್ಟೋ ಸಾರೆ ಸಣ್ಣಪುಟ್ಟ ಅಂಜಿಕೆಗಳು ಕಾಡಿದ್ದವು. ಆದರೆ ಇದು ಅವೆಲ್ಲಕ್ಕಿಂತ ಭಿನ್ನ. ಅವನ ಪತ್ರಿಕೆಗಳನ್ನು ಸುಟ್ಟುಹಾಕಿದ್ದರು. ಜನರ ಗುಂಪು ನುಗ್ಗಿಸಿ ತನ್ನ ಮಳಿಗೆಗೆ ಬೆಂಕಿಯಿಡಿಸುವ ಪ್ರಯತ್ನಮಾಡಿದ್ದರು. ವಾರಗಳ ಕಾಲ ತೇವದ ಕೊಠಡಿಯಲ್ಲಿ ಏಕಾಂತವಾಸಿಯಾಗಿ ಬಂಧಿಸಿಟ್ಟಿದ್ದರು. ಈಗ ತನಗರ್ಥವಾಗದ, ತನ್ನನ್ನು ಸುಲಭವಾಗಿ ಹಿಡಿದು ಚಚ್ಚಬಹುದಾದ ಕಾನೂನಿನ ಕೈಚಳಕಗಳ ನಡುವೆ ತಲೆ ಚಚ್ಚಿಕೊಳ್ಳಲು ತನ್ನೊಬ್ಬನನ್ನೇ ಬಿಟ್ಟಿದ್ದರು. ಇದರರ್ಥ ಇಷ್ಟೇ ನೇಣುಗಲ್ಲು !

ಗಂಟಲು ಒಣಗಿತು. ಕಟಕಟೆಯನ್ನು ಹಿಡಿದ ಕೈಗಳು ನಡುಗಿದವು. ಸ್ನೇಹಿತರಿಗಾಗಿ ಆತುರದಿಂದ ಸುತ್ತ ಕಣ್ಣಾಡಿಸಿದಾಗ ಇದಕ್ಕಿದ್ದಂತೆ ಬಹು ಮಂದಿಯ ಮುಖಗಳು ತನಗೆ ವಿರೋಧ ಸೂಚಿಸುತ್ತಿರುವಂತೆ ಕಂಡುಬಂದವು.

ಮತ್ತೆ ಧೈರ್ಯ ಕೂಡಿಸಿಕೊಳ್ಳಲು ಯತ್ನಿಸಿದ. ಆ ಅಲಂಕಾರಪ್ರಿಯ ಸಣ್ಣ ನ್ಯಾಯಮೂರ್ತಿ ತನ್ನನ್ನು ಬೆದರಿಸಲಾರ ! ಜೆಂಗರ್

ಎದೆಯುರಳಿಸಿದ, ಕತ್ತು ಮೇಲೆತ್ತಿದ. ಇಬ್ಬರು ನ್ಯಾಯಧೀಶರನ್ನೂ ಉಲ್ಲಂಘಿಸುವಂತೆ ಬಿರುಸುದೃಷ್ಟಿ ಬೀರಿದ.

ಶ್ರೇಷ್ಠ ನ್ಯಾಯಮೂರ್ತಿ ಗುಮಾಸ್ತೆಗೆ ನುಡಿದ, "ಈ ಆಜ್ಞೆಯನ್ನು ದಾಖಲೆಗಳಲ್ಲಿ ಸೇರಿಸು. ಮುಂದಿನ ವಿಚಾರಣೆಗೆ ಸಿದ್ಧತೆಯಾಗುವವರೆಗೆ, ಹತ್ತು ನಿಮಿಷಗಳ ಕಾಲ ಕೋರ್ಟಿಗೆ ವಿರಾಮ."

ಇಬ್ಬರು ನ್ಯಾಯಮೂರ್ತಿಗಳೂ ಕೋರ್ಟಿನಿಂದಾಚೆಗೆ ತೆರಳಿದರು.

———

# ಅಧ್ಯಾಯ ೨೭

## ಜೆಂಗರ್‌ಗೊಬ್ಬ ನ್ಯಾಯವಾದಿ

ಅಲೆಕ್ಸಾಂಡರ್ ಮತ್ತು ಸ್ಮಿತ್ತರ ಜೊತೆಯಲ್ಲಿ ಜೆಂಗರ್ ಕೋರ್ಟಿನಿಂದ ವಿಚಾರವಿನಿಮಯದ ಕೊಠಡಿಗೆ ಬಂದ. ನ್ಯಾಯವಾದಿಗಳಿಬ್ಬರೂ ಮುರಿದ ಮೇಜಿನ ಮುಂದಿನ ಕುರ್ಚಿಗಳಲ್ಲಿ ಕುಕ್ಕರಿಸಿದರು. ದಿಕ್ಕು ತೋಚದಂತೆಯೂ ಅಷ್ಟೇ ಕೋಪಪೂರ್ಣವಾಗಿಯೂ ಅವರ ಮುಖಗಳು ಗಂಟಿಕ್ಕಿದ್ದವು.

ಮಾತನಾಡಲು ಬಾಯಿಬಿಚ್ಚಿದ ಜೆಂಗರ್, ಅವರ ಮುಖಲಕ್ಷಣಗಳನ್ನು ಗಮನಿಸಿ, ಮೌನವಾದ. ಕಷ್ಟದಲ್ಲಿ ಸಿಕ್ಕಿಬಿದ್ದಿರುವವನು ತಾನೊಬ್ಬನೇ ಅಲ್ಲ ಎಂಬುದನ್ನು ತತ್‌ಕ್ಷಣ ಅರ್ಥಮಾಡಿಕೊಂಡ. ಅವರ ಪಾಡೂ ಕೆಟ್ಟಿತ್ತು. ಅವರುಗಳಿನ್ನು ಮುಂದೆ ನ್ಯಾಯವಾದಿಗಳಲ್ಲ. ಇಡಿ ಜೀವಮಾನದ ಉದ್ಯಮವೇ, ಅವರ ಭಾಗಕ್ಕೆ ಇದ್ದಕ್ಕಿದ್ದಂತೆ ಶೂನ್ಯವಾಗಿತ್ತು. ತನ್ನ ರಕ್ಷಣೆಗೆ ಕೈಹಾಕಿ ಅವರೀಗತಿ ತಂದುಕೊಂಡಿದ್ದರು.

ಅಲೆಕ್ಸಾಂಡರ್ ದೀರ್ಘವಾಗಿ ಉಸಿರುಬಿಟ್ಟ. "ನಾನು ಬೆಚ್ಚಿದ್ದೇನೆಂಬುದು ನಿಜ. ನ್ಯಾಯವಾದಿ ಉದ್ಯಮದ ಚರಿತ್ರೆಯಲ್ಲೇ ಇಷ್ಟು ಸಣ್ಣ ಕಾರಣಕ್ಕೆ ಇಂಥ ಆಜ್ಞೆ ಹೊರಡಿಸಿದ ನಿದರ್ಶನವಿಲ್ಲ. ಈ ಜನ ಪ್ರಜಾಪೀಡಕರು ಮಾತ್ರವಲ್ಲ, ಹೊಸ ಹೊಸ ಪ್ರಜಾಪೀಡೆಗಳ ಸಂಶೋಧಕರೂ ಹೌದು!"

ಹೊರಬಾಗಿಲು ತಟ್ಟನೆ ತೆರೆಯಿತು. ಲ್ಯೂಯಿ ಮಾರಿಸ್, ಜ್ಯೂನಿಯರ್ ನುಗ್ಗಿಬಂದ. ಕೋಪದಿಂದ ಗಂಟಲು ಕಟ್ಟಿ ಅವನ ಬಾಯಿಂದ ಮಾತೇ ಹೊರಡಲಿಲ್ಲ. ಮೌನವಾಗಿ ಅಲೆಕ್ಸಾಂಡರನ ಕೈಹಿಡಿದ.

ಅಲೆಕ್ಸಾಂಡರ್ ವಿಷಾದ ವ್ಯಕ್ತಪಡಿಸಿದ. "ಜೆಂಗರ್, ನಾನಾಗಲಿ ಸ್ಮಿತ್ ಆಗಲಿ ಇನ್ನು ಮುಂದೆ ನಿನ್ನ ನ್ಯಾಯವಾದಿಗಳಾಗಿರಲು ಅವಕಾಶವಿಲ್ಲ. ನ್ಯೂಯಾರ್ಕಿನ ಯಾವ ನ್ಯಾಯವಾದಿಯನ್ನು ನಿಮ್ಮ ವಕೀಲಿಗೆ ಕರೆಯಬೇಕೊ ನಾನರಿಯೆ. ಇಲ್ಲಿರುವ ನ್ಯಾಯವಾದಿಗಳು ಐದಾರು ಮಂದಿ. ಅವರೆಲ್ಲ ಗವರ್ನರ್ ಪಕ್ಷದವರು ಅಥವಾ ನ್ಯಾಯವಾದಿ ಡಿಲಾನ್ಸೆಗೆ ಹೆದರುವವರು."

"ಹುಚ್ಚು ಮಾತು" ತರುಣ ಮಾರಿಸ್ ಪ್ರತಿಭಟಿಸಿದ. "ನ್ಯೂಯಾರ್ಕಿನಲ್ಲಿ ನ್ಯಾಯವಾದಿ ದೊರಕದಿದ್ದರೆ, ಫಿಲಿಡೆಲ್ಫಿಯದಿಂದಲೋ ಬಾಸ್ಟನ್ನಿನಿಂದಲೋ ಕರೆಸೋಣ! ಅಮೆರಿಕದಲ್ಲೇ ಪ್ರಥಮನಾದವನನ್ನು ನೇಮಿಸೋಣ! ಅವನ ವೇತನ ನಾನೇ ಕೊಡುತ್ತೇನೆ!"

ಜೆಂಗರ್ ಅಲೆಕ್ಸಾಂಡರ್ ಕಡೆ ತಿರುಗಿದ. ಎತ್ತರವಾದ, ಆ ಸ್ಕಾಟ್ ನುಡಿದ: "ಹಾಗೇ ಮಾಡೋಣ. ಆದರೆ ಅದೂ ಸುಲಭವೇನಲ್ಲ. ನಿನಗಂತೂ ಒಬ್ಬ ನ್ಯಾಯವಾದಿಯೇನೋ ಬೇಕೇಬೇಕು. ಕೋರ್ಟಿಗೆ ಹೋಗಿ ನಿನಗೊಬ್ಬ ನ್ಯಾಯವಾದಿ ಬೇಕೆಂದು ಕೇಳು."

ಇಕ್ಕೆಡೆಗಳಲ್ಲೂ ಬಂದು ನಿಂತ ಇಬ್ಬರು ಪಹರೆಯವರೊಡನೆ ಜೆಂಗರ್ ಕೋರ್ಟಿಗೆ ಮತ್ತೆ ಪ್ರವೇಶಿಸಿದ. ಡಿಲಾನ್ಸೆ ಇನ್ನೊಂದು ವಿಚಾರಣೆಯಲ್ಲಿ ಮಗ್ನನಾಗಿದ್ದ. ಆ ನ್ಯಾಯಮೂರ್ತಿ ಅದನ್ನು ಅತ್ತ ಒತ್ತಲಿಸಿ, ಏನು ಬೇಕೆಂದು ಜೆಂಗರನನ್ನು ಕೇಳಿದ.

ಜೆಂಗರಿಗೆ ಆಶ್ಚರ್ಯವಾಯಿತು. ಆದರೆ ನ್ಯಾಯಮೂರ್ತಿ ನಗುಬೀರಿ ಉತ್ತೇಜನವಿತ್ತ.

"ಮಹಾಸ್ವಾಮಿ ನನಗೊಬ್ಬ ನ್ಯಾಯವಾದಿಯನ್ನು ಒದಗಿಸಬೇಕೆಂದು ನನ್ನ ಪ್ರಾರ್ಥನೆ."

ಈ ಪ್ರಶ್ನೆಗೆ ನ್ಯಾಯಮೂರ್ತಿ ಸಿದ್ಧನಾಗಿಯೇ ಇದ್ದಂತೆ ತಟಕ್ಕನೆ ಉತ್ತರಿಸಿದ. "ಆಪಾದಿತನ ಅರ್ಜಿಯನ್ನು ಅಂಗೀಕರಿಸಲಾಗಿದೆ. ನಿನ್ನ ನ್ಯಾಯವಾದಿಯಾಗಿ ಕೆಲಸಮಾಡಲು ಕೋರ್ಟು ಜಾನ್ ಚೇಂಬರ್ಸನನ್ನು ನೇಮಿಸುತ್ತದೆ."

ಸುಂದರ ವಸ್ತ್ರವಿಭೂಷಿತನಾದ ನ್ಯಾಯವಾದಿಯೊಬ್ಬ ಜೆಂಗರ ನೊಡನೆ ಕೈಕುಲುಕಲು ಬಂದ.

ಅವನೂ ಈ ಪ್ರಸಂಗಕ್ಕೆ ಸನ್ನದ್ಧನಾಗಿಯೇ ಇದ್ದನೆಂದು ತೋರುತ್ತದೆ. ಮುದ್ರಕನೊಡನೆ ಕೆಲ ಮಾತುಗಳನ್ನು ಪಿಸುಗುಟ್ಟಿದ ನಂತರ ಆ ನ್ಯಾಯವಾದಿ ನ್ಯಾಯಮೂರ್ತಿಯ ಕಡೆ ತಿರುಗಿ ನುಡಿದ. "ತಾನು ತಪ್ಪಿತಸ್ಥನಲ್ಲವೆಂದು ತನ್ನ ಮೇಲೆ ಹೊರಿಸಿರುವ ಆಪಾದನೆಗೆ, ನನ್ನ ಕಕ್ಷಿ ಉತ್ತರಿಸಬಯಸುತ್ತಾನೆ. ಮಹಾಸ್ವಾಮಿಗಳಿಗೆ ಸಮ್ಮತವೆನಿಸಿದರೆ ವಿಚಾರಣೆಗೆ ತಾರೀಖೊಂದನ್ನು ಗೊತ್ತುಪಡಿಸಬೇಕೆಂದು ಸೂಚಿಸುತ್ತೇನೆ."

ನ್ಯಾಯಮೂರ್ತಿ ಉತ್ತರಿಸಿದ, "ಅಟಾರ್ನಿ ಜನರಲ್ ಮತ್ತು ಪೀಟರ್ ಜಾನ್ ಜೆಂಗರ್ ನಡುವಿನ ವ್ಯವಹಾರವನ್ನು ಆಗಸ್ಟ್ ನಾಲ್ಕನೇ ತಾರೀಕು ಸೋಮವಾರ ವಿಚಾರಣೆಗೆ ತೆಗೆದುಕೊಳ್ಳಬೇಕೆಂದು ಆಜ್ಞೆ ಮಾಡಲಾಗಿದೆ."

ನಿರ್ದಿಷ್ಟವಾದ ತಾರೀಖನ್ನು ಕೇಳಿ ಜೆಂಗರಿಗೆ ಸ್ವಲ್ಪ ಸಮಾಧಾನವೆನಿಸಿತು.

ಹತ್ತುವರ್ಷಗಳಿಂದ ನ್ಯಾಯವಾದಿಯಾಗಿದ್ದ, ಬ್ರಾಡ್ವೆಯ ಭವ್ಯ ಭವನವೊಂದರ ನಿವಾಸಿಯಾದ ಜಾನ್ ಚೇಂಬರ್ಸ್ ಐದುವರ್ಷಗಳ ಕಾಲ ಉಪಕಾರಿಯಾದ ಆಲ್ಡರ್‌ಮನ್ ಆಗಿದ್ದ; ನಗರದ ನ್ಯಾಯವಾದಿಯಾಗಿ ಜೆಂಗರ್ ಮುದ್ರಿಸಲು ಆರಂಭಿಸಿದ್ದ ನಗರ ಘೋಷಣೆಯ ರಚನೆಯಲ್ಲೂ ನೆರವಾಗಿದ್ದ. ಪಾಪ್ಯುಲರ್ ಪಾರ್ಟಿ ಬಹು ಪ್ರಯಾಸದಿಂದ ಹೋರಾಡಿದ, ಆ ಬಿರುಸಿನ ಚುನಾವಣೆಯಲ್ಲಿ ಚೇಂಬರ್ಸ್ ಗವರ್ನರ್ ಪಕ್ಷದ ಸ್ಪರ್ಧಿಯಾಗಿ ಪುನರ್ಚುನಾವಣೆಗೆ ನಿಂತು ೩೫-೫ ಓಟುಗಳಿಂದ ಸೋತಿದ್ದ. ಗವರ್ನರ್ ಪಕ್ಷದ ಸ್ಪರ್ಧಿಗಳೆಲ್ಲರ ವಿರುದ್ಧ ಕರಪತ್ರಗಳನ್ನೂ, ಎರಡು ಹಾಡುಗಳನ್ನೂ ಮುದ್ರಿಸಿದ್ದ ಮುದ್ರಕನ ವಿಷಯದಲ್ಲಿ ಅವನಿಗೆ ಸಹಜವಾಗಿಯೇ ದ್ವೇಷಭಾವನೆಯಿರಬೇಕೆಂದು ಜೆಂಗರ್ ಭಾವಿಸಿದ. ಆದರೆ ಮುದ್ರಕ ಅನ್ಯಥಾ ಮಾರ್ಗವಿಲ್ಲದೆ ಚೇಂಬರ್ಸ್‌ನನ್ನೇ ಆಶ್ರಯಿಸಬೇಕಿತ್ತು.

ಲಂಡನ್ನಿನಲ್ಲಿದ್ದ ಮಾಜಿ ನ್ಯಾಯಮೂರ್ತಿ ಮಾರಿಸ್‌ನಿಂದ ಪತ್ರಗಳು ಬಂದು, ಪಾಪ್ಯುಲರ್ ಪಾರ್ಟಿಯ ನಾಯಕರ ಕೈಗಳಲ್ಲೆಲ್ಲ ಓಡಾಡಿದುವು. ಜೈಲಿಗೆ ಬಂದು ಕ್ಯಾಥರಿನ್ ಅವುಗಳನ್ನು ಓದಿ ಹೇಳಿದಾಗ, ಜೆಂಗರ್ ಕುತೂಹಲದಿಂದ ಆಲಿಸಿದ. ಲಂಡನ್ನಿನಲ್ಲಿರುವ ಪ್ರಭಾವಶಾಲಿಯಾದ, ಆ ಜಾಣ ಮನುಷ್ಯ, ಕಾಸ್ಬಿಯನ್ನು ವಾಪಸ್ ಕರೆಸುವಂತೆ ಮಾಡಿ, ತನ್ನ ಬಿಡುಗಡೆಗೆ ಕಾರಣವಾಗುವನೆಂದು ಚಿಂತಿಸಿದ್ದ.

ಆದರೆ ಮಾರಿಸ್ಸಿನ ಬರವಣಿಗೆಯಲ್ಲಿ ನಿರಾಶೆ ತುಂಬಿತ್ತು. "ನಮ್ಮ ಇಲ್ಲಿನ, ಪಾರ್ಲಿಮೆಂಟ್ ಹಾಗೂ ಸಚಿವ ಸಂಪುಟದ ಕೆಲವರಿಗಾದರೂ ವಸಾಹತುಗಳು ಮತ್ತು ಗವರ್ನರ್‌ಗಳ ಇರವು ಗೊತ್ತೆಂದು ನಂಬಬಲ್ಲೆ. ಆದರೆ ಅಮೆರಿಕನ್ನರ ಕಷ್ಟಗಳ ವಿಷಯದಲ್ಲಿ ಅಡಗಿರುವ ಸಹಾನುಭೂತಿ, ನಮಗೆ ಕಾಗೆಗಳ, ಕೊಕ್ಕರೆಗಳ ವಿಷಯದಲ್ಲಿ ಇರುವಷ್ಟೇ!"

ಹೊಸ ನ್ಯಾಯವಾದಿಯಾಗಿ ಚೇಂಬರ್ಸ್‌ನನ್ನು ನೇಮಿಸಿದ ಕೆಲ ವಾರಗಳ ನಂತರ, ತನ್ನ ಮಿತ್ರ ತನಗೆ ಬೇರೊಬ್ಬ ನ್ಯಾಯವಾದಿಯನ್ನು ಗೊತ್ತುಮಾಡಲು ಪ್ರಯತ್ನಿಸುತ್ತಿರುವರೆಂಬ ಸಂಗತಿಯನ್ನು ಜೆಂಗರ್ ಅರಿತ. ಆದರೆ ಕ್ಯಾಥರೀನ್ ಪರಿಸ್ಥಿತಿಯನ್ನು ಸ್ಪಷ್ಟವಾಗಿ ತಿಳಿಸಿದಳು: "ಫಿಲಿಡೆಲ್ಫಿಯದ ಜಾನ್ ಕಿನ್ಸೆ, ಹೀಗೆಂದು ಉತ್ತರ ಬರೆದಿದ್ದಾನೆ: 'ಗವರ್ನರ್ ಕಾಸ್ಬಿ ನನಗೆ ಕೆಲವು ಉಪಕಾರಗಳನ್ನು ಮಾಡಿದ್ದಾನೆ. ಆದ್ದರಿಂದ ನಿನ್ನ ಪರ ನ್ಯಾಯವಾದಿತ್ವವನ್ನು ವಹಿಸಿಕೊಳ್ಳುವುದು ಅವಿನಯವೆನಿಸೀತು.'" ಆಕೆ ನಿಟ್ಟುಸಿರು ಬಿಟ್ಟು, "ಆದರೆ ನಮ್ಮ ಪ್ರಯತ್ನ ಮುಂದುವರಿಯುತ್ತಲೇ ಇದೆ" ಎಂದೂ ತಿಳಿಸಿದಳು.

"ಹಾಗಾದರೆ ನಾನು ಶತ್ರುವಿನ ಬೆಂಬಲವನ್ನೇ ಆಶ್ರಯಿಸಬೇಕು" ಜೆಂಗರ್ ಕಹಿ ಮಾತನ್ನಾಡಿದ. ಷರಾಯಿಯ ಜೇಬುಗಳಲ್ಲಿ ಕೈ ಹಾಕಿ ಸೆರೆ ಕೊಠಡಿಯಲ್ಲೇ ಶತಪಥ ಸುತ್ತಿದ.

ಮೂರು ಕಾಲಿನ ಸ್ಟೂಲಿನ ಮೇಲೆ ಕುಳಿತಿದ್ದ ಕ್ಯಾಥರೀನ್ ತಲೆಯೆತ್ತಿದಳು. "ಚೇಂಬರ್ಸ್ ಕೂಡ ನಮಗೆ ಪ್ರಯೋಜಕವಾಗಬಹುದು. ಅವನೂ ಒಬ್ಬ ನ್ಯಾಯವಾದಿ ಎಂಬುದನ್ನು ಮರೆಯಬೇಡ.

ಯಾವ ವ್ಯವಹಾರವನ್ನು ಗೆದ್ದರೂ ಅವನ ಪ್ರತಿಷ್ಠೆ ಹೆಚ್ಚುತ್ತದೆ. ಅವನೂ ಯತ್ನಿಸಿಯಾನೆಂದು ನನ್ನ ಭಾವನೆ. ಈ ಊಹೆಗೆ ಇನ್ನೂ ಒಂದು ಕಾರಣವಿದೆ."

ಆಶಾಕಿರಣ ಕಂಡ ಜೆಂಗರ್ ಆಕೆಯ ಕಡೆ ಕುತೂಹಲದಿಂದ ನೋಡಿದ.

ಆಕೆ ಮಾತು ಮುಂದುವರಿಸಿದಳು, "ಆತ ನಿಜವಾಗಿಯೂ ಗವರ್ನರ್ ಪಕ್ಷದ ಪ್ರಬಲ ನಾಯಕರಲ್ಲೊಬ್ಬ ಎಂದು ನಾನರಿತಿಲ್ಲ. ಆಲ್ಡರ್‌ಮನ್‌ಗಳ ಚುನಾವಣೆಯಲ್ಲಿ ಸಂಭವಿಸಿದ ಸೋಲು ಆತನಿಗೊಂದು ಬಲವಾದ ಪೆಟ್ಟು. 'ಗವರ್ನರ್ ಕಾಸ್ಬಿ ಇಷ್ಟುಮಟ್ಟಿಗೆ ಅಪ್ರಿಯನಾಗಿದ್ದಾನೆಂದು ತಿಳಿದು ನನಗೆ ಆಶ್ಚರ್ಯವಾಯಿತು' ಎಂದು ಅವನೇ ನನಗೊಮ್ಮೆ ತಿಳಿಸಿದ."

ಜೆಂಗರ್ ಅಂಜಿಕೆಯಿಂದಲೇ ಪ್ರಶ್ನೆ ಹಾಕಿದ, "ಅವನನ್ನು ನಮ್ಮ ಕಡೆಗೆ ಒಲಿಸಿಕೊಳ್ಳಬಹುದೆಂಬುದು, ನಿನ್ನ ಆಲೋಚನೆಯಲ್ಲತಾನೆ?"

ಮುಗುಳು ನಗುತ್ತ ಆಕೆ ಸ್ವಲ್ಪ ಹೊತ್ತು ನಿಂತಳು.

"ಗವರ್ನರ್ ಪಕ್ಷದಲ್ಲಿ ಶ್ರೀಮಂತಾಗ್ರಣಿಗಳೂ, ಅತ್ಯಂತ ಪ್ರಭಾವಶಾಲಿಗಳೂ ಇರುವರೆಂಬ ಭಾವನೆಯೇ, ಅವನು ಆ ಪಕ್ಷವನ್ನು ಅನುಸರಿಸಿದುದರ ನಿಜವಾದ ಕಾರಣವೆಂದು ನನ್ನ ನಂಬುಗೆ. ಪಾಪ್ಯುಲರ್ ಪಾರ್ಟಿಯವರು ಯಾರ್‍ಯಾರು, ಅವರಿಗೆ ಎಷ್ಟೆಲ್ಲ ಭೂಮಿ ಕಾಣಿಯಿದೆ, ಸೇವಕರುಗಳು ಎಷ್ಟು ಮಂದಿ ಇದ್ದಾರೆ ಎಂಬುದನ್ನೆಲ್ಲ ನಾನು ತಿಳಿಸಿದಾಗ, ಅವನು ಸ್ವಲ್ಪ ಮೆಲುಕು ಹಾಕಿದ."

ಜೆಂಗರನ ಕಣ್ಣುಗಳು ಅರಳಿದವು.

"ಅಲೆಕ್ಸಾಂಡರ್ ಅರ್ಲ್ ಆಫ್ ಸ್ಟರ್ಲಿಂಗನ ದಾಯಾದಿ, ಆ ಪ್ರಶಸ್ತಿಗೆ ಅವನೇ ಹಕ್ಕುದಾರ ಎಂಬುದನ್ನು ಕೈ ಮರೆಮಾಡಿಕೊಂಡು ಪಿಸುಗುಟ್ಟಿದಾಗ, ಅಲೆಕ್ಸಾಂಡರ್ ಬಳಿಗೆ ಪಟಕ್ಕನೆ ಓಡಿಯೇಬಿಟ್ಟ!"

ಜೆಂಗರ್ ನಕ್ಕ. "ಒಳ್ಳೆ ಜಾಣೆ ನೀನು! ಒಬ್ಬ ಶತ್ರುವನ್ನು ಮಿತ್ರನನ್ನಾಗಿ ಪರಿವರ್ತಿಸ ಬಲ್ಲೆಯಾದರೆ, ಅದರಿಂದ ನನಗೆ ನೇಣು ಗಲ್ಲು ತಪ್ಪದಿದ್ದರೂ, ಕ್ರಿಸ್ತಧರ್ಮ ಪಾಲನೆಯ ಯಶಸ್ಸು ತಪ್ಪದು!"

# ಅಧ್ಯಾಯ ೨೮

## ಹೊಸ ನ್ಯಾಯವಾದಿಯ ಪ್ರಥಮ ಪರೀಕ್ಷೆ

ಜೈಲಿನಲ್ಲಿ ಜೆಂಗರಿಗೆ ಹೊತ್ತೇ ಹೋಗಲಿಲ್ಲ. ಅಕ್ಷರ ಜೋಡಿಸುವ ಮುದ್ರಿಸುವ ಅವನ ಮುದ್ರಣ ಜ್ಞಾನ, ಕುಶಲತೆಗಳೆಲ್ಲ ವ್ಯರ್ಥವಾಗುತ್ತಿದ್ದವು. ಬೇಸರಿಕೆಯಿಂದ ಸೆರೆ ಖಾನೆಯಲ್ಲಿ ಶತಪಥ ತಿರುಗುತ್ತಿದ್ದ. ಒಮ್ಮೊಮ್ಮೆ ಮಾಡಲು ಏನೂ ಕೆಲಸವಿಲ್ಲದೆ, ಗೋಡೆಗೆ ಗುದ್ದುತ್ತಿದ್ದ. ಉಪಯೋಗ ತಪ್ಪಿದ ಪ್ರಬಲ ಸ್ನಾಯುಗಳು ಮೆದುವಾಗುತ್ತಿದ್ದವು.

ವಸಂತ ಬಂದೊಡನೆಯೇ ಕಿಟಕಿಯ ಸರಳುಗಳನ್ನು ಹಿಡಿದು, ಚಿಗುರುತ್ತಿದ್ದ ಎಲೆಗಳನ್ನೇ ದಿಟ್ಟಿಸುತ್ತಿದ್ದ. ಬಿಸಿಲು ದಿನಗಳಲ್ಲಿ, ಸಮೀಪದಲ್ಲಿಯೇ ಇದ್ದ ಬೇಯಾರ್ಡನ ಸಕ್ಕರೆ ಕಾರ್ಖಾನೆಯಿಂದ ಬರುತ್ತಿದ್ದ ಕಂಪನ್ನು ಮೂಸುವ ಕೆಲಸ. ಎಲ್ಲಾದರೂ ಬೆಂಕಿಬಿದ್ದರೆ ಅವನಿಗೆ ಸಂತೋಷವಾಗುತ್ತಿತ್ತು. ಆಗ ಜನಗಳು ಗದ್ದಲಮಾಡುತ್ತಾ ಓಡಾಡುತ್ತಿದ್ದರು. ಪಕ್ಕದ ಕೊಟಡಿಯಲ್ಲಿಯೇ ಇದ್ದ ಹೊಸ ಅಗ್ನಿಶಾಮಕ ಯಂತ್ರವನ್ನು ಒಯ್ಯುವ ಸಡಗರ, ಸಪ್ಪಳ ಬೇರೆ.

ಜುಲೈ ಹದಿನಾರರ ಬುಧವಾರ ಇದ್ದಕ್ಕಿದ್ದಂತೆ ಯಮುನ ದರ್ಶನವಾಯಿತು. "ವೈಟ್ ಹಾಲ್ ಗುಡ್ಡಗಳ ಮೇಲೆ ಹೊಸ ಬ್ಯಾಟರಿ" (ಅಂದಿನಿಂದ ಆ ಪ್ರದೇಶಕ್ಕೆ ಬ್ಯಾಟರಿ ಎಂದು ಹೆಸರೇ ಇದೆ,) ಶಂಕುಸ್ಥಾಪನೆಯ ಮುಕ್ತಾಯ ಸಮಾರಂಭವಾಗಿ, ಗವರ್ನರ್ ಕಾಸ್ಬಿ ಭಾರಿ ಭೋಜನ ಕೂಟವನ್ನು ಏರ್ಪಡಿಸಿದ್ದ. ಗವರ್ನರ್, ರಾಜಪ್ರತಿನಿಧಿ ಮಂಡಲದ ಗವರ್ನರ್ ಪಕ್ಷದ ಸದಸ್ಯರೂ ಮತ್ತು ಅನೇಕ ಮಂದಿ "ನಗರದ ಗಣ್ಯರೂ, ಪ್ರಮುಖ ವರ್ತಕರೂ" ಮೇಲು ವೇದಿಕೆಯ ಶಂಕು ಸ್ಥಾಪನೆಗೆ ಬಂದಿದ್ದರು. ಭಾಷಣಗಳಾದವು, ಧ್ವಜಗಳನ್ನಾಡಿ

ಸಿದ್ಧವಾಯಿತು. ಹಳೆಯ ತುಕ್ಕುಹಿಡಿದ ಫಿರಂಗಿಗಳು ಕುಶಾಲು ತೋಪು ಗಳನ್ನು ಹಾರಿಸಿದವು.

ನೋಟಕ್ಕೂ, ಊಟಕ್ಕೂ ಗುಂಪು ನೆರೆಯಿತು. ಗವರ್ನರೂ, ಅವರ ಮಿತ್ರರೂ ಅಂದಿಗೆಂದೇ ಕಟ್ಟಿದ್ದ ಮರದ ಗುಡಿಸಲೊಂದರಲ್ಲಿ ಭುಜಿಸಿದರು. "ಕಾರ್ಮಿಕರು, ಕೆಲಸಗಾರರು ಮತ್ತು ಜನಗಳಿಗಾಗಿ ಬೀರು ಮದ್ಯಗಳನ್ನೂ" ಬೆಂಕಿಯಮೇಲೆ, ಅನಾಮತ್ತಾಗಿ ಎತ್ತಿ ಕಟ್ಟಿದ್ದ ದೊಡ್ಡ ಹೋರಿಯೊಂದನ್ನೂ, ಗವರ್ನರ್ ಒದಗಿಸಿದ್ದ.

ಎಲ್ಲರೂ ಸಂತೋಷಚಿತ್ತರಾಗಿದ್ದರು. ಯುದ್ಧವಾದರೆ ನ್ಯೂಯಾರ್ಕನ್ನು ರಕ್ಷಿಸುವ ಸಲುವಾಗಿ ಈ ಹೊಸ ಬ್ಯಾಟರಿಯನ್ನು ನಿರ್ಮಿಸ ಬೇಕೆಂದು ಪಾಪ್ಯುಲರ್ ಪಾರ್ಟಿ ಕೂಡ ಕೇಳಿತ್ತು. ಆದರೆ ಗೆಜೆಟ್ ಈ ರೀತಿ ವರದಿ ಮಾಡಿತು:

"ಗಂಭೀರ ಸಮಾರಂಭವಾದ ಮೇಲೆ, ಬಂದರೀತಿಯಲ್ಲಿಯೇ (ಮೆರವಣಿಗೆಯಲ್ಲಿ) ಗವರ್ನರ್ ವಾಪಸ್ಸಾಗುತ್ತಿದ್ದಾಗ, ತೋಪುಗಳ ಕೊನೆ ಸುತ್ತು ಸ್ಫೋಟವಾಗುತ್ತಿತ್ತು. ಕಟ್ಟಕಡೆಯ ತೋಪು, ತುಕ್ಕು ಹಿಡಿದು, ಬಹು ಮಟ್ಟಿಗೆ ಜೀರ್ಣವಾಗಿದ್ದುದರಿಂದ, ಸಿಡಿದಾಗ, ಅದರ ತುಣುಕುಗಳು ನಾನಾ ಕಡೆಗೆ ಹಾರಿ ಮೂವರ ಮರಣಕ್ಕೆ ಕಾರಣ ವಾದವು."

ಒಂದು ಮಗು, ಒಬ್ಬ ತರುಣ, ಷರೀಫ್ ಜಾರ್ಜ್ ಹೆಂಡ್ರಿಕ್ ಸೈಮ್ಸ್ ಇವರೇ ಬಲಿಯಾದರು.

ಷರೀಫನ ಮರಣ ವರದಿಯನ್ನು ಕ್ಯಾಥರೀನ್ ಜೆಂಗರ್, 'ಜರ್ನಲ್' ನಲ್ಲಿ ಬರೆದಳು: "ಅವನಂಥವನೇ ಇನ್ನೊಬ್ಬನನ್ನು ಅವನ ಸ್ಥಾನಕ್ಕೆ ಒದಗಿಸಬೇಕೆಂಬ ಈ ನಗರದ ನಿವಾಸಿಗಳ ಸಾರ್ವತ್ರಿಕ ಕೋರಿಕೆ, ನಾನು ಮಾಡಬಹುದಾದ ಅವನ ಯಾವುದೇ ಗುಣವರ್ಣನೆ ಯನ್ನು ಮೀರಿಸಿದೆ."

ಜೆಂಗರ್‌ನನ್ನು ಬಂಧಿಸಿದ ಅಧಿಕಾರಿ ಅವನೇ. ಆದರೂ ಇಂಥ ಪ್ರಶಂಸೆ ಬಲು ಔದಾರ್ಯದ್ದು ಎನ್ನಬೇಕು.

ಜುಲೈ ಕೊನೆಯಲ್ಲಿ, ಹೊಸ ನ್ಯಾಯವಾದಿಯ ಪ್ರಥಮ

ಪರೀಕ್ಷೆ ಸಂಭವಿಸಿತು

ಸೆಕೆಯ ಒಂದು ಸಂಜೆ ೫ ಗಂಟೆಯಲ್ಲಿ ಜೆಂಗರನನ್ನು ಮೇಲಂತಸ್ತಿನ ಕೋರ್ಟಿಗೆ, ಜ್ಯೂರಿಗಳ ಪಟ್ಟಿಯ ಸಿದ್ಧತೆಗಾಗಿ ಕರೆದೊಯ್ಯಲಾಯಿತು. ಲೂಯಿಮಾರಿಸ್ ಜ್ಯೂನಿಯರ್, ಫ್ರೆಡ್ ಬೆಕ್ಕರ್, ವಾದ್ಯಗಾರ ಹೆಂಡ್ರಿಕ್ ಕುಕ್, ಗಾಡಿಕಾರ್ಖಾನೆಯ ನಿಕ್ ಸ್ನಿಜ್, ರಾಜಪ್ರತಿನಿಧಿ ಮಂಡಳದ ಅಧಿವೇಶನಗಳ ಕಾಲವನ್ನು ಗವರ್ನರ್ ಕಾಸ್ಬಿ ತಿಳಿಸದೆ ಇದ್ದರೂ ಇನ್ನೂ ಅದರ ಅಧ್ಯಕ್ಷನಾಗಿಯೇ ಇದ್ದ, ವೃದ್ಧ ರಿಪ್ ವಾನ್ ಡಾಂ ಹೀಗೆ ಹಲವಾರು ಮಂದಿ ತನ್ನ ಸ್ನೇಹಿತರು ಅಲ್ಲಿ ನೆರೆದಿದ್ದುದನ್ನು ಕಂಡು ಅವನಿಗೆ ಸಂತೋಷವಾಯಿತು

ತನ್ನ ದಪ್ಪ ಹುಬ್ಬುಗಳನ್ನು ಕುಗ್ಗಿಸಿ ಸಣ್ಣಗೆ ಮಾಡಿಕೊಂಡು, ತನಗೆ ತಾನೇ ಮುಗುಳ್ನಗುತ್ತ, ಅಟಾರ್ನಿ ಜನರಲ್ ಬ್ರಾಡ್ಲೆ ತಡವಾಗಿ ಬಂದ. ನ್ಯಾಯಮೂರ್ತಿಗಳು ಬಂದಿರಲಿಲ್ಲ.

ಸುಂದರ ವಸ್ತ್ರ ವಿಭೂಷಿತನಾದ ತನ್ನ ನ್ಯಾಯವಾದಿಯ ಪಕ್ಕದಲ್ಲಿ ಉದ್ದವಾದ ಮೇಜಿನ ಹಿಂದೆ ಕುಳಿತ ಜೆಂಗರ್, ಚೇಂಬರ್ಸ್ ಕಡೆಯಿಂದ ಸಾಬೂನಿನ ಹಾಗೂ ವಿಗ್ ಪೌಡರಿನ ಸುವಾಸನೆ ಬರುತ್ತಿರುವುದನ್ನು ಗಮನಿಸಿದ. ಸಂಶಯದಿಂದ ಜೆಂಗರ್ ಮುಖ ಸಿಂಡರಿಸಿದ. ಚೇಂಬರ್ಸ್ ಹಿತವಾಗಿ ಮುಗುಳು ನಕ್ಕಾಗ, ತನಗೆ ದ್ರೋಹ ಬಗೆಯಲು ಪಿತೂರಿಯ ಯೋಚನೆ ಮಾಡುತ್ತಿರಬಹುದೆಂದು ಭಾವಿಸಿದ.

ಸಾವು ಜೆಂಗರ್‌ನ ಸಮಸ್ಯೆಯನ್ನು ಕ್ಲಿಷ್ಟಗೊಳಿಸಿತ್ತು. ಮೊದಲು ಷರೀಫ್, ಓಟರುಗಳ ಪಟ್ಟಿಯಿಂದ ೪೮ ಮಂದಿ ಜ್ಯೂರರುಗಳಾಗ ಬಹುದಾದವರ ಹೆಸರುಗಳನ್ನು ಬರೆಯಬೇಕು; ಅನಂತರ ಈ ೪೮ ಮಂದಿಗಳಲ್ಲಿ ೧೨ ಮಂದಿ ಜ್ಯೂರರುಗಳ ಆಯ್ಕೆಯಾಗಬೇಕು–ಈ ಸಂಪ್ರದಾಯವನ್ನು 'ಜರ್ನಲ್' ವಿವರಿಸಿತ್ತು. ಆದರೆ ಈಗ ಷರೀಫೇ ಇರಲಿಲ್ಲ. ಈ ಬಿಸಿಲ ಕಾಲದಲ್ಲಿ ನ್ಯೂ ಜೆರ್ಸಿಯ ಸಮುದ್ರ ದಂಡೆಯಲ್ಲಿ ವಿಶ್ರಾಂತಿ ಪಡೆಯುತ್ತಿದ್ದ ಗವರ್ನರ್ ಇನ್ನೂ ಷರೀಫನ ನೇಮಕ ಮಾಡಿರಲಿಲ್ಲ.

ಅದರಿಂದ ಆ ಕೆಲಸ, ಕಟ್ಟಿಗೆಯಂತಿದ್ದ, ನಿಕರ ಸ್ವಭಾವದ

ಜೇಂಸ್ ಲೈನ್ ಎಂಬ ಕೋರ್ಟ್ ಗುಮಾಸ್ತೆಯ ಪಾಲಿಗೆ ಬಂದಿತ್ತು. ಆತ ಸರ್ವೇಯರೂ ಆಗಿದ್ದ. ಹಲ ವರ್ಷಗಳ ಕೆಳಗೆ ಬ್ರಾಡ್‌ಫರ್ಡ್ ಮುದ್ರಿಸಿದ ಇವನ ನ್ಯೂಯಾರ್ಕ್ ನಕ್ಷೆ, ಅತ್ಯುತ್ತಮವೆನಿಸಿತ್ತು.

ಚೇಂಬರ್ಸ್ ಬಾಯಿ ಬಿಚ್ಚಿದ: "ಜ್ಯೂರಿ ಪಟ್ಟಿಯನ್ನು ರಚಿಸಲು ನಾವು ಸಿದ್ಧ."

ನ್ಯಾಯಮೂರ್ತಿಗಳು ಬಾರದೆ, ತಾನೇ ಕೋರ್ಟಿನ ನಿರ್ವಾಹಕ ಸ್ಥಾನದಲ್ಲಿದ್ದುದರಿಂದ, ಹೆಮ್ಮೆಯಿಂದ ಬೀಗುತ್ತಿದ್ದ ಗುಮಾಸ್ತೆ, ಠೀವಿಯಿಂದ, ದೊಡ್ಡದೊಂದು ಕಾಗದದ ಹಾಳೆಯನ್ನು ತೆಗೆದು, ಆಶ್ಚರ್ಯಕರವೆನಿಸುವಷ್ಟು ದಪ್ಪ ಧ್ವನಿಯಲ್ಲಿ ಹೆಸರುಗಳನ್ನು ಓದ ತೊಡಗಿದ.

ಸಾವಿನ ದವಡೆಯಿಂದ ತಪ್ಪಿಸಿಕೊಳ್ಳಲು ಇದ್ದ ಅವಕಾಶ ಇದೊಂದೇ ಆದುದರಿಂದ ಜೆಂಗರ್ ಎಚ್ಚರಿಕೆಯಿಂದ ಆಲಿಸಿದ. ತಪ್ಪಿತಸ್ಥನೆಂದು ಈಗಾಗಲೇ ನ್ಯಾಯಮೂರ್ತಿ ಹೇಳಿಬಿಟ್ಟಿದ್ದುದರಿಂದ, ಅವನ ಆಸೆಯೆಲ್ಲ ಜ್ಯೂರಿಗಳನ್ನೇ ಅವಲಂಬಿಸಿತ್ತು.

ಹೆಸರುಗಳನ್ನು ಆಲಿಸುತ್ತಿದ್ದಂತೆ ಗಾಭರಿ ಹೆಚ್ಚಿತು. ಗುಮಾಸ್ತೆಯ ಪಟ್ಟಿಯಲ್ಲಿದ್ದವರು, ಕೋಟೆಯ ಪಹರೆಯವರು, ಸುಂಕದ ಇನ್ಸ್‌ಪೆಕ್ಟರು ಗಳು ಮತ್ತು ಗವರ್ನರ್ ಇಷ್ಟಪ್ರಕಾರದ ಅವಧಿಗೆ ಸರಕಾರಿ ನೌಕರಿ ಗಳನ್ನು ಹಿಡಿದ ಇತರರು.

ಕೆಲವರಂತೂ ಓಟರುಗಳೇ ಅಲ್ಲ. ಕಾಸ್ಬಿಯ ರೊಟ್ಟಿ ಅಂಗಡಿ ಯವನೂ, ಚಮ್ಮಾರ, ಲಾಯದವನೂ, ವಿರುದ್ಧ ಹಸ್ತಪತ್ರಿಕೆಗಳನ್ನು ಜೆಂಗರ್ ಮುದ್ರಿಸಿದ್ದ ಪರಿಣಾಮವಾಗಿ ಕಳೆದ ಚುನಾವಣೆಯಲ್ಲಿ ಸೋತ ಅನೇಕ ಮಾಜಿ ಆಲ್ಡರ್‌ಮನ್‌ಗಳೂ ಇವರುಗಳ ಹೆಸರು ಪಟ್ಟಿಯಲ್ಲಿತ್ತು.

ತನ್ನ ನ್ಯಾಯವಾದಿಯನ್ನೂ ಗಮನಿಸದೆ, ತನ್ನ ಸ್ನೇಹಿತರು ಗಳಿಗೆ ಮನವಿಮಾಡಿಕೊಳ್ಳಲು ಜೆಂಗರ್ ತಿರುಗಿದ. ಲ್ಯೂಯಿಮಾರಿಸ್ ಎದ್ದುನಿಂತು, ತನ್ನದೇ ಪಟ್ಟಿಯನ್ನು ಪರಿಶೀಲಿಸುತ್ತಿದ್ದ ಆಟಾರ್ನಿ ಜನರಲ್ ಬ್ರಾಡ್ಲೆಯ ಕಡೆ ಆಪಾದನಾ ಸೂಚಕವಾಗಿ ಕೈ

ತೋರಿಸುತ್ತಿದ್ದುದನ್ನು ಕಂಡ. "ಅಲ್ಲಿರುವ ಅಟಾರ್ನಿ ಜನರಲ್—ಹಾಗೆಂದು, ತಿಳಿದವರೊಬ್ಬರು ನನಗೆ ಹೇಳಿದ್ದಾರೆ—ಈಗಾಗಲೆ ತನ್ನ ಕೈಯಲ್ಲಿ ಜ್ಯೂರಿ ಪಟ್ಟಿಯನ್ನು ಇಟ್ಟುಕೊಂಡಿದ್ದು, ಅದನ್ನು ಹಾಜರ್ ಪಡಿಸಲು ಸಿದ್ಧರಾಗಿದ್ದಾರೆ!"

ಬ್ರಾಡ್ಲೆಯ ಮುಖದ ಮೇಲಿನ ಮುಗುಳು ನಗೆ ಮಾಯವಾಯಿತು. ದಿಕ್ಕುತೋಚದೆ, ಬ್ರಾಡ್ಲೆ ಕೈಲಿದ್ದ ಕಾಗದವನ್ನು ಜೇಬಿಗೆ ತುರುಕಿಕೊಂಡ.

ಈ ಸಂದರ್ಭದಲ್ಲಿ, ತನ್ನ ಕಕ್ಷಿಗಾರನ ಪರವಾಗಿ ಏನಾದರೂ ಮಾಡಲೇಬೇಕಾಗಿದ್ದ ಚೇಂಬರ್ಸ್ ಎದ್ದುನಿಂತು, ತನ್ನಿಂದ ಏನನ್ನು ಬಯಸುವಂತಹ ಜನರಿದ್ದಾರೆಂಬುದನ್ನು ನೋಡಲು ಸುತ್ತ ಕಣ್ಣು ಹಾಯಿಸಿದ.

ಅವರೆಲ್ಲರ ಕಠಿಣ ಮುಖಮುದ್ರೆಗಳನ್ನು ಕ್ಷಣಮಾತ್ರ ಕಂಡ ನ್ಯಾಯವಾದಿ. ಸ್ವಲ್ಪ ಕೆಮ್ಮಿ ಸಾಂಪ್ರದಾಯಕವಾಗಿ ಮಾತನಾಡಿದ, "ಗುಮಾಸ್ತರೇ, ವೋಟರುಗಳ ಪಟ್ಟಿಯನ್ನು ತಂದು, ನಮ್ಮೆದುರಿಗೇ ಅದರಿಂದ ಅರ್ಹರಾದ ೪೮ ಮಂದಿಯ ಹೆಸರುಗಳನ್ನು ಆಯ್ಕೆಮಾಡಬೇಕೆಂದು, ನನ್ನ ಕಕ್ಷಿಯ ಪರವಾಗಿ, ನಿಮ್ಮನ್ನು ನಾನು ಕೇಳಿಕೊಳ್ಳಬೇಕಾಗಿದೆ."

ಮನದಲ್ಲೇ ಹರ್ಷೋದ್ಗಾರ ಮಾಡುತ್ತ, ಜೆಂಗರ್ ಕೈತಟ್ಟಿದ. ಮುಂದೆ ಬಾಗಿ, ನ್ಯಾಯವಾದಿಯ ಕೋಟಿನ ತುದಿಹಿಡಿದು, ಪಿಸುಗುಟ್ಟಿದ, "ಒಳ್ಳೆ ಕೆಲಸ! ಹೀಗೇ ಇರಲಿ!" ಎಂದ.

ಸಿಟ್ಟುಗೊಂಡ ಗುಮಾಸ್ತೆ, "ನನ್ನ ಬಳಿಯಲ್ಲಾಗಲೇ ಪಟ್ಟಿ ಇದೆ" ಎಂದು ಸಾಧಿಸತೊಡಗಿದ. ತಾನೇ ಬರೆದಿದ್ದ ಪಟ್ಟಿಯ ಕಾಗದ ಸುರುಳಿ ಸುತ್ತದಂತೆ ಹಿಕ್ಕುತ್ತಿದ್ದ.

ಈ ಬಿಕ್ಕಟ್ಟಿನಲ್ಲಿ, ಎಲ್ಲ ಕಡೆಗಳಿಂದಲೂ ತನ್ನನ್ನೇ ದುರುಗುಟ್ಟುತ್ತಿದ್ದ ಗುಂಪನ್ನು ಗಾಬರಿಯಿಂದ ಗಮನಿಸುತ್ತಾ ಚೇಂಬರ್ಸ್ ಸುಮ್ಮನೆ ನಿಂತ. ಕಟ್ಟ ಕಡೆಗೆ ಬಾಯಿಬಿಟ್ಟ, "ಗುಮಾಸ್ತರೇ, ನೀವು ನಾಳೆ, ಮಾನ್ಯ ನ್ಯಾಯಮೂರ್ತಿಗಳ ಮುಂದೆ ಮನವಿಮಾಡಿಕೊಳ್ಳಿ" ಎಂದ.

ಜೆಂಗರ್ ಸಂತೋಷದಿಂದ ತಟಕ್ಕನೆ ಎದ್ದು ತನ್ನ ನ್ಯಾಯವಾದಿಯನ್ನು ಪ್ರಶಂಸಿಸಲು ಅವನ ಬೆನ್ನು ತಟ್ಟಿದ. ಮಾರಿಸ್ ಮತ್ತು ವಾರ್ಡಾಂ ಕೂಡ ಮುಂದೆ ಬಂದು ಅಭಿನಂದನೆಗಳನ್ನು ಸಲ್ಲಿಸಿ ಒಳ್ಳೆಯದಾಗಲೆಂದು ಹರಸಿದರು.

ಮರು ಬೆಳಿಗ್ಗೆ ಜೆಂಗರ್ ಇಬ್ಬರು ಪಹರೆಯವರ ಕಾವಲಿನಲ್ಲಿ ಕಳವಳದಿಂದ ಕೋರ್ಟಿಗೆ ಬಂದ. ಜ್ಯೂರಿಮಂಡಲ ರಚನೆಯ ಈ ಅಸಹ್ಯ ಪ್ರಕರಣದ ಸುದ್ದಿ ಹಬ್ಬಿದ್ದರಿಂದಲೋ ಏನೋ, ಅಂದು ಹೆಚ್ಚು ಜನ ಬಂದು ನೆರೆದಿದ್ದರು. ಜೆಂಗರ್ ಮುದ್ರಣಾಲಯದ ಸುತ್ತು ಮುತ್ತಲ ಅಂಗಡಿಯವರೆಲ್ಲರೂ ಬಂದು, ತೀವ್ರ ಆಸಕ್ತಿಯಿಂದ ಮುಂದಿನ ಘಟನೆಗಳನ್ನು ಎದುರು ನೋಡುತ್ತ ಕುಳಿತಿದ್ದರು. ಗವರ್ನರ್ ಪಕ್ಷದವರು ಮೋಸದಿಂದ ಜೆಂಗರನನ್ನೇನಾದರೂ ಗಲ್ಲಿಗೇರಿಸಿದರೆ, ತಮಗೂ ಸತ್ಯವನ್ನು ನುಡಿವ, ಮುದ್ರಿಸುವ ಸ್ವಾತಂತ್ರ್ಯ ಎಂದೆಂದಿಗೂ ಇಲ್ಲವಾಗಿ ತಮ್ಮ ಜೀವಕ್ಕೂ ಸುರಕ್ಷಿತತೆ ಇಲ್ಲದೆ ಹೋಗುತ್ತದೆ ಎಂಬುದನ್ನು ಅವರು ಅರಿತಿದ್ದರು.

ಚೇಂಬರ್ಸ್ ಎದ್ದು ನಿಂತು ಹಿಂದಿನ ಮಧ್ಯಾಹ್ನ ಗುಮಾಸ್ತೆ ಏನು ಮಾಡಿದನೆಂಬುದನ್ನು, ಕ್ಷಮಾಯಾಚಕ ರೀತಿಯಲ್ಲಿ ವಿವರಿಸಿದ.

ನೆರೆದಿದ್ದ ಗುಂಪಿನ ಕಡೆಯಿಂದ ಕೋಪದ ಅಲೆಯೆದ್ದಿತು. ನಿಜವಾದ ಹೋರಾಟ ಆರಂಭವಾಗಿದ್ದುದರಿಂದ, ಜೆಂಗರ್‌ನ ನ್ಯಾಯವಾದಿ ತನ್ನ ಪ್ರಾಮುಖ್ಯ ಸ್ಥಾನವನ್ನರಿತು ಸಂತೋಷಭರಿತನಾಗಿದ್ದಂತೆ ಕಂಡುಬಂತು. ಅವನು ತನ್ನ ಕಡೆ ತಿರುಗಿದಾಗ, ಜೆಂಗರ್ "ಹಾಗೇ ಮುಂದುವರಿಸಿ! ಹಾಗೇ ಮುಂದುವರಿಸಿ" ಎಂದು ಪಿಸುಮಾತು ನುಡಿದ.

ಒಂದು ಹೆಜ್ಜೆ ಮುಂದಿಟ್ಟು, ಎರಡು ಕೈ ಬೆರಳುಗಳನ್ನು ತನ್ನ ಸುಂದರವಾದ ನಕಾಶೆಯ ವೇಸ್ಟ್ ಕೋಟಿನ ಎರಡು ಗುಂಡಿಗಳ ನಡುವೆ ತುರುಕಿ, ನ್ಯಾಯವಾದಿ, ದೃಢವಾದ ಮಾತುಗಳಲ್ಲಿ ನುಡಿದ, "ಮಾಮೂಲಿನಂತೆ ಎರಡೂ ಪಕ್ಷಗಳ ಸಮ್ಮುಖದಲ್ಲಿ ಓಟರುಗಳ ಪಟ್ಟಿಯಿಂದ ೪೮ ಮಂದಿ ಜ್ಯೂರರುಗಳ ಹೆಸರುಗಳನ್ನು ಪ್ರತಿಮಾಡಲಿ

ಎಂದು ನಾನು ಸೂಚಿಸುತ್ತೇನೆ."

ನ್ಯಾಯಮೂರ್ತಿ ಡಿಲಾನ್ಸೆ ತನ್ನ ಗಂಟಲು ಸರಿಪಡಿಸಿಕೊಂಡು ಕೊಠಡಿಯನ್ನೆಲ್ಲ ಒಮ್ಮೆ ಗಮನಿಸಿದ. ಸುಮಾರು ನೂರು ಮುಖಗಳು ಬೆದರಿಸುವ ರೀತಿಯಲ್ಲಿ ಅವನನ್ನು ದುರುಗುಟ್ಟಿದವು. ಜೆಂಗರ್ ಕಳವಳದಿಂದ ಕಾದ. ಸ್ವಲ್ಪ ಹೊತ್ತಿನ ನಂತರ ನ್ಯಾಯಮೂರ್ತಿ ಕೇಳಿಸದಷ್ಟು ಮೆಲುಧ್ವನಿಯಲ್ಲಿ "ಸೂಚನೆಗೆ ಸಮ್ಮತಿ ನೀಡಲಾಗಿದೆ" ಎಂದ.

ಚೇಂಬರ್ಸನ ಕ್ರಮವೊಪ್ಪಿ ಜೆಂಗರ್ ತಲೆಯಾಡಿಸಿದ. ಚೇಂಬರ್ಸ್ ಮೊದಲ ಗೆಲುವನ್ನು ಹಿಂಬಾಲಿಸಿ ಮತ್ತೆ ನುಡಿದ, "ಸೂಚಿತವಾಗುವ ಆಲ ಮಂದಿಯಲ್ಲಿ ಯಾರ ಬಗೆಗಾದರೂ ಆಕ್ಷೇಪಣೆ ಕೇಳಿಬಂದರೆ, ಗುಮಾಸ್ತೆ ಅದನ್ನು ಕೇಳಬೇಕು ಮತ್ತು ಅಂತಹ ಆಕ್ಷೇಪಣೆಗಳಲ್ಲಿ ನ್ಯಾಯವಾದುವುಗಳನ್ನು ಅಂಗೀಕರಿಸಬೇಕು ಎಂದೂ ಸೂಚಿಸುತ್ತೇನೆ."

"ಒಪ್ಪಿಗೆ" ಎಂದು ಗೊಣಗಿದ ನ್ಯಾಯಮೂರ್ತಿ. ನಿರಾಕರಿಸಲು ಸಾಧ್ಯವಿಲ್ಲದ್ದರಿಂದ, ಅವನಿಗೆ ಕೋಪ ಉಮ್ಮಳಿಸಿತ್ತು.

ಜೆಂಗರನ ಬೆನ್ನು ನಿಧಾನವಾಗಿ ನೆಟ್ಟಗಾಯಿತು. ಮತ್ತೆ ಉಸಿರಾಡತೊಡಗಿದ. ವೋಟರುಗಳ ಪಟ್ಟಿಯಿಂದ ಅಲ್ಲೊಬ್ಬ ಇಲ್ಲೊಬ್ಬ ನಂತೆ ಆರಿಸಿದ ಹೆಸರುಗಳಿಂದ ತನ್ನ ಜ್ಯೂರಿ ಮಂಡಲ ಆಯ್ಕೆಯಾಗಲಿರುವುದರಿಂದ, ತನಗೆ ನ್ಯಾಯವಾದ ವಿಚಾರಣೆ ಲಭ್ಯವಾಗುವ ಸದವಕಾಶ ಇದ್ದಂತಿತ್ತು.

ತನ್ನನ್ನು ಕರೆದುಕೊಂಡು ಹೋಗಲು ಪಹರೆಯವರು ಬಂದಾಗ, ತನ್ನ ನ್ಯಾಯವಾದಿಯ ಕೈಹಿಡಿದು, ಅಭಿನಂದಿಸಿದ.

"ನಾನು ಪ್ರಾಮುಖ್ಯವಾದೊಂದು ಸಮಾಚಾರ ಕೇಳಿದ್ದೇನೆ" ಚೇಂಬರ್ಸ್ ಪಿಸುಗುಟ್ಟಿದ. "ಈಗ ಹೆಚ್ಚು ವಿವರ ತಿಳಿಸಲಾರೆ, ಈ ಕೊಠಡಿಯಲ್ಲಿ ಇರುವವರಲ್ಲದೆ, ಬೇರೆ ಕಡೆ ನಿನಗಾಗಿ ಕೆಲಸ ಮಾಡುತ್ತಿರುವ ಇನ್ನೂ ಅನೇಕ ಸ್ನೇಹಿತರಿದ್ದಾರೆ ಎಂದು ಮಾತ್ರ ಹೇಳಬಲ್ಲೆ."

ಚೇಂಬರ್ಸ್ ಹೇಳಿದ್ದೇನು? ನಾನೂ ನಿನ್ನ ಮಿತ್ರ ಎಂದೇ?

ಸೂಚ್ಯವಾಗೇನೋ ಅದೇ ಅರ್ಥ. ಕಕ್ಷಿಯನ್ನು ಸರಿಯಾಗಿ ನೋಡಿ ಕೊಳ್ಳುವಂತೆ ಯಾರೋ ಹೇಳಿರಬೇಕು ಅಥವಾ ಬರೆದಿರಬೇಕು ಮತ್ತು ಮನವೊಲಿಸಿರಬೇಕು. ಯಾರವರು ?

ಪಹರೆಯವರು ಆತುರದಿಂದ ಕರೆದೊಯ್ದಾಗ, ಜೆಂಗರ್ ಭುಜ ನೆಟ್ಟಗಿಟ್ಟುಕೊಂಡ ; ಕಟ್ಟಕಡೆಗೆ ಹೋರಾಟದ ಅವಕಾಶವೊಂದು ಲಭಿಸಿದಂತೆ ಅವನಿಗೆ ಭಾಸವಾಯಿತು.

---

# ಅಧ್ಯಾಯ ೨೯

## ಜ್ಯೂರಿಗಳ ಉದ್ದೇಶ

ತನ್ನ ಸೆರೆಕೊಠಡಿಯಲ್ಲಿ, ಕಾಗದಗಳು ಹರಡಿದ್ದ ಮೇಜೊಂದರ ಮುಂದೆ ಜೆಂಗರ್ ಕುಳಿತಿದ್ದ. ಲೇಖಣಿಯೊಂದನ್ನು ಹಲ್ಲುಗಳಲ್ಲಿ ಕಚ್ಚಿ, ತೋಳನ್ನು ಮೇಲಕ್ಕೆ ಮುದುಡಿ, ಮಸಿ ಹತ್ತಿದ ಬೆರಳುಗಳನ್ನು ಸವರುವ ಮೂಲಕ ಕೂದಲಿಗೆ ಮಸಿ ಹಚ್ಚಿಕೊಂಡು, ಉತ್ಕಟತೆಯಿಂದ ಕೆಲಸದಲ್ಲಿ ನಿರತನಾಗಿದ್ದ.

ದೌತಿಯ ಕೆಳಗೆ 'ಜರ್ನಲ್'ನ ಮುಂದಿನ ವಾರದ ಸಂಚಿಕೆಯಲ್ಲಿ ಪ್ರಧಾನವಾಗಿ ಪ್ರಕಟವಾಗಲಿದ್ದ ಲೇಖನದ ಕರಡು ಇತ್ತು. ಎಡಗೈಯಲ್ಲಿ ತಾನೇ ಬರೆದ ಪತ್ರ. ಮುಂದೆ, ಯೂರೋಪಿನಿಂದ ಬಂದ ಸುದ್ದಿಗಳೂ, ಸಹಾಯ ನೀಡುವುದಾಗಿ ಬರೆದ ೧೭ ಮಂದಿ ಮಿತ್ರರ ಪತ್ರಗಳೂ ಹರಡಿದ್ದವು. ಈ ಎಲ್ಲಕ್ಕೂ ಸಂಚಿಕೆಯೊಂದರಲ್ಲಿ ಸ್ಥಳವೊದಗಿಸುವುದು ಅಸಾಧ್ಯದ ಮಾತು.

ಎಲ್ಲವನ್ನೂ ಒಂದೆಡೆಗೆ ಸರಿಸಿ, ದೌತಿಯ ಕೆಳಗಿದ್ದ ಕರಡನ್ನು ಕೈಗೆ ತೆಗೆದುಕೊಂಡ. ತನ್ನ ಪಾಲುದಾರ ವಿಲಿಯಂ ಸ್ಮಿತ್‌ನ ಅಭಿಪ್ರಾಯ ಕೇಳದೆ, ಈ ವಿಶೇಷ ಲೇಖನಕ್ಕೆ ಸಮ್ಮತಿಕೊಡಲಾರೆನೆಂದು ಪತ್ರಿಕಾ ಸಂಪಾದಕ ಅಲೆಕ್ಸಾಂಡರ್ ತಿಳಿಸಿದ್ದ. ಅವರೂ ಇನ್ನೇನು ಬಂದಾರೆಂದು ಜೆಂಗರ್ ನಿರೀಕ್ಷಿಸುತ್ತಿದ್ದ.

ಬಲಗೈ ಬೆರಳುಗಳನ್ನು ಮೇಜಿನ ಮೇಲೆ ಬರೆಯುತ್ತ, ಮತ್ತೆ ಲೇಖನವನ್ನು ಗಟ್ಟಿಯಾಗಿ ಓದತೊಡಗಿದ. ಅನಂತರ ಕುರ್ಚಿಯಿಂದೆದ್ದು ಕೊಠಡಿಯಲ್ಲಿ ಶತಪಥ ತಿರುಗಿದ. ಅದರ ವಾಕ್ಯಗಳ ಮೇಲೆ ಕಣ್ಣು ಹಾಯಿಸಿದಾಗಲೆಲ್ಲ, ಉದ್ರೇಕಗೊಳ್ಳುತ್ತಿದ್ದ.

ತನ್ನ ತಂದೆಯ ಕೈಬರೆಹದಲ್ಲಿ ಪ್ರತಿಮಾಡಿದ್ದ ಈ ಲೇಖನವನ್ನು

ಲ್ಯಾಯಿ ಮಾರಿಸ್, ಜ್ಯೂನಿಯರ್ ಕಳಿಸಿದ್ದ. ಅದು ಒಂದು ಪತ್ರದೊಡನೆ ಅದೇ ತಾನೆ ಲಂಡನ್ನಿನಿಂದ ಬಂದಿತ್ತು. ಆಯ್ಕೆ ಮಾಡಿದ್ದೆಂದು ಹೇಳಲಾದ ಆ ಲೇಖನದ ಮಾತೃಪುಸ್ತಕದ ಹೆಸರನ್ನು ಮೊದಲ ಪುಟದ ಮೇಲೆ ಉಲ್ಲೇಖಿಸಲಾಗಿತ್ತು. ಹಿಂದಿನ ವರ್ಷ ಮಾಜಿ ನ್ಯಾಯಮೂರ್ತಿ ಮಾರಿಸ್ ಬರೆದಿದ್ದ ಕೆಲವು ವಿನೋದ ಲೇಖನಗಳ ಶೈಲಿಯಲ್ಲೇ ಈ ಲೇಖನವೂ ಇದ್ದುದರಿಂದ, ಇದನ್ನೂ ಆತನೇ ಬರೆದಿರಬಾರದೇಕೆಂದು ಸಂದೇಹಿಸಿದ.

ಜ್ಯೂರಿಗಳ ಕರ್ತವ್ಯ ಹಾಗೂ ಹಕ್ಕುಗಳನ್ನೂ ಮ್ಯಾಗ್ನಾಕಾರ್ಟಾರೀತ್ಯ ನಾಗರಿಕನ ಹಕ್ಕುಗಳನ್ನೂ ಕುರಿತ ಸಂಭಾಷಣೆಯ ಸ್ವರೂಪದಲ್ಲಿತ್ತು ಆ ಲೇಖನ. ಇತ್ತೀಚೆಗೆ, ಜೆಂಗರ್ ಮ್ಯಾಗ್ನಾಕಾರ್ಟಾ ಕುರಿತು ಎಷ್ಟೋ ಸಾರೆ ಚಿಂತಿಸಿದ್ದ. ಆದರೆ ಈಗ ಅದಕ್ಕೆ ಹೊಸ ಅರ್ಥ ಲಭಿಸಿತ್ತು. ತನ್ನ ಕೋರ್ಟಿನ ಸಮಸ್ಯೆಗೆ ಹೊಂದಿಕೊಂಡಂತೆ ಅದನ್ನು ಪರ್ಯಾಲೋಚಿಸಿದ. ಆಪಾದಿತ ಪತ್ರಿಕೆಯನ್ನು ಮುದ್ರಿಸಿದನೇ, ಇಲ್ಲವೇ ಎಂಬ ಸಂಗತಿಯನ್ನು ಮಾತ್ರವೇ ನಿರ್ಧರಿಸಬೇಕೆಂದು ಜ್ಯೂರಿಗಳಿಗೆ ಡಿಲಾನ್ಸಿ ತಿಳಿಸಲಿದ್ದ. ವಾಸ್ತವವಾಗಿ ಜೆಂಗರೇ ಮುದ್ರಕ. ಪತ್ರಿಕೆಗಳು ದ್ರೋಹಾತ್ಮಕ ನಿಂದನೆಗಳೇ ಹೇಗೆ ಎಂಬ ಇನ್ನೊಂದು ಪ್ರಶ್ನೆ ಕಾನೂನಿಗೆ ಸಂಬಂಧಿಸಿದ್ದಾದ್ದರಿಂದ ಅದನ್ನು ತನ್ನ ನಿರ್ಧಾರಕ್ಕೇ ಬಿಡಬೇಕೆಂದು ನ್ಯಾಯಮೂರ್ತಿ ಹೇಳಲಿದ್ದ. ಆ ಪತ್ರಿಕೆಗಳು ಅಂತಹವೇ ಎಂದೂ ನ್ಯಾಯಮೂರ್ತಿ ಈಗಾಗಲೇ ನಿರ್ಧರಿಸಿಯೂ ಇದ್ದ.

ಜೆಂಗರ್ ಉಳಿಯಬೇಕಾದರೆ, ಜ್ಯೂರಿಗಳು ಎರಡು ಪ್ರಶ್ನೆಗಳನ್ನೂ ನಿರ್ಧರಿಸುವುದೊಂದೇ ಮಾರ್ಗ. ಜ್ಯೂರಿಗಳಿಗೆ ಆ ಧೈರ್ಯವಿದೆಯೇ ?

ತನ್ನ ಖಾನೆಯ ಬಾಗಿಲನ್ನು ಜೈಲರ್ ತೆರೆಯುತ್ತಿದ್ದ ಶಬ್ದ ಕೇಳಿಸಿದಾಗ ಸ್ಟೂಲೂ, ಕುರ್ಚಿಗಳೆರಡನ್ನೂ ಮೇಜಿನ ಬಳಿಗೆ ಆತುರದಿಂದ ಸರಿಸಿದ. ಕಾಗದಗಳನ್ನು ಜೋಡಿಸಿಟ್ಟ.

ಬಾಗಿಲೊಳಗೆ ಬರಲು, ಅಲೆಕ್ಸಾಂಡರ್ ತಲೆ ಬಾಗಿಸಬೇಕಾಯಿತು. ವಂದನೆ, ಪ್ರತಿವಂದನೆಗಳಾಗುವಾಗ ಅಲೆಕ್ಸಾಂಡರ್

ಮತ್ತು ಅವನ ಪಾಲುದಾರನ ಮುಖಗಳು ತಾಪತ್ರಯಕ್ಕೆ ಸಿಕ್ಕಂತೆ ಕಂಡುಬಂದವು.

ತನ್ನ ಕಾನೂನಿನ ಪ್ರತಿಭೆ ಅನುಪಯುಕ್ತವಾಗಿ ಉಳಿಯ ಬೇಕಾದುದರಿಂದ ಸ್ಮಿತ್ ತನ್ನ ವೈಯನ್ನು ರೋಸಿನಿಂದ ಕುಗ್ಗಿಸಿದ. ತನ್ನ ದೊಡ್ಡ ಕುಟುಂಬದ ನಿರ್ವಹಣಕ್ಕಾಗಿ, ತನಗಪೇಕ್ಷೆಯಿಲ್ಲದ, ವ್ಯಾಪಾರಕ್ಕೆ ಕೈಹಾಕಬೇಕು. ಅವನು ಕಛೇರಿಯನ್ನು ಮುಚ್ಚಿ, ತನ್ನ ನ್ಯಾಯವಾದಿತ್ವಕ್ಕೆ ಮುಕ್ತಾಯ ಹಾಡಲಿದ್ದ.

ಅಲೆಕ್ಸಾಂಡರ್ ತನಗೆ ಬಿದ್ದ ಪೆಟ್ಟನ್ನೂ ಸ್ವಲ್ಪ ಸುಲಭವಾಗಿಯೇ ಸ್ವೀಕರಿಸಿದ್ದ. ಆದರೂ ಇಳಿಮುಖದ ಸೂಚನೆಗಳು ಸ್ಪಷ್ಟವಾಗಿ ಕಾಣುತ್ತಿದ್ದವು. ಆದರೆ ಇಬ್ಬರಲ್ಲೂ ಕದನೋತ್ಸಾಹ ಮಾತ್ರ ಕುಗ್ಗಿರಲಿಲ್ಲ.

ಪತ್ರಗಳನ್ನು ನೋಡಲೆಂದು ನ್ಯಾಯವಾದಿಗಳಿಬ್ಬರೂ ಕುಳಿತಾಗ, ಜೆಂಗರ್ ವಿನಯವಾಗಿ, 'ಪ್ರಥಮತಃ' ಎಂದು ಆರಂಭಿಸಿದ. "ನನ್ನ ಪತ್ನಿ 'ಜರ್ನಲ್' ನ್ನು ಸೋಮವಾರ – ನನ್ನ ವಿಚಾರಣೆಯ ದಿನ – ಸಿದ್ಧಗೊಳಿಸಲಾರಳು. ಏಕೆಂದರೆ ಅಂದು ಕೋರ್ಟಿಗೆ ಹಾಜರಾಗಿ ನನ್ನ ವಿರುದ್ಧ ಸಾಕ್ಷ್ಯ ನೀಡುವಂತೆ, ನನ್ನ ಕೆಲಸಗಾರನಿಗೂ ಮತ್ತು ನನ್ನಿಬ್ಬರು ಮಕ್ಕಳಿಗೂ ಕಟ್ಟಾಜ್ಞೆ, ಕಳಿಸಲಾಗಿದೆ." ಇನ್ನೂ ಹತ್ತಿರ ಬಂದು "ಅಷ್ಟು ಸುಲಭವಾಗಿ ನನ್ನನ್ನ ಬಾಯ್ಮುಚ್ಚಿಸಬಹುದಾಗಿ ಗವರ್ನರರ ಮಿತ್ರರು ಭಾವಿಸಿದ್ದರೆ, ಅದನ್ನವರು ಪುನಃ ವಿಮರ್ಶಿಸ ಬೇಕಾದೀತು!" ಎಂದ.

ಅಲೆಕ್ಸಾಂಡರ್ ತಲೆಯೆತ್ತಿದ. "ಏನು ಮಾಡಬೇಕೆಂದಿದೀಯ?"

"ಸೋಮವಾರದ ಬದಲು ಶನಿವಾರವೇ ಪತ್ರಿಕೆಯನ್ನು ಹೊರ ತಂದುಬಿಡೋಣ" ಜೆಂಗರ್ ಸೂಚಿಸಿದ. "ವಿಚಾರಣೆ ಆರಂಭವಾಗುವ ಮುನ್ನವೇ ಜ್ಯೂರಿಗಳಿಗೆಲ್ಲ ಇದನ್ನೋದುವ ಅವಕಾಶ ಕಲ್ಪಿಸಿ ಬಿಡೋಣ!".

"ಇದೇನೋ ಒಳ್ಳೆ ವ್ಯೂಹವೇ" ಸಂಪಾದಕನೂ ಒಪ್ಪಿದ. "ಆದರೆ ಜ್ಯೂರಿಗಳ ಕರ್ತವ್ಯವನ್ನು ಕುರಿತ ಈ ಲೇಖನದ ವಿಷಯದಲ್ಲೇ

ನನಗೆ ಸ್ವಲ್ಪ ಸಂದೇಹ." ಮೇಜಿನ ಮೇಲಿದ್ದ ಕರಡಿನ ಮೇಲೆ ಬೆರಳಾಡಿಸಿದ.

"ನ್ಯಾಯಮೂರ್ತಿ ಡಿಲಾನ್ಸೆ ಸ್ವೇಚ್ಛೆಯಾಗಿ ವರ್ತಿಸಬಹುದಾದರೆ ಜ್ಯೂರಿಗಳೇಕೆ ? ಜ್ಯೂರಿಗಳನ್ನು ನೇಮಿಸದೆಯೇ ವಿಚಾರಣೆ ನಡೆಸಬಹುದಲ್ಲ !" ಜೆಂಗರ್ ಕರಡಿನಮೇಲೆ ಕೈಕುಟ್ಟಿದ. "ಈ ಲೇಖನ ಹೇಳುವಂತೆ ಜ್ಯೂರರ್ ಮಂಡಲ ವರ್ತಿಸಬೇಕು ; ಇಲ್ಲವಾದರೆ ನಾನು ಸತ್ತಂತೆಯೇ !"

ಇದುವರೆಗೆ ಮೌನದಿಂದಿದ್ದ ಸ್ಮಿತ್ ತಟಕ್ಕನೆ ಬಾಯಿಹಾಕಿದ, "ನಿನಗೆ ಗಲ್ಲಾದರೆ, ಇನ್ನೊಂದು ಶತಮಾನಕಾಲ ಅಮೆರಿಕದ ಪತ್ರಿಕೋದ್ಯಮದ ಉಸಿರೇ ಕಟ್ಟಿಹೋಗುವುದು !"

"ಹೌದು" ಸಂಪಾದಕ ಉತ್ತರವಿತ್ತ. "ಆದರೆ ಸುಳ್ಳು ಹೇಳಿಕೆಗಳನ್ನು ಪ್ರಕಟಿಸಿ ಮೋಸಮಾಡುವುದು ನಮ್ಮ ಉದ್ದೇಶವಲ್ಲ"

ಸ್ಮಿತ್ ತಲೆಯಾಡಿಸಿದ "ಖಂಡಿತ ಅಲ್ಲ !"

ಅಲೆಕ್ಸಾಂಡರ್ ಹಿಂಜರಿದ, ಲೇಖನವನ್ನು ಮತ್ತೊಮ್ಮೆ ನೋಡಲು ಬಾಗಿದ. "ಈ ಲೇಖನವನ್ನು ಮುದ್ರಿಸಿದರೆ, ನಾವು ಈ ವ್ಯವಹಾರದಲ್ಲೇ ಅತ್ಯಂತ ಪರಿಣಾಮಕಾರಿಯಾದ ಕ್ರಮ ಕೈಗೊಂಡಂತೆ ಆಗುತ್ತದೆ." ತನ್ನ ಪಾಲುದಾರನ ಕಣ್ಣುಗಳನ್ನು ದಿಟ್ಟಿಸಿದ. ಅವು ಸತ್ಯಾರ್ಥಿಯ ಕಣ್ಣುಗಳು. "ಸ್ನೇಹಿವಲ್ಲಿ ಹೇಳು ಗೆಳೆಯ, ಈ ಲೇಖನ ಸುಬದ್ಧ ಕಾನೂನೇ ?"

ಸ್ಮಿತ್ ಉತ್ತರ ಹೇಳಲು ಬಾಯಿ ಬಿಚ್ಚಿದ, ಮತ್ತೆ ಮುಚ್ಚಿದ. ಆತನ ಮುಖ ಅನುದ್ರಿಕ್ತವಾಗಿತ್ತು. "ಸುಬದ್ಧ ಕಾನೂನು ಎಂದಾಗ, ಇದುವರೆಗೆ ಅನುಸರಿಸಿಕೊಂಡು ಬಂದ ಪದ್ಧತಿ ಎಂದು ನಿಮ್ಮಭಿಪ್ರಾಯ ತಾನೆ ?"

"ಹೌದು."

"ಹಾಗಾದರೆ ನನ್ನ ವ್ಯಾಖ್ಯಾನವಿಷ್ಟೆ." ನ್ಯೂಯಾರ್ಕ್ ನಗರದ ಅಸಮಾನ ಕಾನೂನು ಪಂಡಿತನಾದ, ಬಲಿಷ್ಠ ನ್ಯಾಯವಾದಿ ಸ್ಮಿತ್ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸುವ ಮುನ್ನ ಕೊಠಡಿಯಲ್ಲೊಮ್ಮೆ

ಇತ್ತಿಂದತ್ತ ಹೆಜ್ಜೆ ಇಟ್ಟ. "ಗೆಳೆಯ ಕೇಳು, ಇದುವರೆಗೆ ನಡೆದ ಪದ್ಧತಿಯ ರೀತ್ಯ ಇದು 'ಸುಬದ್ಧ ಕಾನೂನಲ್ಲ' ಎಂಬುದು ನಿನಗೂ ನನಗೂ ಇಬ್ಬರಿಗೂ ಗೊತ್ತು. ಆದರೆ—." ಗವಕ್ಕನೆ ತಿರುಗಿ ಬಿಗಿ ಪಡಿಸಿದ ಮುಷ್ಟಿಯೊಂದನ್ನು ಮೇಲಕ್ಕೆತ್ತಿ, "ನನ್ನ ಆತ್ಮ ಪ್ರಜ್ಞೆ ಹೇಳುವಂತೆ, ದೇವರ ವಿಧಾಯಕದಂತೆ, ಇದೇ ಮಾನವತಾ ನ್ಯಾಯ!" ಎಂದ.

ಅಲೆಕ್ಸಾಂಡರ್ ಚೆಂಗನೆದ್ದು ಅವನ ಕೈಗಳನ್ನು ಹಿಡಿದುಕೊಂಡ. "ನನ್ನ ಶರೀರದ ಕಣಕಣದಲ್ಲಿನ ಶಕ್ತಿಯನ್ನು ಇದಕ್ಕಾಗಿ ನಿನ್ನೊಡನೆ ವಿನಿಯೋಗಿಸುತ್ತೇನೆ." ಲೇಖನವನ್ನು ಕೈಗೆತ್ತಿಕೊಂಡು ಜೆಂಗರ್ ಕೈಗಿತ್ತು, "ಹೋಗು, ಮುದ್ರಿಸು" ಎಂದ.

ಲೇಖನ, ಒಬ್ಬ ನ್ಯಾಯವಾದಿ ಹಾಗೂ ಜ್ಯೂರರ್ ನಡುವೆ ನಡೆದ ಸಂಭಾಷಣೆಯ ಸ್ವರೂಪದಲ್ಲಿತ್ತು :

ನ್ಯಾಯವಾದಿ ಹೇಳಿದ, "ನ್ಯಾಯಮೂರ್ತಿಗಳು ಏನುಮಾಡ ಬಹುದು, ಏನು ಮಾಡಬಾರದು, ಎಂಬುದನ್ನೆಲ್ಲ ಕಾನೂನುಗಳಲ್ಲಿ ನಿಖರವಾಗಿ ತಿಳಿಸಲಾಗಿದೆ. ಉದಾಹರಣೆಗೆ ಜ್ಯೂರಿಗಳು ಒಪ್ಪಿ, ಸಲ್ಲಿಸಿದ ಅಭಿಮತವನ್ನು, ಅಂಗೀಕರಿಸದೆ ನ್ಯಾಯಮೂರ್ತಿ ನಿರಾಕರಿಸ ಬಾರದು."

ಮತ್ತೆ ನ್ಯಾಯವಾದಿ ಕೇಳಿದ, "ದೊರೆಯ ಚಿತ್ರ ಪಟವೊಂದರ ಮುಂದೆ ಹ್ಯಾಟನ್ನು ತೆಗೆಯದೆ ಓಡಾಡಿದನೆಂಬ ಕಾರಣದಿಂದ ಒಬ್ಬನ ಮೇಲೆ, 'ರಾಜದ್ರೋಹ'ದ ಆಪಾದನೆಯನ್ನು ಅನ್ಯಾಯವಾಗಿ ಹೊರಿಸಿದ ವ್ಯವಹಾರದಲ್ಲಿ ನಿಮ್ಮನ್ನು ಒಬ್ಬ ಜ್ಯೂರರಾಗಿ ನಿಯಮಿಸಿ ದಾರೆನ್ನಿ. ಸಾಕಷ್ಟು ಮಂದಿ ಸಾಕ್ಷಿಗಳೂ, ಆತ ಹ್ಯಾಟು ತೆಗೆಯದೆ, ಅಗೌರವವಾಗಿ ವರ್ತಿಸಿದನೆಂದೇ ಸಾಕ್ಷ್ಯ ನೀಡಿದರೆನ್ನಿ. ನೀವು ಅವನ ವಿಚಾರಣೆ ನಡೆಸುವ ಸಲುವಾಗಿ ಪ್ರಮಾಣ ಬದ್ಧರಾದ ಜ್ಯೂರಿಗಳು, ಅಂತಹ ಸಂದರ್ಭದಲ್ಲಿ ನಿಮಗೇನಭಿಪ್ರಾಯವಿರುತ್ತಿತ್ತು ?"

"ಅಭಿಮತ ಬೇರೇನು ತಾನೇ ಇದ್ದೀತು. ಆತ ಅಪರಾಧಿ ಯಲ್ಲ ಎಂದು ನನ್ನ ಆತ್ಮಕ್ಕೆ ಗೊತ್ತಾಗಲೇ ಬೇಕು."

"ನಿಮ್ಮ ಬಾಯಿಂದ ಸತ್ಯವೇ ಬಂದಿದೆ." ನ್ಯಾಯವಾದಿ ಪ್ರಶಂಸಿಸಿದ.

"ಆದರೆ" ತಾನು ಜ್ಯೂರಿಯೆಂದು ಭಾವಿಸಿಕೊಂಡ ಆ ಮನುಷ್ಯ ಗಾಭರಿಯಿಂದ ಮಾತು ಮುಂದುವರಿಸಿದ, "ಕಾನೂನಿನ ಅಂಶವನ್ನು ನನಗೆ ಬಿಡಿ ಎಂದ ನ್ಯಾಯಮೂರ್ತಿ. ನಿಜವಾಗಿಯೂ ಇದು ಕ್ಲಿಷ್ಟ ಪರಿಸ್ಥಿತಿ. ಆಪಾದಿತನ ವಿಷಯದಲ್ಲಿ ನಮಗೆ ಕನಿಕರ ಮೂಡಿದರೂ, ನಾವು ಅಸಾಹಯಕರು. ನಮ್ಮ ಮುಂದೆ ಮಂಡಿತವಾದ ಸಾಕ್ಷ್ಯಗಳ ಆಧಾರದ ಮೇಲೆ ನಾವು ಆತನನ್ನು ಅಪರಾಧಿಯೆಂದೇ ತೀರ್ಮಾನಿಸಿ, ಕಾನೂನಿನ ಅನ್ವಯದ ಕಾರ್ಯವನ್ನು ನ್ಯಾಯಮೂರ್ತಿಯ ಕೈಗೊಪ್ಪಿಸಬೇಕು."

"ಇಂತಹ ಜ್ಯೂರಿಗಳಿಂದ, ಜನರನ್ನು ದೇವರೇ ಕಾಪಾಡಬೇಕು!" ನ್ಯಾಯವಾದಿ ಉತ್ತರಿಸಿದ. "ನ್ಯಾಯಕ್ಕಿಂತ ನ್ಯಾಯಮೂರ್ತಿಯೇ ನಿಮಗೆ ಹೆಚ್ಚೇ ? ಪ್ರಮಾಣ ವಚನ ಸ್ವೀಕಾರ ಮಾಡುವಾಗ, "ನಾವು ನ್ಯಾಯವಾಗಿ, ಸತ್ಯವಾಗಿ ಆಪಾದಿತನ ವಿಚಾರಣೆ ನಡೆಸಿ, ಸತ್ಯವಾದ ತೀರ್ಪು ಕೊಡುತ್ತೇವೆ" ಎಂದು ಘೋಷಿಸುತ್ತೀರಿ. ನಿಮ್ಮ ಆತ್ಮ ಸಾಕ್ಷ್ಯಾನುಸಾರ, ನಿಮ್ಮ ಪ್ರಜ್ಞಾ ಶಕ್ತ್ಯನುಸಾರ ಎಂದದರರ್ಥ. ಆ ಮನುಷ್ಯ ಅಪರಾಧ ಮಾಡಿಲ್ಲವೆಂದು ಮನಸ್ತೃಪ್ತಿಯಾದರೆ, ಆತನ ಬಿಡುಗಡೆ ಮಾಡದೆ ಇನ್ನೇನು ಮಾಡಬೇಕು ? ಏಕೆಂದರೆ, ದಬ್ಬಾಳಿಕೆಯಿಂದ ಜನತೆಯ ವಿಮೋಚನೆ ಮಾಡುವುದೇ ಜ್ಯೂರರುಗಳ ನೇಮಕದ ಉದ್ದೇಶ."

---

# ಅಧ್ಯಾಯ ೩೦

## ವಿಚಾರಣೆಯ ಆರಂಭ

೧೭೩೫ರ ಆಗಸ್ಟ್ ನಾಲ್ಕನೆಯ ತಾರೀಖು ಬೆಳಿಗ್ಗೆ ಒಂಬತ್ತು ಗಂಟೆಗೆ ಸರಿಯಾಗಿ ಜೆಂಗರ್‌ನ್ನು, ಅವನ ನ್ಯಾಯವಾದಿ ಮತ್ತು ಪಹರೆಯವರು, ಕೋರ್ಟಿಗೆ ಕರೆದುಕೊಂಡು ಬಂದರು. ಆಗಲೇ, ತರುಣ ನ್ಯಾಯಮೂರ್ತಿಗಳಾದ ಡಿಲಾನ್ಸೆ ಮತ್ತು ಫಿಲಿಪ್ಸೆ ಆಸೀನರಾಗಿದ್ದರು. ವಿಶೇಷವಾದ ಸಮಾರಂಭಕ್ಕೋ ಎನ್ನುವಂತೆ, ತಮ್ಮ ಅತ್ಯುತ್ತಮವಾದ ಸೂಟುಗಳನ್ನು, ಟೋಫನ್‌ಗಳನ್ನು ಧರಿಸಿದ್ದರು.

ನ್ಯಾಯವಾದಿ ಚೇಂಬರ್ಸ್ ಕೂಡ ಕರಿಯಬಣ್ಣದ ರೇಷ್ಮೆ ಡಮಾಸ್ ಬಟ್ಟೆಯ ಹೊಸ ಸೂಟನ್ನು ಧರಿಸಿದ್ದ. ವೃದ್ಧ ರಿಪ್‌ವಾರ್ಡಾಂ, ಲ್ಯೂಯಿ ಮಾರಿಸ್, ಜ್ಯೂನಿಯರ್ ಸ್ಮಿತ್ ಮತ್ತು ಇತರ ಪಾಪ್ಯುಲರ್ ಪಾರ್ಟಿ ನಾಯಕರುಗಳು ಅವನ ಸುತ್ತ ನೆರೆದು ಪಿಸುಗುಟ್ಟಿದರು ಅಥವಾ ಅವನನ್ನೇ ದಿಟ್ಟಿಸಿದರು.

ಸತಿ ಜೆಂಗರ್ ತನ್ನ ಗಂಡನ ಕೈಗಳನ್ನು ಮುಟ್ಟಲು ಯತ್ನಿಸಿದಳು. ಜೆಂಗರ್ ಕೂಡ ತನ್ನ ಕೈ ಮುಂಚಾಚಿದರೂ ಅವಳನ್ನು ಮುಟ್ಟಲಾಗಲಿಲ್ಲ. ಆಪಾದಿತನ ಕಟಾಂಜನದಲ್ಲಿ ನಿಂತ ಜೆಂಗರ್ ಸುತ್ತ ಗದ್ದಲ ಮಾಡುತ್ತಿದ್ದ ಗುಂಪನ್ನು ವೀಕ್ಷಿಸಿದ. ಒಂದು ಕ್ಷಣ ಹೊತ್ತು ತಾನು ಪರಿಣಾಮಕಾರಿ ಭಾಷಣವೊಂದನ್ನು ಮಾಡಲಿರುವ ನಟನೆಂಬಂತೆ ಭಾವಿಸಿದ. ಅನಂತರ ಗಂಭೀರನಾದ.

೧೨ ಮಂದಿಯ ಜ್ಯೂರಿ ಮಂಡಲ ಚುನಾಯಿತವಾಗಲಿತ್ತು. ಅದಕ್ಕಾಗಿ ಸಿದ್ಧವಾದ ಮೂಲಪಟ್ಟಿಯ ೪೮ ಮಂದಿ, ಎಡಗಡೆ, ಪ್ರೇಕ್ಷಕರ ಸ್ಥಾನದಲ್ಲಿ ಕುಳಿತಿದ್ದರು. ಬಲಭಾಗದಲ್ಲಿ ಗವರ್ನರ್ ಕಾಸ್ಬಿಯ ಮಿತ್ರರು ನೆರೆದು, ಏನೂ ಅರ್ಥವಾಗದವರಂತೆ ಮಿಕಿಮಿಕಿ ಕಣ್ಣು ಬಿಡುತ್ತಿದ್ದರು.

ಇಷ್ಟೊಂದು ಜನಕ್ಕೇನೀ ಆಸಕ್ತಿ, ಎಂದು ಅವರು ಆಶ್ಚರ್ಯಪಡುತ್ತಿರ ಬೇಕು. ವಿಚಾರಣೆ ಸರಳವಾದುದು. ಮುದ್ರಕ ಪತ್ರಿಕೆಗಳನ್ನು ಮುದ್ರಿಸಿದ್ದ ಎಂದು ಜ್ಯೂರರುಗಳು ಸಾರುತ್ತಾರೆ. ಆ ಪತ್ರಿಕೆಗಳಲ್ಲಿ ನಿಂದೆ, ರಾಜದ್ರೋಹಗಳಿದ್ದವು, ಎಂದು ನ್ಯಾಯಮೂರ್ತಿಗಳು ತೀರ್ಮಾನಿಸುತ್ತಾರೆ. ಗಲ್ಲುಗಾರನದು ಉಳಿದ ಕೆಲಸ.

ಜೆಂಗರ್ ಮುಗುಳ್ನಕ್ಕ. ತನ್ನ ಹೋರಾಟದ ಅಂತಿಮ ದಿನ ವನ್ನು ಮುಟ್ಟಿದ್ದುದರಿಂದ, ಅವನಲ್ಲಿ ಭೀತಿಗೆ ಎಡೆಯಿರಲಿಲ್ಲ. ಅವನ ಮಟ್ಟಿಗೆ ಪ್ರಬಲ ಪುರುಷನಾದವನೊಬ್ಬ ಎಲ್ಲೂ ಕಾಣದಿದ್ದಾಗ ಅವನಿಗೆ ಸ್ವಲ್ಪ ಗಾಬರಿಯಾಗಿದ್ದರೂ, ಪ್ರಬಲ ಮಿತ್ರಪಡೆಯೆಲ್ಲ ಅಲ್ಲೇ ಇದ್ದುದು ಸ್ವಲ್ಪ ಸಮಾಧಾನವೆನಿಸಿತ್ತು. ಅಲೆಕ್ಸಾಂಡರ್ ಬಲು ಎತ್ತರದ ಆಳು. ಕೊಠಡಿಯ ಗುಂಪಿನಲ್ಲಿ ಅವನೆಲ್ಲಿದ್ದರೂ ಕಾಣಲೇಬೇಕು. ಗವರ್ನರಾಗಲಿ, ನ್ಯಾಯಮೂರ್ತಿಗಳಾಗಲಿ ಅಥವಾ ಇನ್ನಾರೇ ಆಗಲಿ, ಅವರೆಲ್ಲರ ವಿಷಯದಲ್ಲೂ ತಾನು ಸತ್ಯಾಂಶವನ್ನೇ ಬಹಿರಂಗವಾಗಿ ಮುದ್ರಿಸಲು ಸಿದ್ಧ, ಅಂತಹ ಪ್ರಯತ್ನದಲ್ಲಿ ಸಾವಪ್ಪಲೂ ಸಿದ್ಧ, ತನ್ನ ಕಾರ್ಯವನ್ನು ಜ್ಯೂರಿಗಳ ನಿರ್ಧಾರಕ್ಕೆ ಒಪ್ಪಿಸಲೂ ಸಿದ್ಧ ಎಂದು ನ್ಯಾಯಮೂರ್ತಿ ಗಳಿಗೆ ಸಾರಿ ಹೇಳುವ ಎದೆ ಅವನಿಗಿತ್ತು. ತನ್ನ ಇತ್ತೀಚಿನ 'ಜರ್ನಲ್' ಪತ್ರಿಕೆಯಲ್ಲಿ ಪ್ರಕಟವಾಗಿದ್ದ ಲೇಖನವನ್ನು ಅವರೆಲ್ಲ ಓದಿರಬಹುದೆಂದು ಭಾವಿಸಿ, ಜ್ಯೂರಿಗಳಾಗಲಿದ್ದವರ ಕಡೆ ನೋಡಿದ.

ತಾನು ನೋಡಿದಾಗ ತನ್ನ ಕಡೆ ದಿಟ್ಟಿಸಿನೋಡಿದ ತನ್ನ ಪತ್ನಿಯ ಧೀಮಂತ ಕಣ್ಣುಗಳಿಂದ ಧೈರ್ಯವನ್ನು ಹೀರಿಕೊಂಡ. ಪ್ರೇಕ್ಷಕ ಗಣದಲ್ಲಿದ್ದ ತನ್ನ ತಂಗಿ, ಅವಳ ಗಂಡ, ಅವರ ಹಿರಿ ಹುಡುಗ, ತನ್ನಿಬ್ಬರು ಮಕ್ಕಳು, ಪುಟಾಣಿ ಎಲಿಜಬೆತ್ ಮತ್ತು ನಿಕೊಲಾಸ್ ಇವರುಗಳನ್ನೂ ನೋಡಿದ.

ತನ್ನ ಹಿರಿಯ ಹುಡುಗರು ಜಾನ್ ಮತ್ತು ಪೈಟರ್ ಕಾಣದೆ ಹೋದಾಗ ಅವನ ಮನಸ್ಸು ಸ್ವಲ್ಪ ಕಿರಿಕಿರಿ ಪಟ್ಟಿತು. ಪ್ರಾಯಶಃ ಅವರಿಬ್ಬರೂ ಸಾಕ್ಷಿಗಳ ಕೊಠಡಿಯಲ್ಲಿರಬಹುದು ಎಂದು ಸಮಾಧಾನ ಪಟ್ಟುಕೊಂಡ. ಇನ್ನೂ ಹಿಂಬದಿಯಲ್ಲಿ ತನ್ನ ಇತರ ಬಂಧುಗಳು,

ಸೋದರ ಮತ್ತು ನಾದಿನಿ ಕಂಡು ಬಂದರು. ಅವರು ಕೈಬೀಸಿದರು. ಮುಷ್ಟಿಗಳನ್ನು ಎತ್ತಿ ಹಿಡಿದು, ಮುಗುಳುನಗೆ ಬೀರಿದರು. ಧೈರ್ಯ ತುಂಬುವ ಯತ್ನದಂತೆ ಆ ಹಾವಭಾವ ಕಂಡುಬಂತು.

ತನ್ನ ಭಾಗಕ್ಕೆ ಬಹು ಅಮೂಲ್ಯರಾದ, ಆ ಗಟ್ಟಿಮುಟ್ಟಾದ ಜನರೊಡನೆ ನೋಟಗಳ ವಿನಿಮಯ ಮಾಡಿದಾಗ, ಅವರೆಲ್ಲರ ಚಿಂತಾ ಮುದ್ರಿತ, ಕಳವಳಭರಿತ ಮುಖಗಳಲ್ಲಿ, ತನ್ನ ಬಗೆಗೆ ತುಂಬು ಆದರ ಸುಸ್ಪಷ್ಟವಾಗಿ ಕಂಡಿತು. ಅವರಿಗಾಗಿಯಾದರೂ ತಾನು ತನ್ನ ವಿಚಾರಣೆಯಲ್ಲಿ ಜಯಗಳಿಸಲೇ ಬೇಕೆಂದುಕೊಂಡ. ಜ್ಯೂರಿಗಳ ನಿರ್ಧಾರ ತನ್ನನ್ನು ಮನೆಗೆ ಮರಳಿಸಬಹುದು ಅಥವಾ ಎಂದೆಂದಿಗೂ ವಾಪಸ್ ಬರಲಾಗದಂತಹ ಸ್ಥಳಕ್ಕೆ ಕಳಿಸಬಹುದು.

ನ್ಯಾಯಮೂರ್ತಿಗಳನ್ನು ದುರುಗುಟ್ಟಿದಾಗ ಅವರಿಬ್ಬರೂ ಬಹು ಚಿಕ್ಕವರಾಗಿ—ತನ್ನ ತಂಗಿಯಷ್ಟು ಚಿಕ್ಕವರಾಗಿ ಕಂಡು ಬಂದರು. ಅವರ ಅಪೇಕ್ಷೆ ಏನೆಂಬುದೂ ಅವರ ಮುಖಗಳಲ್ಲಿ ಪ್ರತಿ ಬಿಂಬಿಸಿದಂತಿತ್ತು. ತನಗೆ ಅತಿ ಕ್ರೂರ ಶಿಕ್ಷೆಯಾಗಲಿ. ಆದರೆ ಅನಂತರ ಇನ್ನಾವ ಮುದ್ರಕನೂ – ಪ್ರಾಯಶಃ ಎಂದೆಂದಿಗೂ – ಸತ್ಯವನ್ನು ಮುದ್ರಿಸಲಾರ. ಕಿರಿಪುಸ್ತಕವೊಂದನ್ನು ಮುದ್ರಿಸುವ ಮೂಲಕ ತಾನು ಬಚಾಯಿಸಿದ್ದ ವೃದ್ಧ ವಾನ್‌ಡಾಂ ಕಡೆ ತಿರುಗಿದಾಗ, ತನ್ನ ಮುದ್ರಣಾಲಯದಿಂದ ಇನ್ನಾರನ್ನಾದರೂ ಬಚಾಯಿಸಲು, ಈ ವಿಚಾರಣೆ ತನಗೆ ಅವಕಾಶ ನೀಡೀತೇ ಎಂದು ಚಿಂತಿಸಿದ. ಅಥವಾ ಸ್ವೇಚ್ಛಾಚಾರಿ ಅಧಿಕಾರಿಗಳಿಗೆ ತಮ್ಮ ಮನಬಂದಂತೆ, ಸುಲಿಗೆ ಹಾಗೂ ಬಂಧನಗಳನ್ನು ನಡೆಸಲು ಅನುಕೂಲವಾಗುವಂತೆ, ನನಗೆ ಆಜೀವ ಜೈಲುವಾಸ ಅಥವಾ ಗಲ್ಲಿನ ಶಿಕ್ಷೆವಿಧಿಸಿ, ನನ್ನ ಮುದ್ರಣಾಲಯದ ಬಾಯನ್ನು ಶಾಶ್ವತವಾಗಿ ಕಟ್ಟಿಬಿಡಲಾಗುವುದೆ? ವಿಚಾರಣೆಯಲ್ಲಿ ವಿಜಯಿಯಾಗಲೇಬೇಕು, ನಾಳೆ ಮತ್ತೆ ಹೋರಾಟ ಮುಂದು ವರಿಸಲು ಸಿದ್ಧನಿರಬೇಕು ಎಂಬುದನ್ನು ವ್ಯಕ್ತಪಡಿಸಲೋ ಎನ್ನುವಂತೆ ಕೈಗಳೆರಡನ್ನೂ ಝಾಡಿಸಿದ.

ತಾನು ಬಂದಾಗ ನೆರೆದ ಗುಂಪಿನಲ್ಲಿ ಪಿಸುಮಾತುಗಳು ಹಬ್ಬಿ

ದುದನ್ನು ಗಮನಿಸಿದ್ದ. ಈಗಾಗ ನೂರಾರು ಮುಖಗಳು ತನ್ನನ್ನೆ ಕಳವಳದಿಂದ ನೋಡುತ್ತಿದ್ದವು. ಷರೀಫ್ ಮಾತನಾಡಲೆದ್ದ.

ಬಿಸಿಲ ಬೇಗೆಯಲ್ಲಿ ವಿಶ್ರಾಂತಿ ಪಡೆಯುತ್ತಿದ್ದ ಗವರ್ನರ್ ಕಾಸ್ಬಿ, ಸೋಮಾರಿತನದಿಂದ, ಹೊಸ ಷರೀಫನ ನೇಮಕವನ್ನೇ ಮಾಡಿರಲಿಲ್ಲ. ಅವನ ಮಗ ಬಿಲ್ಲಿ ಕಾಸ್ಬಿಯೇ ವಿಚಾರಣೆಯನ್ನು ಆರಂಭಿಸಿದ. ಬಿಲ್ಲಿ ಕುಳ್ಳ, ದಪ್ಪ ಆಸಾಮಿ; ಮೈಬಣ್ಣ ಕೆಂಗುಲಾಬಿಯಂತಹುದು, ಇನ್ನೂ ತರುಣ; ನ್ಯೂ ಜೆರ್ಸಿಯ ಪೆರ್ತ್ ಅಂಬಾಯ್‌ನ ಷರೀಫ್. ಜ್ಯೂರರುಗಳನ್ನು ಕರೆಸುವುದಕ್ಕೂ ಮತ್ತು ಅವರುಗಳ ಪಟ್ಟಿಯನ್ನು ಕೋರ್ಟಿಗೊಪ್ಪಿಸುವುದಕ್ಕೂ ಅವನನ್ನು ಕರೆಸಿರಬೇಕು.

ಜ್ಯೂರಿಗಳನ್ನು ಸಾಗಹಾಕಲು ಬಿಲ್ಲಿ ಪ್ರಯತ್ನಿಸುತ್ತಿರುವಂತಿದ್ದುದನ್ನು ಕಂಡುಕೊಂಡ ಜೆಂಗರ್, ತನ್ನ ನ್ಯಾಯವಾದಿಗೆ ಸುಳುಹುಕೊಟ್ಟ. ತನ್ನ ಭವಿಷ್ಯವೆಲ್ಲ ಜ್ಯೂರಿಗಳನ್ನೇ ಅವಲಂಬಿಸಿರುವುದರಿಂದ, ಸ್ವಲ್ಪ ಎಚ್ಚರದಿಂದಿರಬೇಕೆಂದೂ ಸೂಕ್ಷ್ಮವಾಗಿ ತಿಳಿಸಿದ.

ಚೇಂಬರ್ಸ್ ಮುಂದಕ್ಕೆ ಹೆಜ್ಜೆ ಇಟ್ಟು ಅನುದ್ರಿಕವಾಗಿ ನುಡಿದ, " ಷರೀಫ್‌ನಿಂದ ನಮಗೆ ನ್ಯಾಯ ಸಲ್ಲುವಂತೆ ಮಾಡಬೇಕೆಂದು ಮಹಾಸ್ವಾಮಿಗಳಲ್ಲಿ ಸೂಚಿಸುತ್ತೇನೆ ಮತ್ತು ಓಟರುಗಳ ಪಟ್ಟಿಯಿಂದ ಪ್ರತಿ ಮಾಡಿದ ರೀತಿಯಲ್ಲೇ ಜ್ಯೂರರುಗಳ ಹೆಸರುಗಳನ್ನೂ ಕೋರ್ಟಿಗೆ ಸಲ್ಲಿಸುವಂತೆ ಷರೀಫ್‌ರಿಗೆ ತಿಳಿಸಬೇಕೆಂದೂ ಕೋರುತ್ತೇನೆ."

ನ್ಯಾಯಮೂರ್ತಿ ಡಿಲಾನ್ಸೆ ನೆಟ್ಟಗೆ ಕುಳಿತ. ಜ್ಯೂರರುಗಳ ಹೆಸರುಗಳನ್ನು ಹಿಂದೆ ಮುಂದೆ ಮಾಡಲಾಗಿದೆಯೆಂದು ಚೇಂಬರ್ಸ್ ನುಡಿದಾಗ, ತರುಣ ನ್ಯಾಯಮೂರ್ತಿಯ ಕೆನ್ನೆಗಳಿಗೆ ಕೆಂಪಡರಿತು. ಕೋಪದ ಪಿಸುಮಾತುಗಳು ಗುಂಪಿನ ಕಡೆಯಿಂದ ಕೇಳಿಬಂದವು.

ಪ್ರತಿ ನಿಮಿಷವೂ ಹೆಚ್ಚು ಹೆಚ್ಚು ಜನ ಕೋರ್ಟಿನೊಳಕ್ಕೆ ಬರುತ್ತಿದ್ದರು.

ಜೆಂಗರ್ ಮತ್ತೊಮ್ಮೆ ಆ ಹನ್ನೆರಡು ಮಂದಿ ಜ್ಯೂರರುಗಳ ಕಡೆ ದಿಟ್ಟಿಸಿದ. ಅವರಿಗೆಲ್ಲ ತನ್ನ ಸೂಚನೆಯ ಅರ್ಥವಾಗಿತ್ತೆ ? ಕೆಲವರು ತಲೆಯಾಡಿಸುತ್ತಿದ್ದರು, ಮತ್ತೆ ಕೆಲವರು ಪಿಸುಗುಟ್ಟುತ್ತಿದ್ದರು. ಅದನ್ನೆಲ್ಲ ಕಂಡು

ಅವನಿಗೆ ಸಂತೋಷವಾಯಿತು. ಅವರೆಲ್ಲ ಈಗಾಗಲೆ ತನ್ನ ಪರ ಇದ್ದಂತೆ ಭಾಸವಾಯಿತು. ಜೆಂಗರ್ ಮುಗುಳ್ನಕ್ಕ.

ಈ ನಗುವನ್ನು ಕಂಡ ನ್ಯಾಯಮೂರ್ತಿ ಡಿಲಾನ್ಸೆ, ಗವರ್ನರ್ ಪಕ್ಷಕ್ಕಾದ ಕುಂದನ್ನು ಮುಚ್ಚುವ ಸಲುವಾಗಿ, ತಾನು ನ್ಯಾಯಪರ ನೆಂದು ತೋರಿಸಿಕೊಳ್ಳುವ ಸಲುವಾಗಿ, ಪಟ್ಟಿಯನ್ನು ಸರಿಪಡಿಸ ಬೇಕೆಂದು ಆಜ್ಞಾಪಿಸಿದ.

ನ್ಯಾಯಮೂರ್ತಿಯ ಸೋಲು ಕಂಡು ಜನ ನಕ್ಕರು, ನಿಟ್ಟುಸಿರು ಬಿಟ್ಟರು. ಈ ಹೊತ್ತಿಗೆ ಪ್ರೇಕ್ಷಕರ ಆಸನವೊಂದೂ ಖಾಲಿಯಿರಲಿಲ್ಲ. ಹೊತ್ತಾಗಿ ಬಂದವರು ನಿಲ್ಲಬೇಕಾಯಿತು.

ಜ್ಯೂರಿಗಳಾಗಲಿದ್ದವರನ್ನು ಒಬ್ಬೊಬ್ಬರನ್ನಾಗಿ ಕರೆಯಲಾಯಿತು. ಕ್ರಮವಾಗಿ ಜ್ಯೂರಿ ಕಟಾಂಜನದಲ್ಲಿ ಬಂದು ನಿಂತ. ಅವನನ್ನು ಅಟಾರ್ನಿ ಜನರಲ್ ಬ್ರಾಡ್ಲೆಯೂ, ಅನಂತರ ಚೇಂಬರ್ಸೂ ಪ್ರಶ್ನಿಸಿದರು. ಚೇಂಬರ್ಸ್ ಬುದ್ಧಿವಂತ ಮಾತ್ರವಲ್ಲ, ಒಳ್ಳೆಯ ಸಂಭಾಷಣಾಕಾರ ನೆಂಬುದೂ ವ್ಯಕ್ತವಾಯಿತು.

ಪ್ರತಿಯೊಬ್ಬರನ್ನು ಪ್ರಶ್ನಿಸಿದಾಗಲೂ ಚೇಂಬರ್ಸ್ ಜೆಂಗರ್ ಕಡೆ ನೋಡುತ್ತಿದ್ದ. ಜ್ಯೂರರ್ ತನ್ನ ವಿರೋಧಿ ಎಂದು ಭಾಸವಾದಾಗ ಜೆಂಗರ್ ತಲೆಯಲ್ಲಾಡಿಸುತ್ತಿದ್ದ. ಆಗ ಚೇಂಬರ್ಸ್ ಆಕ್ಷೇಪವೆತ್ತಿ, ಅವನನ್ನು ಅಂಗೀಕರಿಸಲು ನಿರಾಕರಿಸುತ್ತಿದ್ದ. ಯಾರೇ ಆಗಲಿ ನಿಷ್ಪಕ್ಷಪಾತಿ ಎಂದು ಭಾಸವಾದರೆ, ಜೆಂಗರ್ ಕತ್ತು ಹಾಕುತ್ತಿದ್ದ, ಒಡನೆ ಚೇಂಬರ್ಸ್, "ಈ ಜ್ಯೂರರ್ ಪ್ರತಿಕಕ್ಷಿಗೆ ಸಮ್ಮತ" ಎಂದು ಸಾರುತ್ತಿದ್ದ.

ಜೆಂಗರ್ ಮೌನವಾಗಿಯೇ ಹರ್ಷಿಸುತ್ತಿದ್ದ. ಆದರೆ ತನ್ನ ಮಿತ್ರನೊಬ್ಬನು ಜ್ಯೂರರ್ ಕಟಾಂಜನದಲ್ಲಿ ನಿಂತಾಗ, ಅವನೆಡೆ ಮಂದಹಾಸ ಬೀರಿದ. ಅದನ್ನು ಕಂಡ ಬ್ರಾಡ್ಲೆ ಆಕ್ಷೇಪವೆತ್ತಿದಾಗ, ನ್ಯಾಯಮೂರ್ತಿ, ಆ ಜ್ಯೂರರ್ ಸಲ್ಲದೆಂದು ಘೋಷಿಸಿದ.

ಜೆಂಗರ್ ಮನಸ್ಸಿನಲ್ಲೇ ಶಪಿಸಿದ.

ಉಭಯ ಕಕ್ಷಿಗಳೂ ಒಪ್ಪಿಕೊಂಡ ಜ್ಯೂರರುಗಳನ್ನು ಅವರಿಗೆ

ವಿಶಾಸಲಾದ ಕಟಾಂಜನದಲ್ಲಿ ಬಂದು ನಿಲ್ಲುವಂತೆ ಕೇಳಲಾಯಿತು.

ಗುಮಾಸ್ತೆ ದೊಡ್ಡ ಗಂಟಲಿನಲ್ಲಿ ನುಡಿದ, "ಆಪಾದಿತನಾದ ಜಾನ್ ಪೀಟರ್ ಜೆಂಗರ್‌ನನ್ನು ಸೂಕ್ತವಾಗಿಯೂ, ಸತ್ಯವಾಗಿಯೂ ವಿಚಾರಣೆ ನಡೆಸಿ, ಸತ್ಯವಾದ ತೀರ್ಪು ನೀಡಿ, ದೇವರಿಗೆ ನೆರವಾಗುವೆ ಎಂದು ಸದ್ಭಾವದಿಂದ ಪ್ರಮಾಣ ಮಾಡುವಿರಾ ?"

ಪ್ರತಿಯೊಬ್ಬ ಜ್ಯೂರರರೂ ಬೈಬಲ್ ಮೇಲೆ ಕೈಯಿಟ್ಟು, "ಹಾಗೇ ಮಾಡುತ್ತೇನೆ" ಎಂದ. ತನ್ನ "ಜರ್ನಲ್" ಅಪೇಕ್ಷಿಸಿದ್ದ ಪ್ರಮಾಣ ವಚನವೇ ಅದೆಂಬುದನ್ನು ಜೆಂಗರ್ ಗುರುತಿಸಿದ.

ಸುತ್ತೆಲ್ಲ ಕಣ್ಣು ಹಾಯಿಸಿದಾಗ, ಜ್ಯೂರರರುಗಳು ಕುಳಿತಿದ್ದ ಜಾಗದಲ್ಲಿ ನೆಲದ ಮೇಲೆ, ತನ್ನ ಪತ್ರಿಕೆಯ, ಆ ಸಂಚಿಕೆಯ ಹಲವು ಪ್ರತಿಗಳು ಹರಡಿ ಬಿದ್ದಿದ್ದುದು ಕಣ್ಣಿಗೆ ಬಿತ್ತು. ಉದ್ರೇಕಗೊಂಡ ಅವನು ತನ್ನ ಪತ್ನಿಯ ಲಕ್ಷ್ಯವನ್ನು ಆ ಪತ್ರಿಕೆಗಳತ್ತ ಸೆಳೆಯಲು ಸಂಜ್ಞೆ ಮಾಡಿದ. ಆದರೆ ಆಕೆ ಶಾಂತವಾಗಿರೆಂದು ಮರುಸಂಜ್ಞೆ ಮಾಡಿದಳು.

ಕಟ್ಟಕಡೆಗೆ ೧೨ ಮಂದಿ ಜ್ಯೂರರರುಗಳ ಅಂಗೀಕಾರವಾಯಿತು. ಜೆಂಗರ್ ಅವರುಗಳನ್ನು ದಿಟ್ಟಿಸಿದ. ಫೋರ್ಮನ್, ಥಾಮಸ್ ಹಂಟ್, ದೃಢಕಾಯನಾದವನು. ಅವನು ಏನು ಯೋಚಿಸುತ್ತಿದ್ದನೆಂಬುದನ್ನು ಅವನ ಮುಖ ಲಕ್ಷಣದಿಂದ ತಿಳಿಯುವಂತಿರಲಿಲ್ಲ. ಆದರೆ ಏಳು ಮಂದಿ – ಬಹುಮತ – ಡಚ್ ಸಂಜಾತರು. ಅವರೆಲ್ಲ ಜೆಂಗರ್ ವಾದ್ಯಗಾರನಾಗಿದ್ದ ಚರ್ಚಿಗೇ ಬರುತ್ತಿದ್ದವರು. ಇದೇ ನಿಂದನೆಯ ಆಪಾದನೆಯ ಮೇಲೆ ಒಂದೂವರೆ ವರ್ಷಗಳ ಹಿಂದೆ ಜೆಂಗರ್ ಆಪಾದಿತನಾಗಿದ್ದಾಗ, ನ್ಯಾಯಮೂರ್ತಿ ಡಿಲಾನ್ಸೆ "ಅಪರಾಧಿಯೆಂದೇ ತೀರ್ಮಾನಿಸಿ" ಎಂದು ರಾಗೋದ್ರೇಕದಿಂದ ನುಡಿದಿದ್ದರೂ ನಿರ್ದೋಷಿಯೆಂದು ತೀರ್ಮಾನಿಸಿದ ಶ್ರೇಷ್ಠ ಜ್ಯೂರಿ ಮಂಡಲದಲ್ಲಿ ಜ್ಯೂರಿಯಾಗಿದ್ದ ಹರ್ಮನ್ ರಟ್ಜರ್ಸ್ ಕೂಡ ಈ ಪೈಕಿ ಒಬ್ಬ. ಜೆಂಗರ್‌ನಲ್ಲಿ ಆಶಾಬಳ್ಳಿ ಚಿಗುರತೊಡಗಿತು.

ಈ ಪ್ರಾಮುಖ್ಯ ವಿಚಾರಣೆಯ ಅವಲೋಕನಕ್ಕಾಗಿ ಹೆಚ್ಚು

ಹೆಚ್ಚಾಗಿ ಜನ ಬರುತ್ತಿದ್ದರು. ಮೂರು ಕಡೆ ಗೋಡೆಗಳ ಪಕ್ಕದಲ್ಲಿ ಹಾಕಿದ್ದ ಆಸನಗಳೆಲ್ಲ ಭರ್ತಿಯಾಗಿದ್ದವು. ಕಿಟಕಿಗಳ ಛಡಿಗಳ ಮೇಲೂ, ಬಾಗಿಲುಗಳಲ್ಲೂ, ಹೊರಗಿನ ಮಹಡಿ ಮೆಟ್ಟಲುಗಳ ಮೇಲೂ ಜನ ಕಿಕ್ಕಿರಿದಿದ್ದರು. ರಸ್ತೆಗಳಲ್ಲೂ ಜನ ಸೇರಿ ಗದ್ದಲ ಮಾಡುತ್ತಿದ್ದುದು ಕೇಳಿಸುತ್ತಿತ್ತು.

ಬಾಗಿಲ ಬಳಿ ಸಂಭವಿಸಿದ ಗದ್ದಲದಿಂದ, ಎಲ್ಲ ಅತ್ತ ತಿರುಗಿ ದರು. ಗುಂಪಿನ ಮೇಲೆದ್ದ ಅಲೆಕ್ಸಾಂಡರನ ಸ್ನೇಹಪರ ಮುಖ ಕಟ್ಟ ಕಡೆಗೆ ಜೆಂಗರಿಗೆ ಕಾಣಿಸಿತು. ಸಂತೋಷವೂ, ತಾನು ಪ್ರಾಮುಖ್ಯ ನೆಂಬ ಭಾವವೂ ಅವನ ವದನದಲ್ಲಿ ಮುದ್ರೆ ಒತ್ತಿದ್ದವು. ಪ್ರಯಾಸ ದಿಂದ ಜನಗುಂಪು ದಾರಿ ಮಾಡಿಕೊಟ್ಟಿತು.

ಅಲೆಕ್ಸಾಂಡರನ ಪಕ್ಕದಲ್ಲಿ ಗಂಭೀರ ಮುಖ ಮುದ್ರೆಯ ವೃದ್ಧ ನೊಬ್ಬ ಹೆಜ್ಜೆ ಹಾಕುತ್ತಿದ್ದ. ಸಾಮಾನ್ಯವಾಗಿ ಶ್ರೀಮಂತಾಗ್ರಣಿ ಗಳಾದ ರಾಜಸಭಾಭೂಷಿತರು ಧರಿಸುವಂತಹ ನೀಳವಾದ ಸುರುಳು ಸುರುಳಿಯ ಟೋಫನ್ (ವಿಗ್) ಅವನ ತಲೆಯ ಮೇಲಿತ್ತು. ನಿಧಾನವಾಗಿ ಇಬ್ಬರು ನಾಗರಿಕರೂ ಕೋರ್ಟಿನೊಳಕ್ಕೆ ಬಂದರು. ಹೊಸ ಮುದುಕ ಕಾಲೆಳೆದು ಹಾಕುತ್ತಿದ್ದ – ಅವನಿಗೆ ಆರೋಗ್ಯ ನೆಟ್ಟಗಿದ್ದಂತಿರಲಿಲ್ಲ.

ಇದೇನೆಂಬುದನ್ನು ಅರ್ಥಮಾಡಿಕೊಳ್ಳಲು ಜೆಂಗರ್ ತನ್ನ ಮಿತ್ರರುಗಳ ಕಡೆ ತಿರುಗಿದ. ಅವನ ಪತ್ನಿಗಂತೂ ಉತ್ಸಾಹ ಮೇರೆ ಮೀರಿತ್ತು. ತನ್ನ ಚಿಕ್ಕ ಕೈ ಮುಷ್ಟಿಯನ್ನು ಬಾಯಿಗೆ ಅದುಮಿ ಕೊಂಡು, ಎದ್ದೂ ಕುಳಿತೂ ಮಾಡುತ್ತಿದ್ದಳು.

ಸಾವಕಾಶವಾಗಿ, ಪ್ರಯಾಸದಿಂದ ಅವರಿಬ್ಬರೂ ಕೋರ್ಟಿನಲ್ಲಿ ಮುಂಭಾಗಕ್ಕೆ ಬಂದರು. ಅವರ ಹಿಂದೆಯೇ ಇಬ್ಬರು ಸೇವಕರುಗಳು ಪುಸ್ತಕಗಳನ್ನು ಹೊತ್ತು ತಂದರು.

ಗುಮಾಸ್ತೆ ಲೈರ್ ಮತ್ತೆ ಪ್ರಶ್ನೆಹಾಕಿದ, "ಏನು ಹೆಸರು ಹೇಳಿದಿರಿ?" ವೃದ್ಧ ಉತ್ತರವಿತ್ತಿದ್ದ. ಅಂತೆ ಗುಮಾಸ್ತೆ ತನ್ನ ದಪ್ಪ ಗಂಟಲಿನಲ್ಲಿ "ಆಂಡ್ರ್ಯೂ ಹ್ಯಾಮಿಲ್ಟನ್" ಎಂದು ಪುನರುಚ್ಚರಿಸಿ,

ಬರೆದುಕೊಂಡ. "ನ್ಯಾಯವಾದಿ ಮಂಡಳಕ್ಕೆ ಸೇರಿಸಲ್ಪಟ್ಟಿದ್ದೆಲ್ಲಿ?" ಗುಮಾಸ್ತೆ ಮತ್ತೆ ಕೇಳಿದ.

ಇಷ್ಟು ಹೊತ್ತಿಗೆ, ಎಲ್ಲರೂ ನಿಶ್ಯಬ್ದವಾಗಿ ಆಲಿಸುತ್ತಿದ್ದರು. ವೃದ್ಧ ಹ್ಯಾಮಿಲ್ಟನ್ ಸ್ಪಷ್ಟವಾದ, ಬಿಗಿಮಾತುಗಳಿಂದ ಉತ್ತರಿಸಿದ, "ರಾಣಿ ಆನೆ ನೇಮಿಸಿದ ವಿಶೇಷ ಸಮಿತಿಯಿಂದ, ಲಂಡನ್‌ನಲ್ಲಿ"

ಜೆಂಗರ್ನ ಕೈ ಕುಲುಕಲು ವೃದ್ಧ ಕುಂಟುತ್ತ ನಡೆದಾಗ, ಜನ ಗುಂಪಿನಲ್ಲಿ ಪಿಸುಮಾತಿನ ಅಲೆಗಳೆದ್ದವು.

ಅಲೆಕ್ಸಾಂಡರ್ ಮುದ್ರಕನ ಕಿವಿಯಲ್ಲಿ ಆತುರದಿಂದ ಪಿಸುಗುಟ್ಟಿದ, "ಈ ಮುಂಚೆ ನಿನಗೆ ತಿಳಿಸುವ ಧೈರ್ಯ ನಮಗೆ ಬರಲಿಲ್ಲ. ಈ ವೃದ್ಧನನ್ನು ನಿನ್ನ ಪರ ನ್ಯಾಯವಾದಿತ್ವಕ್ಕೆ ಒಲಿಸಿ ಕರೆತರಲು ನನ್ನ ಪತ್ನಿ ರಹಸ್ಯವಾಗಿ ದೋಣಿಯಲ್ಲಿ ಫಿಲಿಡೆಲ್ಫಿಯಾಕ್ಕೆ ಹೋಗಿದ್ದಳು. ಆತನಿಗೆ ಆರೋಗ್ಯ ಚೆನ್ನಾಗಿರಲಿಲ್ಲ. ಅಂತೇ ಮುಂಚೆಯೇ ನಿನಗೆ ತಿಳಿಸಿ, ಆತ ಪ್ರವಾಸಮಾಡಲು ಅಸಮರ್ಥನಾದರೆ ನಿನಗೆ ಆಶಾಭಂಗವಾದೀತೆಂದು ಬಗೆದೆವು."

ನ್ಯಾಯಮೂರ್ತಿ ಡಿಲಾನ್ಸಿಯ ಮುಖದಿಂದ ಕೋಪದ ಕಿಡಿಗಳು ಉದುರುತ್ತಿದ್ದವು. ಪ್ರಾಯಶಃ ಅವರಿಗೂ ಹ್ಯಾಮಿಲ್ಟನ್ ಪರಿಚಯವಿದ್ದುದರಿಂದಲೋ ಏನೋ, ಗವರ್ನರ್ ಕಾಸ್ಬಿಯ ಮಿತ್ರರಿಗೆ ಮೇಲುಸಿರು ಬಂದು, ಅವರು ಪರಸ್ಪರ ಸಿಟ್ಟಿನ ಪಿಸುಮಾತುಗಳನ್ನು ವಿನಿಮಯ ಮಾಡಿಕೊಳ್ಳತೊಡಗಿದರು. ಅಲೆಕ್ಸಾಂಡರ್ ಆತುರದಿಂದ ಜೆಂಗರಿಗೆ ವಿವರಿಸಿದ: ನ್ಯೂಯಾರ್ಕಿನ ಆಚೆಗೆ ಹೋಗುತ್ತಿದ್ದ ವ್ಯವಹಾರಗಳಲ್ಲಿ, ಹ್ಯಾಮಿಲ್ಟನ್ ಅಲೆಕ್ಸಾಂಡರನ ಪಾಲುದಾರನಾಗಿ ಹತ್ತು ವರ್ಷಗಳ ಕಾಲ ಕೆಲಸಮಾಡಿದ್ದ. ಅದಕ್ಕೂ ಮುಂಚೆ ಇದೇ ಕೋರ್ಟಿನಲ್ಲಿ ಪಾವತಿಯಾಗದ ತೆರಿಗೆಗಳಿಗೆ ಸಂಬಂಧಿಸಿದ ವ್ಯವಹಾರವೊಂದರಲ್ಲಿ, ನ್ಯೂಯಾರ್ಕ್ ಸರಕಾರದ ಪರ ಪ್ರತಿವಾದಿಸಿದ್ದ. ವಿಲಿಯಂ ಪೆನ್ನನ ನ್ಯಾಯವಾದಿಯೂ ಆಗಿದ್ದ. ಬೆಂಜಮಿನ್ ಫ್ರಾಂಕ್ಲಿನ ಆಪ್ತಮಿತ್ರ. ಪೆನ್ಸಿಲ್ವೇನಿಯದಲ್ಲಿ ಅಟಾರ್ನಿ ಜನರಲ್, ಫಿಲಿಡೆಲ್ಫಿಯದಲ್ಲಿ ರಿಕಾರ್ಡರ್. ಪೆನ್ಸಿಲ್ವೇನಿಯದ ಶಾಸನ ಸಭೆಯ ಸದಸ್ಯನಾಗಿ

ಕಾರ್ಯಭಾರಗಳನ್ನೂ ಹೊತ್ತಿದ್ದ. ಕಳೆದ ಆರು ವರ್ಷಗಳಿಂದ ಆ ಶಾಸನ ಸಭೆಯ ಅಧ್ಯಕ್ಷನಾಗಿದ್ದ.

ಹ್ಯಾಮಿಲ್ಟನ್ನಿಗೆ ಸುಮಾರು ಎಂಬತ್ತು ವರ್ಷಗಳಾಗಿರಬಹುದೆಂದು ಜೆಂಗರ್ ಭಾವಿಸಿದ. ವಾಯುವ್ಯಾಧಿಯಿಂದ ಅವನು ವಿಪರೀತ ನರಳಿರಬೇಕು.

ಹ್ಯಾಮಿಲ್ಟನ್, ಜೇಂಬರ್ಸ್ ಪಕ್ಕದಲ್ಲಿ ಬಂದು ಕುಳಿತ. ವಿಚಾರಣೆಯ ಆರಂಭದಲ್ಲಿ ಜೆಂಗರಿಗೆ ಇಬ್ಬರು ನ್ಯಾಯವಾದಿಗಳಿದ್ದರು; ಈಗಲೂ ಇಬ್ಬರು ನ್ಯಾಯವಾದಿಗಳೇ.

ಹೊಸಬನೆಡೆಗೆ ಅಂಜಿಕೆಯಿಂದ ನೋಡುತ್ತ, ಅಟಾರ್ನಿ ಜನರಲ್ ಬ್ರಾಡ್ಲೆ ತನ್ನ ಸಹಾಯಕನ ಸಲಹೆ ಪಡೆದು, ಎದ್ದುನಿಂತು, ಗಂಟಲು ಸರಿಪಡಿಸಿಕೊಂಡು, ಆಪಾದನೆಯನ್ನು ಆರಂಭಿಸಿದ. "ಸಂಗತಿ" ಪತ್ರವನ್ನು ತನ್ನ ದೊಡ್ಡ ಕೈಗಳಲ್ಲಿ ಎತ್ತರವಾಗಿ ಹಿಡಿದು, ನಾಟಕೀಯವಾಗಿ ಓದತೊಡಗಿದ.

ಕಾನೂನಿನ ಪಾರಿಭಾಷಿಕ ಶಬ್ದಗಳಿಂದಲೇ ತುಂಬಿದ್ದ ಉದ್ದನೆಯ ವಾಕ್ಯಗಳನ್ನು ಕೇಳಿ, ನಿದ್ದೆಬಂದಂತಾದ ಜೆಂಗರ್, ಬ್ರಾಡ್ಲೆ ದಪ್ಪ ಗಂಟಲಿನಲ್ಲಿ ತನ್ನ ಪತ್ರಿಕೆಯ ವಾಕ್ಯಗಳನ್ನು ಓದತೊಡಗಿದಾಗ, ಎಚ್ಚೆತ್ತ. ಅವು, ತಾನೇ ಮೊಳೆ ಜೋಡಿಸಿ, ತನ್ನ ಕಿರುಗುಟ್ಟುವ ಯಂತ್ರದಲ್ಲಿ ತಾನೇ ಮುದ್ರಿಸಿದ್ದ, ತನಗೆ ಪರಿಚಿತವಾದ, ಕಟ್ಟುವಾಕ್ಯಗಳು. ಕೋರ್ಟಿಗೇ ಕೋರ್ಟೇ ಎಚ್ಚೆತ್ತು ಆಲಿಸ ತೊಡಗಿತು. ಗವರ್ನರ್ ಕಾಸ್ಬಿಯನ್ನು ಪ್ರಜಾಪೀಡಕನೆಂದೂ, ಕಾನೂನುಗಳನ್ನು ಉಲ್ಲಂಘಿಸಿದ, ಜನತೆಯನ್ನು ಗುಲಾಮಗಿರಿಗೆ ಇಳಿಸಲು ಯತ್ನಿಸಿದ ಪಾತಕಿ ಎಂದೂ ಸ್ಪಷ್ಟವಾಗಿ ಬರೆದಿದ್ದ ಆ ವಾಕ್ಯಗಳನ್ನು ಕಾಸ್ಬಿಯ ನ್ಯಾಯವಾದಿಯೇ ಓದಿ ಹೇಳುತ್ತಿದ್ದುದು ವಿಚಿತ್ರವೆನಿಸಿತು.

ಜೆಂಗರ್ ಸುತ್ತ ಕಣ್ಣು ಹೊರಳಿಸಿದ. ದುಷ್ಟ ಗವರ್ನರರ ಖಂಡನೆಯನ್ನು ತಾನು ಮುದ್ರಿಸಿದ್ದು ಮಾತ್ರವಲ್ಲ, ಅದನ್ನು ನ್ಯೂಯಾರ್ಕಿನ ಸುಪ್ರೀಂ ಕೋರ್ಟಿನಲ್ಲಿ ಅತ್ಯಂತ ಭಾರಿ ಜನಸಂದಣಿಯ ಮುಂದೆ ಅಟಾರ್ನಿ ಜನರಲ್ಲೇ ಓದಿ ಹೇಳುತ್ತಿದ್ದಾನೆ. ಸುಪ್ರೀತನಾಗದಿರಲು

ಜೆಂಗರಿಗೆ ಸಾಧ್ಯವಾಗಲಿಲ್ಲ.

ಅಟಾರ್ನಿ ಜನರಲ್ ಬಯಸಿದ್ದ ಪರಿಣಾಮ, ಪ್ರೇಕ್ಷಕರ ಮೇಲಾಗಲಿಲ್ಲ. ತಾನು ಮುದ್ರಿಸಿದ್ದ ಮಾತುಗಳಿಗೇ ಸಮ್ಮತಿ ನೀಡುವಂತೆ, ಪ್ರೇಕ್ಷಕರು ತಲೆಯಾಡಿಸುತ್ತಿದ್ದುದನ್ನು ಜೆಂಗರ್ ಗಮನಿಸಿದ. ನಗು ಬಂತು.

ಈ ಪತನ ಕಾಲದಲ್ಲಿ ಅಲೆಕ್ಸಾಂಡರ್, ಮತ್ತು ವೃದ್ಧ ಹ್ಯಾಮಿಲ್ಟನ್ ಜೆಂಗರನ ಇನ್ನೊಬ್ಬ ನ್ಯಾಯವಾದಿ ಚೇಂಬರ್ಸ್‌ಗೆ ಏನೋ ಹೇಳಿದರು.

ಚೇಂಬರ್ಸ್ ಬಂದಿಯೊಂದಿಗೆ ವಿಚಾರ ವಿನಿಮಯಮಾಡಲು ಎದ್ದುಬಂದ. ಅನಂತರ ವಾಪಸ್ಸಾಗಿ ಆ ಮಾತುಗಳನ್ನು ಹ್ಯಾಮಿಲ್ಟನ್ನಿಗೆ ತಿಳಿಸಿದ.

ಬ್ರಾಡ್ಲೆ ತನ್ನ ಮಾತುಮುಗಿಸಿ ಕುಳಿತುಕೊಳ್ಳುವ ಹೊತ್ತಿಗೆ ಜೆಂಗರನ ನ್ಯಾಯವಾದಿಗಳು ಸಿದ್ಧರಾಗಿದ್ದರು.

ಚೇಂಬರ್ಸ್ ಪ್ರತಿವಾದವನ್ನಾರಂಭಿಸಿದ. ಜ್ಯೂರಿ ಮಂಡಲಕ್ಕೆ ವಿನಯವಾಗಿ ಬಾಗಿ, "ನಿಂದನೆ" ಎಂಬ ಶಬ್ದದ ಅರ್ಥವೇನೆಂದು ಸ್ಪಷ್ಟವಾಗಿ ವಿವರಿಸಿದ: "ಯಾರನ್ನಾದರೂ ಜನದ್ವೇಷಕ್ಕೆ ಅಥವಾ ಜನಮೂದಲಿಕೆಗೆ ಗುರಿಪಡಿಸುವ ಉದ್ದೇಶದಿಂದ ಪ್ರಕಟಿಸಿದ ಯಾವುದೇ ಹೇಳಿಕೆ" ಎಂದು.

ತನ್ನ ಪರ ಪ್ರತಿವಾದಿಸುತ್ತಿದ್ದವನಲ್ಲಿ ಜೆಂಗರಿಗೆ ಪೂರ್ಣ ವಿಶ್ವಾಸವಿರಲಿಲ್ಲ. ಅಂತೇ ಆಸಕ್ತಿಯಿಂದ ಆಲಿಸಿದ. ಆದರೆ ಚೇಂಬರ್ಸ್ ಈ ವಿಷಯವನ್ನು ಕಳೆದ ಮೂರು ತಿಂಗಳಿಂದ ಅಧ್ಯಯನ ಮಾಡಿದ್ದ. ತನ್ನ ಕಲಿಕೆಯನ್ನು ಪ್ರದರ್ಶಿಸುವ ಆತುರ ಅವನಲ್ಲಿತ್ತು. ಅವನದು ಜೇನ್ನವಿಯಂತಹ ಮಾತು. ಜ್ಯೂರಿಗಳನ್ನು ಮನವೊಲಿಸುವುದನ್ನೂ ಬಲ್ಲ. ಹ್ಯಾಮಿಲ್ಟನ್ನನ ಕಡೆ ದೃಷ್ಟಿ ಬೀರಿ, ತನ್ನ ಮಾತುಗಳನ್ನು ಮುಕ್ತಾಯಗೊಳಿಸುತ್ತಾ ಹೀಗೆಂದ: "ಉದ್ಧರಿಸಿದ ವಾಕ್ಯಗಳು 'ನಿಂದನೆ'ಗಳೆಂದು ಅಟಾರ್ನಿ ಜನರಲ್ ಸಿದ್ಧಾಂತಪಡಿಸಲಾರರೆಂದು ನನ್ನ ಭರವಸೆ."

ಅಲೆಕ್ಸಾಂಡರ್ ಒಂದು ಕೈಯನ್ನೂ, ಚೇಂಬರ್ಸ್ ಮತ್ತೊಂದು ಕೈಯನ್ನೂ ಹಿಡಿದು ಹ್ಯಾಮಿಲ್ಟನ್ನನ್ನು ಎದ್ದು ನಿಲ್ಲಿಸಿದರು. ಜೆಂಗರ್ ಬೆದರಿದ್ದ. ಹ್ಯಾಮಿಲ್ಟನ್ನನ ಅನೇಕ ಬಿರುದುಗಳೇನೋ ಅವನನ್ನು ಮೆಚ್ಚಿಸಿದ್ದವು. ಆದರೆ ತನ್ನ ಪ್ರಾಣವನ್ನೇ ಪ್ರಾಯಶಃ ತನ್ನ ವ್ಯವಹಾರವನ್ನು ಅತ್ಯಲ್ಪವಾಗಿ ಅರಿತಿದ್ದ ಈ ನಿಶ್ಯಕ್ತ ವೃದ್ಧನ ಕೈಗೊಪ್ಪಿಸಿದ್ದ.

———

# ಅಧ್ಯಾಯ ೩೧

## ಸ್ವಾತಂತ್ರ್ಯಕ್ಕಾಗಿ

ಆ ಹಿರಿಯ ನ್ಯಾಯವಾದಿ ಕುಂಟುತ್ತ ಒಂದು ಹೆಜ್ಜೆ ಮುಂದಿಟ್ಟ. ಎದೆಯುರಳಿಸುವ ಸುಭದ್ರ ರೀತಿಯನ್ನೂ, ಆಕರ್ಷಕವಾದ ಮುಖವನ್ನು ಮೇಲಕ್ಕೆತ್ತಿದ ಶೀವಿಯನ್ನೂ ಗಮನಿಸಿದ ಜೆಂಗರಿಗೆ ಸ್ವಲ್ಪ ಸಮಾಧಾನ ವಾಯಿತು. "ಮಹಾಸ್ವಾಮಿ, ಪ್ರತಿವಾದಿಯಾದ ಜೆಂಗರ್‌ನ ಪರವಾಗಿ ನಾನು ಈ ವ್ಯವಹಾರಕ್ಕ ಸಂಬಂಧಿಸಿದ್ದೇನೆಂದು ತಮ್ಮ ಚಿತ್ತಕ್ಕೆ ತರುತ್ತೇನೆ. ವ್ಯವಹಾರದ ಸಾಮಾನ್ಯ ಅಂಗವಾಗಿ, ಆ ಪತ್ರಿಕೆಗಳನ್ನು ನನ್ನ ಕಕ್ಷಿಯೇ ಮುದ್ರಿಸಿ ಪ್ರಕಟಿಸಿದನೆಂದು ಅಟಾರ್ನಿ ಜನರಲ್ ಸಿದ್ಧಾಂತಪಡಿಸಬೇಕು. ಸ್ವತಂತ್ರವಾಗಿ ಜನಿಸಿದ ಪ್ರತಿಯೊಬ್ಬನಿಗೆ ಉಂಟೆಂದು ನಾನು ಭಾವಿಸುವ ಹಕ್ಕಿನಂತೆ, ನನ್ನ ಕಕ್ಷಿಯೂ ಪ್ರಕಟಿಸಿರುವ ಆ ಆಕ್ಷೇಪಣೆಗಳನ್ನು ಪ್ರಕಟಿಸಿದವನು ಅವನಲ್ಲವೆಂದು ನಿರಾಕರಿಸುವುದು ಯೋಗ್ಯವಲ್ಲವೆಂದು ನನ್ನ ಭಾವನೆ. ಆದ್ದರಿಂದ ಈ ಅಂಶವನ್ನು ಸಿದ್ಧಾಂತಪಡಿಸಲು ಅಟಾರ್ನಿ ಜನರಲ್ ನಡೆಸಬೇಕಾದ ಸಾಕ್ಷಿಗಳ ವಿಚಾರಣೆಯ ಶ್ರಮವನ್ನು ಅವರಿಗೆ ತಪ್ಪಿಸುತ್ತೇನೆ. 'ಸಂಗತಿ'ಯಲ್ಲಿ ಉದ್ಧೃತವಾಗಿರುವ ಎರಡು ಪತ್ರಿಕೆಗಳನ್ನು ನನ್ನ ಕಕ್ಷಿಯೇ ಮುದ್ರಿಸಿ ಪ್ರಕಟಿಸಿದ್ದಾನೆ, ಎಂದು ಅವನ ಪರವಾಗಿ ಒಪ್ಪಿಕೊಳ್ಳುತ್ತೇನೆ. ಮತ್ತು ಈ ಮೂಲಕ ಯಾವ ಪಾತಕವನ್ನೂ ಅವನು ಗೈದಿಲ್ಲವೆಂದು ನಂಬುತ್ತೇನೆ."

ಕೋರ್ಟಿನಲ್ಲಿದ್ದ ಗವರ್ನರ್ ಪಕ್ಷದ ಕಡೆಯಿಂದ ಉಬ್ಬಸಪಡುವ ಶಬ್ದ ಕೇಳಿಬಂತು. ಜೆಂಗರ್ ಆ ಪತ್ರಿಕೆಗಳನ್ನು ಮುದ್ರಿಸಿದನೇ ಇಲ್ಲವೇ ಎಂಬುದೊಂದೇ ಜ್ಯೂರಿಗಳು ನಿರ್ಧರಿಸಬೇಕಾದ ಪ್ರಶ್ನೆಯಾಗಿದ್ದುದರಿಂದ, ಈ ಒಪ್ಪಿಗೆ ವಿಚಾರಣೆಯನ್ನೇ ಮುಕ್ತಾಯ

ಗೊಳಿಸಿತ್ತು. ನ್ಯಾಯಮೂರ್ತಿಗಳು ಇನ್ನು ಜ್ಯೂರಿ ಮಂಡಲವನ್ನು ನಿವೃತ್ತಗೊಳಿಸಿ, ಆ ವಾಕ್ಯಾವಳಿಗಳು "ನಿಂದನೆ"ಗಳೇ ಅಲ್ಲವೇ ಎಂಬುದನ್ನು ತಾವು ನಿರ್ಧರಿಸಬೇಕು.

ಅಟಾರ್ನಿ ಜನರಲ್ ಬ್ರಾಡ್ಲೆ ಭಾರವಾಗಿ ಮೇಲೆದ್ದ. ಉದ್ರೇಕದಿಂದ ನುಡಿದ, "ಮಹಾಸ್ವಾಮಿ, ತಮಗೆ ಸಮ್ಮತವೆನಿಸಿದರೆ, ಈಗಾಗಲೇ ಹ್ಯಾಮಿಲ್ಟನ್ 'ಸಂಗತಿ'ಯನ್ನು ಸಮರ್ಥಿಸಿರುವುದರಿಂದ, ನಮ್ಮ ಸಾಕ್ಷಿಗಳ ವಿಮೋಚನೆ ಮಾಡಬಹುದೆಂದು ಭಾವಿಸುತ್ತೇನೆ; ಇನ್ನು ಅವರ ಅಗತ್ಯವಿಲ್ಲ."

ಹ್ಯಾಮಿಲ್ಟನ್ ಅವನ ಕಡೆ ತಿರುಗಿದ. ಅಟಾರ್ನಿ ಜನರಲ್ ಮತ್ತು ಅವನ ಮಿತ್ರವಲಯವನ್ನು ಒಂದೇ ಸಾರಿಗೆ ಆತ್ತ ಒತ್ತಲಿಸಿದಂತೆ ಪರಿಣಾಮಕಾರಿಯಾಗಿ ಕೈಬೀಸಿ, ದಿಟ್ಟ ಮಾತುಗಳಲ್ಲಿ ನುಡಿದ, "ಆ ಪತ್ರಿಕೆಗಳ ಮುದ್ರಣ ಮತ್ತು ಪ್ರಕಾಶನದ ವಿಷಯವನ್ನು ಸಿದ್ಧಾಂತಪಡಿಸುವ ಉದ್ದೇಶಕ್ಕೆ ಮಾತ್ರವೇ ಅವರುಗಳನ್ನು ನೀವು ಕರೆಸಿದ್ದರೆ, ನಾವೀಗಾಗಲೇ ಅದನ್ನು ಒಪ್ಪಿಕೊಂಡಿದ್ದೇವೆ ಮತ್ತು ಆ ಮಾತಿಗೆ ಬದ್ಧರಾಗಿದ್ದೇವೆ!"

ಜೆಂಗರ್ ನ್ಯಾಯಮೂರ್ತಿಗಳ ಕಡೆ ಕತ್ತು ತಿರುಗಿಸಿ, ಆ ಮಾತಿಗೆ ತನ್ನ ಸಮ್ಮತಿಯೂ ಇದೆ ಎನ್ನುವಂತೆ ಬಿರುಸಾಗಿ ತಲೆಹಾಕಿದ.

ಕೊಠಡಿಯಲ್ಲೆಲ್ಲ ಪಿಸುಗುಟ್ಟುವ ಮಾತುಗಳು ಹಬ್ಬಿದವು. ನ್ಯಾಯಮೂರ್ತಿ ಡಿಲಾನ್ಸೆ ಜ್ಯೂರಿಗಳನ್ನು ನಿವೃತ್ತಿಗೊಳಿಸುವರೆಂದು ಕಾಯುತ್ತ ಕುಳಿತ ಪ್ರೇಕ್ಷಕರಲ್ಲಿ ಅನೇಕ ಮಂದಿ ಅರ್ಧ ಎದ್ದರು. ಮತ್ತೆ ಮೌನ ತನ್ನ ಮುಸುಕೆಳೆಯುತ್ತ ಬಂತು. ಪಕ್ಕದವರು ಉಸಿರಾಡುವುದೂ ಕೂಡ ಜೆಂಗರಿಗೆ ಕೇಳಿಸುವಷ್ಟು ನಿಶ್ಶಬ್ದವಾಯಿತು.

ಬ್ರಾಡ್ಲೆ, ಗುಮಾಸ್ತೆ, ಷರೀಫ್ ಬಿಲ್ಲಿ ಕಾಸ್ಬಿ ಇವರುಗಳ ನಡುವೆ ಪಿಸುಮಾತು ಚೆಂಡಾಡಿತು. ಜೆಂಗರನ ಕೆಲಸಗಾರ, ಅವನ ಇಬ್ಬರು ಮಕ್ಕಳು ಜಾನ್ ಮತ್ತು ಪೈಟರ್ ಮತ್ತು ಇತರ ಕೆಲವು ಮಂದಿ ನೆರೆಯುವರನ್ನು ಸಾಕ್ಷಿಗಳ ಕೊಠಡಿಯಿಂದ ಸಾಕ್ಷಿ ಕಟಾಂಜನಕ್ಕೆ ಕರೆತರಲಾಯಿತು. ಅವರುಗಳ ಅಗತ್ಯವಿಲ್ಲವೆಂದು ಗುಮಾಸ್ತೆ ದಪ್ಪ

ಗಂಟಲಿನಲ್ಲಿ ನುಡಿದ. ಅವರುಗಳು ನಿಲ್ಲಲೆಡೆ ಹುಡುಕುತ್ತ ಕೊಠಡಿಯ ಪಕ್ಕದಲ್ಲಿ ಗುಂಪು ಕೂಡಿದರು.

ತನ್ನ ಹುಡುಗರನ್ನು ಕಂಡ ಜೆಂಗರಿಗೆ ಸ್ವಲ್ಪ ಸಮಾಧಾನ ವೆನಿಸಿತು. ಅವರು ತನ್ನ ವಿರುದ್ಧ ಸಾಕ್ಷಿಗಳಾಗಬೇಕಾಗಿ ಬಂದುದರಿಂದ ಅವನಿಗೆ ಗಾಭರಿಯೇನೂ ಆಗಿರಲಿಲ್ಲ. ಅಲ್ಲದೆ ಇದೇ ತಾನೇ ಹ್ಯಾಮಿಲ್ಟನ್ ನುಡಿದಂತೆ, ಅವರೂ ಸತ್ಯವನ್ನೇ ನುಡಿಯುತ್ತಿದ್ದರೆಂದು, ಅವನಿಗೆ ಗೊತ್ತೇ ಇತ್ತು. ಅದೊಂದು ಹೆಮ್ಮೆಯ ಸಂಗತಿಯೂ ಹೌದು.

ಹುಡುಗರು ಅವನೆಡೆ ಕೈಬೀಸಿದರು. ತಮ್ಮ ತಂದೆಯನ್ನು ಕಂಡ ಸಂತೋಷದಲ್ಲಿ, ಅಲ್ಲಿ ಭಾರಿಯಾಗಿ ನೆರೆದಿದ್ದ ಪ್ರೇಕ್ಷಕ ಗಣವನ್ನು ಅವರು ಲಕ್ಷಿಸಲಿಲ್ಲ. ನ್ಯಾಯಮೂರ್ತಿ ಅಸಹನೆಯಿಂದ ಕಾದ. ಕೊನೆಗೆ "ಅಟಾರ್ನಿ ಜನರಲ್, ನಿಮ್ಮ ಮಾತನ್ನು ಮುಂದು ವರಿಸಿ." ಎಂದ.

ಗುಂಪಿನ ಕಡೆಯಿಂದ ಸಮಾಧಾನದ ನಿಟ್ಟುಸಿರು ಕೇಳಿಬಂತು. ಜ್ಯೂರಿಗಳು ಒಬ್ಬರ ಮುಖ ಒಬ್ಬರು ನೋಡಿ ಮುಗುಳುನಗೆ ಬೀರಿದರು. ಅವರನ್ನು ನಿವೃತ್ತಿಗೊಳಿಸುವ ಎದೆಗಾರಿಕೆಗೆ ನ್ಯಾಯ ಮೂರ್ತಿ ಕೈಹಾಕಲಿಲ್ಲ.

ಅಟಾರ್ನಿ ಜನರಲ್ ಬ್ರಾಡ್ಲೆ ಸಹಜವಾಗಿಯೇ ಪೇಚಿನಲ್ಲಿ ಸಿಕ್ಕಿ ಬಿದ್ದಿದ್ದ. ದಿಕ್ಕು ತೋಚದವನಂತೆ ಮಾತನಾಡುವಾಗ ಕೈಗಳನ್ನೆತ್ತಿ ಅಸಹಾಯಕನಾಗಿ ತೊಡೆಗಳ ಮೇಲೆ ಹೊಡೆದುಕೊಂಡ. ಅವನನ್ನು ಎರಡು ಪಕ್ಷದವರೂ ಅರಕ್ಷಿತ ಸ್ಥಿತಿಯಲ್ಲಿ ಗುಂಡಿಗೆ ಕೆಡವಿದರು. ಮುಂದಿನ ಕ್ರಮಕ್ಕೆ ಅವನು ಸಿದ್ಧನಿಲ್ಲ ಎಂಬುದು ಜ್ಯೂರಿಗಳಿಗೂ ಜೆಂಗರಿಗೂ ಗೊತ್ತಾಗುವಂತಾಯಿತು. ಕೂಡಲೆ ಬ್ರಾಡ್ಲೆ ಚೇತರಿಸಿ ಕೊಂಡ. ತಾನು ಸಿದ್ಧನಾಗಿದ್ದೇನೆಂದು ಸಿದ್ಧಾಂತಪಡಿಸಲು, ಅವನು ಮೇಜಿನೊಳಗಿಂದ ಒಂದು ಕಂತೆ ಕಾಗದಗಳನ್ನು ಹಿರಿದೆಳೆದು, ಎತ್ತಿ ಹಿಡಿದ.

ಅನಂತರ ಬ್ರಾಡ್ಲೆ ಸಮಂಜಸವಾಗಿಯೇ ಮಾತನಾಡಿದ.

ಆದರೆ ಅವನು ಮುಂದಿಡುತ್ತಿದ್ದ ಪ್ರತಿಯೊಂದು ವಾದವನ್ನು ಹ್ಯಾಮಿಲ್ಟನ್ ಗಾಳಿಗೆ ತೂರಿಬಿಡುತ್ತಿದ್ದ. ಕೆಲವೊಮ್ಮೆ ಅವರಿಬ್ಬರೂ ಕತ್ತಿ ಕಾಳಗ ನಡೆಸುತ್ತಿರುವವರಂತೆ ಕಂಡರು. ಭಾರಿ ದೊಣ್ಣೆಗಳನ್ನು ಹಿಡಿದ ಠಕ್ಕರೋಪಾದಿಯಲ್ಲಿ ಒಬ್ಬರ ಮೇಲೊಬ್ಬರು ಎರಗುತ್ತಿರುವಂತೆ, ಜೆಂಗರಿಗೆ ಭಾಸವಾಯಿತು.

ಗವರ್ನರ್ ಮತ್ತು ಸರಕಾರದ ಇತರ ಅಧಿಕಾರಿಗಳಿಗೆ ಗೌರವ ಸಲ್ಲಬೇಕು. ಇಲ್ಲವಾದರೆ ಜನ ಅವರಿಗೆ ವಿಧೇಯರಾಗಿರಲಾರರು ಎಂದು ಬ್ರಾಡ್ಲೆ ನುಡಿದ. ಆದ್ದರಿಂದ ಗವರ್ನರನ್ನು ಖಂಡಿಸುವ ಯಾವುದೇ ಮುದ್ರಿತ ಹೇಳಿಕೆಯೂ 'ನಿಂದನೆ'ಯೇ. ಅಂತೇ ಆದರ ಮುದ್ರಕ ಶಿಕ್ಷಿತನಾಗಲೇಬೇಕು.

ಹ್ಯಾಮಿಲ್ಟನ್ ಆ ಮಾತನ್ನು ಗೇಲಿಮಾಡಿದ. ಗವರ್ನರರ ಕ್ರೂರವಾದ ಹಾಗೂ ಅನ್ಯಾಯವಾದ ಕೃತಿಗಳಿಂದ, ನರಳುವ ಜನಕ್ಕೆ, ದೂರಿಡುವ ಹಕ್ಕೂ ಇಲ್ಲವೇನು ? ಸತ್ಯವಾದ ದೂರಿನ ಮುದ್ರಣ ಹೇಗೆ ತಾನೇ 'ನಿಂದನೆ'ಯಾದೀತು ?. ಜೆಂಗರ್ ಮುದ್ರಿಸಿದ ಅಂಶಗಳನ್ನು ಸಮರ್ಥಿಸಲು ತಾನು ಸೂಕ್ತ ಸಾಕ್ಷಿಗಳನ್ನು ಕರೆಸುವುದಕ್ಕೂ ಸಿದ್ಧ ಎಂದ.

ಧಗೆ ತುಂಬಿದ ಕೋರ್ಟಿನಲ್ಲಿ ಬಳಲಿ ನಿಂತಿದ್ದ ಜೆಂಗರ್ ಈ ಮಾತುಗಳನ್ನು ಕೇಳಿ ಮುಗುಳ್ನಕ್ಕ. ಗವರ್ನರ್ ಕಾಸ್ಬಿ, ನಿಜವಾಗಿಯೂ ೫೦,೦೦೦ ಎಕರೆ ಭೂಮಿಯನ್ನು ಕದ್ದಿದ್ದ, ವಾನ್ ಡಾಂಗೆ ಜ್ಯೂರಿ ವಿಚಾರಣೆಯನ್ನು ನಿಜವಾಗಿಯೂ ನಿರಾಕರಿಸಿದ, ನಿಜವಾಗಿಯೂ ಲಂಚ ಪಡೆದಿದ್ದ, ಎರಡು ಚುನಾವಣೆಗಳಲ್ಲೂ ನಿಜವಾಗಿ ಮೋಸ ಮಾಡಿದ ಮತ್ತು "ಜರ್ನಲ್" ಆಗಿಂದಾಗ್ಗೆ ಆಪಾದಿಸಿದ ಇತರ ಅಕೃತ್ಯಗಳನ್ನು ನಿಜವಾಗಿಯೂ ಮಾಡಿದ ಎಂದು ಸಾಕ್ಷಿಗಳು ಕಟಾಂಜನದಲ್ಲಿ ನಿಂತು ನುಡಿಯುವ ದೃಶ್ಯ ಬಹು ತಮಾಷೆಯೆನಿಸೀತು!

ಈ ಮಾತಿನಿಂದ ಗಾಬರಿಗೊಂಡ ಡಿಲಾನ್ಸೆ ವಾದವಿವಾದದಲ್ಲಿ ಪ್ರವೇಶಿಸಿ ವೃದ್ಧ ನ್ಯಾಯವಾದಿಯೊಡನೆ ಕಲಹಮಾಡಿದ. ಜೆಂಗರ್‌ನ ಪತ್ರಿಕೆಯಲ್ಲಿ ಪ್ರಕಟವಾದ ಅಂಶಗಳು ನಿಜವಾಗಿರಲಿ, ಸುಳ್ಳಾಗಿರಲಿ

ಪರಿಣಾಮದಲ್ಲೇನೂ ವ್ಯತ್ಯಾಸವಾಗದೆಂದು ಸಾರಿದ. ಅವು ಗವರ್ನರರ ವಿರುದ್ಧವಾದುವು ಎಂದರೆ ಸಾಕು. ಅಷ್ಟರಿಂದಲೇ ಅವು "ನಿಂದನೆ" ಗಳೆನಿಸುವುವು.

ಹ್ಯಾಮಿಲ್ಟನ್ ಅವನನ್ನು ವಿಾರಿಸಿದ ಜಾಣ. ನ್ಯಾಯ ಮೂರ್ತಿಯ ವಾದವನ್ನು ಛಿದ್ರಗೊಳಿಸಿ ಅವನ ಮುಖವಿಳಿಸಿದ.

ಆದರೆ ನ್ಯಾಯಮೂರ್ತಿ ಡಿಲಾನ್ಸೆ ಗವರ್ನರ್ ಕಾಸ್ಬಿಯ ಆಜ್ಞೆ ಗಳನ್ನು ಪಾಲಿಸಬೇಕಿತ್ತು. ಕಾನೂನು ಏನು ಹೇಳಿದರೇನು! ಆ ಹೇಳಿಕೆಗಳನ್ನು ಸಮರ್ಥಿಸುವ ಸಾಕ್ಷ್ಯಕ್ಕೆ ಅವನು ಅವಕಾಶ ಕೊಡು ವಂತಿರಲಿಲ್ಲ. ಅಂಥದಕ್ಕೆ ತಾನೇನಾದರೂ ಅವಕಾಶವಿತ್ತರೆ, ಕಾಸ್ಬಿ ತನ್ನನ್ನು ತತ್‌ಕ್ಷಣ ವಜಾಮಾಡುವುದು ಖಚಿತವೆಂದು ಅವನಿಗೆ ಗೊತ್ತಿತ್ತು. ಅಂತೇ ತನ್ನೊಡನೆ ವಾದಿಸುವುದನ್ನು ನಿಲ್ಲಿಸುವಂತೆ, ಹ್ಯಾಮಿಲ್ಟನ್ನಿಗೆ ಆಜ್ಞೆ ಮಾಡಿದ.

ಒಡನೆ ಹ್ಯಾಮಿಲ್ಟನ್ ಜ್ಯೂರಿಗಳ ಕಡೆ ತಿರುಗಿದ. "ಮಾನ್ಯರೆ, ನಾವು ಮನವಿ ಮಾಡಿಕೊಳ್ಳಬೇಕಾದ್ದು ನಿಮಗೇ. ಸಾಕ್ಷಿಗಳನ್ನು ಕರೆಯುವುದಕ್ಕೆ ಕೋರ್ಟು ಏಕೆ ಅವಕಾಶ ಕೊಡುತ್ತಿಲ್ಲವೆಂಬುದೂ ನಿಮಗೆ ಗೊತ್ತು. ಗವರ್ನರನ್ನು ಕುರಿತ ಈ ಹೇಳಿಕೆಗಳು ನಿಜವೋ ಅಲ್ಲವೋ ಎಂಬುದು ನ್ಯೂಯಾರ್ಕಿನಲ್ಲಿ ಪ್ರತಿಯೊಬ್ಬರಿಗೂ ಗೊತ್ತು."

ಜೆಂಗರ್‌ಗೆ ಸುಸ್ತಾಗುವಷ್ಟು ಹೊತ್ತು ಈ ಬಗೆಯ ಮಾತಿನ ಹೋರಾಟ ಮುಂದುವರಿಯಿತು. ಅವರು ಮಾತುಗಳನ್ನು ನಿಲ್ಲಿಸಿ, ತನಗೆ ಕೂಡಲು ಅವಕಾಶ ನೀಡಿದರೆ ಸಾಕು ಎಂದುಕೊಂಡ.

ಮುದ್ರಕರಿಗೆ ಶಿಕ್ಷೆಯಾಗಿದ್ದ ಹಳೇ ವಿಚಾರಣೆಗಳನ್ನು, ಕಾನೂನು ಪುಸ್ತಕಗಳಿಂದ ಉದಾಹರಿಸಿದ. ಅಟಾರ್ನಿ ಜನರಲ್ ಬ್ರಾಡ್ಲೆ, ಜೆಂಗರ್ನ ವ್ಯವಹಾರವೂ ಆದೇ ರೀತಿ ನಿರ್ಧರವಾಗಬೇಕು ಎಂದು ಸಾರಿದ.

ಗವರ್ನರ್ ವಿರುದ್ಧದ ದೂರುಗಳನ್ನು ಮುದ್ರಿಸಬಹುದು, ಜ್ಯೂರಿ ಗಳು "ಸಂಗತಿ" ಮತ್ತು ಕಾನೂನಿನಂಶಗಳೆರಡನ್ನೂ ನಿರ್ಧರಿಸಿ, ಜೆಂಗರ್ನನ್ನು ತಪ್ಪಿತಸ್ಥನಲ್ಲವೆಂದು ಪರಿಗಣಿಸಬಹುದು, ಎಂದು ಸಮರ್ಥಿ ಸಲು ಹ್ಯಾಮಿಲ್ಟನ್ ಇತರ ವ್ಯವಹಾರಗಳ ಉದಾಹರಣೆಯಿತ್ತ.

ಎರಡು ನಿಮಿಷಗಳಿಗೊಮ್ಮೆ ಬೇರೆ ಬೇರೆ ಪುಸ್ತಕಗಳನ್ನು ಒದಗಿಸುವ ಕಾರ್ಯದಲ್ಲಿ ಅಲೆಕ್ಸಾಂಡರ್ ತೆರಪಿಲ್ಲದೆ ಓಡಾಡುತ್ತಿದ್ದ. ಸ್ಮಿತ್ ಮತ್ತು ಚೇಂಬರ್ಸ್ ದಣಿದ ಪುಸ್ತಕ ಭಂಡಾರಿಗಳಂತೆ ಕಂಡುಬಂದರು. ಮೇಜು, ಕುರ್ಚಿಗಳು ಮತ್ತು ನೆಲದ ಮೇಲೆಲ್ಲ ಅಡಕಿದ್ದ ಪುಸ್ತಕಗಳಿಂದ ಸಂಬಂಧಿಸಿದ ಅಂಶಗಳನ್ನು ಹುಡುಕಿ ತೆಗೆವ ಕೆಲಸದಲ್ಲಿ ಅವರಿಗೆ ಬಿಡುವೇ ಇರಲಿಲ್ಲ.

ಕೊನೆಯಲ್ಲಿ ಹ್ಯಾಮಿಲ್ಟನ್ ಪರಿಣಾಮಕಾರಿಯಾಗಿ ಮಾತನಾಡತೊಡಗಿದ: "ಮಾನ್ಯ ಜ್ಯೂರಿಗಳೇ, ಕೋರ್ಟಿನ ಮುಂದಿರುವ ಪ್ರಶ್ನೆ ಚಿಕ್ಕದೂ ಅಲ್ಲ, ಖಾಸಗಿಯಾದುದೂ ಅಲ್ಲ. ಒಬ್ಬ ಬಡ ಮುದ್ರಕನದೂ ಅಲ್ಲ, ಈ ವಿಚಾರಣೆ ನಡೆಯುತ್ತಿರುವ ನ್ಯೂಯಾರ್ಕಿನದೂ ಅಲ್ಲ. ಇದು ಪ್ರತಿಯೊಬ್ಬ ಸ್ವತಂತ್ರ ಅಮೆರಿಕನ್ನನ ಮೇಲೂ ಪರಿಣಾಮ ಉಂಟುಮಾಡುವಂತಹುದು. ಇದೊಂದು ಶ್ರೇಷ್ಠ ನಿಮಿತ್ತ! ಇದು ಸ್ವಾತಂತ್ರ್ಯದ ನಿಮಿತ್ತ!"

ನಿಧಾನವಾಗಿ, ಕಷ್ಟದಿಂದ ತನ್ನ ಆಸನಕ್ಕೆ ಹಿಂತಿರುಗಲು ವೃದ್ಧ ನ್ಯಾಯವಾದಿಗೆ, ಅಲೆಕ್ಸಾಂಡರ್ ಮತ್ತು ಚೇಂಬರ್ಸ್ ನೆರವು ನೀಡುತ್ತಿದ್ದಾಗ, ಕೋರ್ಟಿನಲ್ಲೆಲ್ಲ ಮೌನ ನೆಲೆಸಿತ್ತು. ಮಹತ್ವಪೂರ್ಣವಾದ ಘಟನೆಯೊಂದನ್ನು ತಾವು ನೋಡುತ್ತಿದೇವೆಂಬುದನ್ನು ಜನಸಂದಣಿ ಅರ್ಥಮಾಡಿಕೊಂಡಂತಿತ್ತು.

ಫಿಲಿಡೆಲ್ಫಿಯದ ಆ ವೃದ್ಧ ನ್ಯಾಯವಾದಿ ಬಹು ಪರಿಣಾಮಕಾರಿಯಾಗಿ, ಬಹು ಜಾಣ್ಮೆಯಿಂದ ಹೋರಾಟ ನಡೆಸಿದ್ದ. (ತತ್ಪರಿಣಾಮವಾಗಿ ಈ ವಿಚಾರಣೆಯಲ್ಲಿ ಜನ್ಮತಾಳಿದ, "ಫಿಲಿಡೆಲ್ಫಿಯದ ನ್ಯಾಯವಾದಿಯಂತೆ ಸಮರ್ಥನಾದ" ಎಂಬ ಜನಪ್ರಿಯ ಪದಾವಳಿ ಅನಂತರವೂ ಬಹುಕಾಲ ಬಳಕೆಯಲ್ಲಿತ್ತು.)

ಕಟ್ಟಕಡೆಗೆ ಅಟಾರ್ನಿ ಜನರಲ್ ಬ್ರಾಡ್ಲೆ, ಜ್ಯೂರಿಗಳ ಬಳಿಗೆ ಹೋಗಿ, ವಿಶೇಷವಾದ ಹೇಳಿಕೆಯೊಂದನ್ನು ಸಲ್ಲಿಸಿದ. "ನಮ್ಮ ಸನ್ಮಾನ್ಯ ಗವರ್ನರ್ ಹಾಗೂ ಸರಕಾರದ ಇತರ ಮುಖ್ಯ ಅಧಿಕಾರಿಗಳ ವಿರುದ್ಧ ಇಂಥ ನಿಂದನೆಗಳನ್ನು ಪ್ರಕಟಿಸಿ ಸರಕಾರದ ಶಾಂತಿಯನ್ನು

ಕಲಕಲು ಜೆಂಗರಿಗೆ ಅವಕಾಶ ಕೊಡಲೇಕೂಡದು ಎಂಬುದು ನಮ್ಮ ಸನ್ಮಾನ್ಯ ಗವರ್ನರರ ಮತ್ತು ರಾಜಪ್ರಮುಖ ಮಂಡಳದ ಅಭಿಪ್ರಾಯ. ಆದ್ದರಿಂದ ಸನ್ಮಾನ್ಯ ಗವರ್ನರರು ತಾವಾಗಿಯೂ ಮತ್ತು ಮಂಡಳದ ಸಲಹೆಯಿಂದಲೂ ಈ ಕ್ರಮವನ್ನು ಆಜ್ಞಾಪಿಸಿದ್ದಾರೆ" ಎಂದು ಹೆಮ್ಮೆಯಿಂದ ಘೋಷಿಸಿದ.

ಈ ಮಾತನ್ನು ಕೇಳಿದಾಗ ಜೆಂಗರ್ ಚುರುಕಾದ. ತನ್ನ ಕೃತಿಗಳು ಪತ್ರಿಕಾ ಓದುಗರಿಗೆ ಗೊತ್ತಾಗಕೂಡದೆಂಬುದೇ ಗವರ್ನರ್ ಕಾಸ್ಬಿಯ ಉದ್ದೇಶ. ಸಾಧ್ಯವಿದ್ದರೆ ಪತ್ರಿಕೆಯನ್ನೇ ನಿಲ್ಲಿಸಿಬಿಡುತ್ತಿದ್ದ. ಕಟ್ಟಕಡೆಗೆ ವಿಚಾರಣಾಂಶವೇನೆಂಬುದು ಸ್ಪಷ್ಟವಾದಂತಾಯಿತು. ಸರಕಾರಿ ಅಧಿಕಾರಿಗಳು ಏನು ಮಾಡುತ್ತಿದಾರೆಂಬುದನ್ನು ತಿಳಿವ ಹಕ್ಕು ಪತ್ರಿಕೆಗಳಿಗೆ ಇದೆಯೆ? ಅಥವಾ ತಮ್ಮ ಮನಸ್ಸಿಗೆ ಬಂದಂತೆ ರಹಸ್ಯವಾಗಿ ವರ್ತಿಸುವ ಹಾಗೂ ದೂರಿಟ್ಟವರನ್ನೇ ಶಿಕ್ಷಿಸುವ ಅಧಿಕಾರ ಗವರ್ನರುಗಳಿಗಿದೆಯೆ?

ಕೊನೆಯಲ್ಲಿ ನ್ಯಾಯಮೂರ್ತಿ ಡಿಲಾನ್ಸೆ ಜ್ಯೂರಿಗಳನ್ನುದ್ದೇಶಿಸಿ ಸಂಗ್ರಹವಾಗಿ, ಕೋಪದಿಂದ ತನ್ನ ನಿರ್ದೇಶಗಳನ್ನಿತ್ತ: ಜೆಂಗರ್ ತಪ್ಪಿತಸ್ಥನೆನ್ನಿ. ಅದನ್ನು ಶೀಘ್ರವಾಗಿ ನಿರ್ಧರಿಸಿ, ಎಂದು ಕಟುವಾಗಿ ನೇರವಾಗಿ ನುಡಿದ.

ಮಹತ್ವಪೂರ್ಣವಾದ ಜವಾಬ್ದಾರಿಯನ್ನು ಹೊತ್ತ, ಸ್ವಾಭಿಮಾನಿಗಳಾದ ಆ ಹನ್ನೆರಡು ಮಂದಿ ಜ್ಯೂರರುಗಳು ತಮ್ಮ ವಿಚಾರ ವಿನಿಮಯದ ಕೊಠಡಿಗೆ ಹೆಜ್ಜೆ ಹಾಕಿದರು.

ಪಹರೆಯವರು ಜೆಂಗರ್‌ನನ್ನು ಹಿಂಬಾಗಿಲಿನಿಂದ ಕರೆದೊಯ್ದು ಮಹಡಿ ಮೆಟ್ಟಲಿಳಿಸಿ ಜೈಲಿಗೆ ಸೇರಿಸಿದರು. ಇತ್ಯರ್ಥಕ್ಕಾಗಿ ಅವನು ಇನ್ನು ಹೆಚ್ಚು ಕಾಲ ಕಾಯಬೇಕಾಗಿರಲಿಲ್ಲ.

---

# ಅಧ್ಯಾಯ ೩೨

## ತೀರ್ಪು

ಐದು ಗಂಟೆಗಳ ಕಾಲ ಕೋರ್ಟಿನಲ್ಲಿ ನಿಂತು ಸುಸ್ತಾದ ಜೆಂಗರ್ ತನ್ನ ಒಣ ಹುಲ್ಲಿನ ಹಾಸಿಗೆಯ ಮೇಲೆ ಉರುಳಿದ.

ಜ್ಯೂರಿಗಳೇನು ಮಾಡುವರೋ ಅವನರಿಯ. 'ಸಂಗತಿ' ಸಾರುವ ಆಪಾದನೆಯಂತೆ ಅವನು ತಪ್ಪಿತಸ್ಥನೆಂದು ಸಾರಿ, ಉಳಿದ ವಿಷಯವನ್ನು ನ್ಯಾಯಮೂರ್ತಿಗೆ ಬಿಡಬೇಕೆಂಬ ನಿರೂಪ ಬೇರೆ ಅವರಿಗಿದೆ. "ಸುಳ್ಳು, ದ್ವೇಷ, ದ್ರೋಹಗಳಿಂದ ಕೂಡಿದ ನಿಂದನೆ"ಗಳನ್ನು ಮುದ್ರಿಸಿ, ಪ್ರಕಟಿಸುವ ಅಪರಾಧ ಮಾಡಿಲ್ಲವೆಂದು ತೀರ್ಪಿತ್ತರೆ, ಅದು ನ್ಯಾಯಮೂರ್ತಿಯ ಆಜ್ಞೆಗಳ ಬಹಿರಂಗ ಉಲ್ಲಂಘನೆಯೆನಿಸಿ, ನ್ಯಾಯಮೂರ್ತಿ ಡಿಲಾನ್ಸೆ ಇಷ್ಟಪಟ್ಟರೆ, ಕೋರ್ಟ್ ನಿಂದನೆ ಆಪಾದನೆ ಮೇಲೆ ಜ್ಯೂರರುಗಳಿಗೆ ಜೈಲುವಾಸ ಖಚಿತ. ಗವರ್ನರನ ಇಷ್ಟ ಪ್ರಕಾರದ ಅವಧಿಯಲ್ಲಿ ಮಾತ್ರ ನ್ಯಾಯಮೂರ್ತಿ ಸ್ಥಾನವನ್ನು ಅನುಭವಿಸಬೇಕಾಗಿದ್ದ ಡಿಲಾನ್ಸೆ ಆ ರೀತಿ ಮಾಡಲೂಬಹುದು.

ಜೆಂಗರ್ ಒಣಹುಲ್ಲಿನ ಮೇಲೆ ಉರುಳಿ, ಹತ್ತು ನಿಮಿಷ ಕಳೆದಿರ ಬಹುದು. ಕೊಠಡಿಯ ಬಾಗಿಲು ತೆರೆದು ಜೈಲರ್ ಒಳ ಬಂದ.

ನಿದ್ರಾ ಮುದ್ರಿತ ಕಣ್ಣುಗಳಿಂದ ಜೆಂಗರ್ ಎದ್ದು ಕುಳಿತು "ಸ್ವಲ್ಪ ಉಪಹಾರ ಬೇಕೆನಿಸುತ್ತದೆ" ಎಂದ.

"ಮೇಲಕ್ಕೆ ಕರೆಬಂದ್ದಿದೆ. ಜ್ಯೂರಿಗಳು ವಾಪಸ್ ಬಂದಿದ್ದಾರೆ"

"ಇಷ್ಟು ಬೇಗ ?" ಜೆಂಗರ್ ತಡವರಿಸಿಕೊಂಡು ಎದ್ದು ನಿಂತ.

ಕುತೂಹಲ, ಕಳವಳಗಳಿಂದ ಕೂಡಿದ ಜನ ಮುಂಚೆಗಿಂತಲೂ ಹೆಚ್ಚಾಗಿ ಬಂದು ಕೋರ್ಟಿನಲ್ಲಿ ನೆರೆದಿದ್ದರು. ಕೆಳಗಡೆಯ ರಸ್ತೆಯಲ್ಲಿ ಕೆರಳಿದ ಭಾರಿ ಸಮೂಹ ಹೆಚ್ಚು ಹೆಚ್ಚಾಗಿ ಗದ್ದಲ ಮಾಡುತ್ತಿದ್ದುದು

ಕಿಟಕಿಯ ಮೂಲಕ ಕೇಳಿಸುತ್ತಿತ್ತು.

ಫೋರ್ಮನ್ ಥಾಮಸ್ ಹಂಟ್ ನ್ಯಾಯಮೂರ್ತಿಗೆದುರಾಗಿ ನಿಂತಿದ್ದ. ಡಿಲಾನ್ಸಿ ಅವನೆಡೆ ದುರುಗುಟ್ಟಿದ.

ತೆಳ್ಳನೆಯ ಗುಮಾಸ್ತೆ ಎದ್ದು ನಿಂತು ದಪ್ಪಗಂಟಲಿನಲ್ಲಿ ಕೇಳಿದ :

" ಮಾನ್ಯ ಜ್ಯೂರಿಗಳೇ, ತೀರ್ಮಾನಕ್ಕೆ ಬಂದಿದ್ದೀರಾ ?"

ಫೋರ್ಮನ್ ಅಷ್ಟೇ ಗಟ್ಟಿಯಾಗಿ ಉತ್ತರಿಸಿದ: "ಬಂದಿದ್ದೇವೆ! ನಿರ್ದೋಷಿ !"

ತೀರ್ಮಾನವನ್ನು ಅರಗಿಸಿಕೊಳ್ಳುವ ಮುನ್ನವೇ ಯಾರೋ ಅಳುತ್ತಿದ್ದುದು ಜೆಂಗರಿಗೆ ಕೇಳಿಸಿತು. ತನ್ನ ಪತ್ನಿ ಆಸನದಿಂದ ನೆಗೆದುದನ್ನು ಕಂಡ. ಆಕೆಯ ಮುಖದಲ್ಲಿ ಮುಗುಳ್ನಗೆ ಮೂಡಿದ್ದರೂ, ಕಣ್ಣೀರು ಕೆನ್ನೆಗಳ ಮೇಲೆ ಕೋಡಿ ಹರಿದಿತ್ತು. " ಜೈ " ಘೋಷಣೆ ಮಾಡುತ್ತಾ, ಗುಂಪಿಗೆ ಗುಂಪೇ ಮೇಲೆದ್ದು ಕೈಬೀಸುತ್ತಿದ್ದುದನ್ನು ಕಂಡ. ನ್ಯಾಯಮೂರ್ತಿ ಡಿಲಾನ್ಸಿ ಬಾಯಿಬಿಚ್ಚಿ ಏನೋ ಹೇಳಿದ. ಆದರೆ ಆ ಮಾತುಗಳು ಇನ್ನೊಂದು " ಜೈ "ಕಾರದಲ್ಲಿ ಮುಳುಗಿ ಹೋದವು.

ಜೆಂಗರ್ ಕಟಾಂಜನದಲ್ಲೇ ನಗುತ್ತ ಒಂದು ಸುತ್ತು ತಿರುಗಿದ. ವಿಪರೀತ ಉದ್ರೇಕಿತನಾಗಿದ್ದುದರಿಂದ ತಾನೇನು ಮಾಡುತ್ತಿದೇನೆಂಬ ಅರಿವೇ ಅವನಿಗಿರಲಿಲ್ಲ. ತನ್ನ ಬಳಿ ನಿಂತಿದ್ದ ಪಹರೆಯವನೊಬ್ಬನನ್ನು ಬಲವಾಗಿ ಬೆನ್ನು ತಟ್ಟಿದಾಗ ಆತ ತತ್ತರಿಸಿ ಕೆಳಗೆ ಬೀಳುವುದರಲ್ಲಿದ್ದ. ಎಲ್ಲರ ಜೊತೆ ಸೇರಿ ತಾನು ಕೂಗಬೇಕೆಂದು ಪ್ರಯತ್ನಿಸಿದಾಗ, ಉಸಿರೇ ಹೊರಡಲಿಲ್ಲ. ತಾನು ತರುಣನಾದಂತೆ ಭಾಸವಾಯಿತು. ಸಂತೋಷದಿಂದ ಮೈಯೆಲ್ಲ ಪುಳುಕಿತವಾಯಿತು. ಆ ದಿನ ಬೆಳಿಗ್ಗೆ ತಾನಿದ್ದ ಪರಿಸ್ಥಿತಿಯಿಂದ ಸಂಪೂರ್ಣವಾಗಿ ಬದಲಾಯಿಸಿ ಬೇರೆ ಮನುಷ್ಯನೇ ಆಗಿದ್ದ.

ಬೀಸುವ ಕೈಗಳ ಸಮುದ್ರವನ್ನು ತರುಣ ನ್ಯಾಯಮೂರ್ತಿ ಬಿಚ್ಚಿದ ಕಣ್ಣುಗಳಿಂದ ನೋಡಿದ. ಅವನು ಸಹಜವಾಗಿ ಬೆರಗಾಗಿದ್ದ. ಕೈಕೊಡತಿಯನ್ನೊನ್ಮೆ ಮೇಜಿನ ಮೇಲೆ ಬಡಿದು, " ಕೋರ್ಟಿನಲ್ಲಿ

ಶಿಸ್ತು! ಇನ್ನೇನಾದರೂ ಹರ್ಷಘೋಷಣೆಗಳು ಕೇಳಿ ಬಂದರೆ, ಗಲಭೆಗಾಗಿ ಕೋರ್ಟ್‌ನಿಂದನೆ ಆಪಾದನೆ ಮೇಲೆ, ನಾಯಕರುಗಳನ್ನು ಜೈಲಿಗೆ ಕಳಿಸಬೇಕಾಗುತ್ತದೆ" ಎಂದ.

ನ್ಯೂಯಾರ್ಕಿನ ಸುವಿಖ್ಯಾತ ನೌಕಾ ಕ್ಯಾಪ್ಟನ್‌ಗಳಲ್ಲೊಬ್ಬನೂ, ಮಾಜಿ ನ್ಯಾಯಮೂರ್ತಿ ಮಾರಿಸ್ಸನ ಅಳಿಯನೂ ಆದ ಕ್ಯಾಪ್ಟ ನೊರಿಸ್ ಧೈರ್ಯವಾಗಿ ಮುಂದಕ್ಕೆ ಹೆಜ್ಜೆ ಇಟ್ಟ. ಅವನು ಇಂಗ್ಲೆಂಡಿ ನಿಂದ ಇತ್ತೀಚೆಗೆ ಬಂದಿದ್ದ. ಇನ್ನೂ ಸಮುದ್ರದ ವಾಸನೆ ಅಳಿದಿರಲಿಲ್ಲ. ನ್ಯೂಯಾರ್ಕು ಎಂದೂ ಕಾಣದಂತಹ ಅತ್ಯಾಕರ್ಷಕ ಕಸೂತಿ ಹಾಕಿದ ಕೆನೆ ಬಣ್ಣದ ರೇಷ್ಮೆ ಸೂಟು ಮೈಮೇಲಿತ್ತು. ಪ್ರಬಲವಾದ ತನ್ನ ಎದೆಯು ನ್ನೊಮ್ಮೆ ತಟ್ಟಿ ಘರ್ಜಿಸಿದ: "ಲಂಡನ್ನಿನ ಸುಪ್ರೀಂ ಕೋರ್ಟಿನಲ್ಲಿ ಹರ್ಷೋದ್ಗಾರ ಪ್ರದರ್ಶನ ಸರ್ವೇಸಾಮಾನ್ಯ. ಸಪ್ತ ಬಿಷಪ್ಪುಗಳ ಬಿಡುಗಡೆಯಾದಾಗ ಹರ್ಷೋದ್ಗಾರ ಗಗನ ಭೇದಿಸುವಂತೆ ಕೇಳಿ ಬಂತು!"

ನ್ಯಾಯಮೂರ್ತಿಯನ್ನು ಜ್ಯೂರಿಗಳು ಉಲ್ಲಂಘಿಸಿದ ಸುವಿಖ್ಯಾತ ಸಪ್ತ ಬಿಷಪ್ಪುಗಳ ಮೇಲಿನ ನಿಂದನೆ ಆಪಾದನೆಯ ವ್ಯವಹಾರವನ್ನು ಎಲ್ಲರೂ ಸ್ಮರಿಸಿಕೊಂಡರು. ನೆರೆದಿದ್ದ ಗುಂಪು ಮತ್ತೆ ಹರ್ಷೋದ್ಗಾರ ಮಾಡಿತು.

ಮತ್ತೆ ಡಿಲಾನ್ಸೆ ಮಾತನಾಡಿದ. ಆದರೆ ಅವನು ಏನು ಹೇಳಿದ ನೆಂಬುದನ್ನು ಯಾರೂ ಅರಿಯರು. ಜನತೆಯ ಕಡೆಯಿಂದ ಘೋಷಿತವಾದ ಜೈಕಾರದಲ್ಲಿ ಅದು ಮುಳುಗಿಹೋಯಿತು.

ಬಂದಿಯನ್ನೂ, ಹ್ಯಾಮಿಲ್ಟನ್ನನನ್ನೂ ಅಭಿನಂದಿಸಲು ಜನರು ನುಗ್ಗಿ ಬರುತ್ತಿದ್ದುದನ್ನು ಡಿಲಾನ್ಸೆ ಒಂದು ನಿಮಿಷಕಾಲ ರೋಷಾವೇಶ ದಿಂದ ವೀಕ್ಷಿಸಿದ. ಅನಂತರ ಉರಿದೆದ್ದು ಕೋರ್ಟಿನಿಂದ ಹೊರಬಿದ್ದ.

ವಿಚಾರಣಾ ಕಾಲದಲ್ಲಿ ಒಂದು ಮಾತನ್ನೂ ಆಡದೆ ಮೌನ ದಿಂದಿದ್ದ ನ್ಯಾಯಮೂರ್ತಿ ಫಿಲಿಪ್ಸ್, ಯಜಮಾನನ ಹಿಂದೆ ಹೋಗುವ ನಾಯಿಯಂತೆ, ಹಿಂಬಾಲಿಸಿದ.

ನಡೆಯಲಾರದೆ ಭಂಗಪಡುತ್ತಿದ್ದ ಹ್ಯಾಮಿಲ್ಟನ್ನನನ್ನು, ನಗುತ್ತ

ಘೋಷಣೆ ಗೈಯುತ್ತಿದ್ದ ಹಲವು ಮಂದಿ ತರುಣರು, ಕುರ್ಚಿ ಸಮೇತ ಎತ್ತಿ ಒಯ್ದರು. ಮೆರವಣಿಗೆಯೊಂದು ಏರ್ಪಟ್ಟು ಅವನನ್ನು ಹೋಟೆಲುವರೆಗೂ ವಿಜೃಂಭಣೆಯಿಂದ ಕರೆದೊಯ್ಯಲಾಯಿತು.

ಪರೀಘನಾದ, ತರುಣ ಬಿಲ್ಲಿ ಕಾಸ್ಬಿ ಜೈಲರನ್ನುದ್ದೇಶಿಸಿ ನುಡಿದ, "ಬಂದಿಯನ್ನು ಏನು ಮಾಡಬೇಕೋ ನಾನರಿಯೆ! ನ್ಯಾಯ ಮೂರ್ತಿಯ ಆಜ್ಞೆಯಿಲ್ಲದೆ ಅವನ ಬಿಡುಗಡೆ ಮಾಡುವಂತಿಲ್ಲ. ನ್ಯಾಯಮೂರ್ತಿ ಹೋಗಿಬಿಟ್ಟಿರಬೇಕು! ವಾಪಸ್ ಜೈಲಿಗೇ ಕರೆದೊಯ್ಯುವುದೇ ಸರಿ ಎಂದು ತೋರುತ್ತದೆ!"

ತತ್‌ಕ್ಷಣ ಜೈಲರ್ ಮತ್ತು ಪಹರೆಯವರು ಅವನನ್ನು ತ್ವರೆಯಿಂದ ಎಳೆದುಕೊಂಡು ಹೋದರು. ವಿಚಿತ್ರ ವಿಚಾರಣೆಗೆ ವಿಚಿತ್ರ ಮುಕ್ತಾಯ!

ಮರು ಬೆಳಿಗ್ಗೆ ಜೆಂಗರನ ಪಹರೆಯವರು ಮತ್ತವನನ್ನು ಕೋರ್ಟಿಗೆ ಕರೆತಂದರು. ಕೋರ್ಟು ಬಹುಪಾಲು ಖಾಲಿಯಿತ್ತು. ನೀಗ್ರೋ ಗುಲಾಮನೊಬ್ಬ ಬೆಂಚುಗಳ ನಡುವೆ ತಿರುಗುತ್ತ ಅಲ್ಲಲ್ಲಿ ಬಿದ್ದಿದ್ದ, ಹರಿದ, ಕೊಳೆಯಾದ 'ಜರ್ನಲ್' ಪ್ರತಿಗಳನ್ನು ಆರಿಸುತ್ತಿದ್ದ. ಮತ್ತೊಬ್ಬ ಗುಡಿಸುತ್ತಿದ್ದ. ಆದರೆ ನ್ಯಾಯಮೂರ್ತಿಗಳು ಬಂದೊಡನೆಯೇ ಅವರಿಬ್ಬರೂ ಮರೆಯಾದರು.

ತನ್ನ ಪತ್ನಿ, ಆರು ಮಕ್ಕಳು, ವಿಚಾರಣಾ ಕಾಲದಲ್ಲಿ ಗಳಿಸಿದ ಪ್ರತಿಷ್ಠೆಯಿಂದ ಸಂತೋಷಭರಿತನಾದ ಚೇಂಬರ್ಸ್, ಮತ್ತಿತರ ಹಲವು ಮಂದಿ ಆಪ್ತರು ಹಾಜರಿದ್ದರು. ಜೆಂಗರನ ಕೈ ಕುಲುಕಿದ ರಿಪ್‌ವಾರ್ಡಾಂ ವಿಶೇಷ ಸಂತೋಷದಿಂದಿದ್ದ.

ಚೇಂಬರ್ಸ್ ಎದ್ದು ನಿಂತ, "ಮಹಾಸ್ವಾಮಿ, ತಮಗೆ ಸಮ್ಮತವೆನಿಸಿದರೆ, ಜ್ಯೂರಿಗಳು ನಿನ್ನೆ ದಿನ ಒಪ್ಪಿಸಿದ ತೀರ್ಪಿನ ರೀತ್ಯ, ನನ್ನ ಕಕ್ಷಿಯನ್ನು ಬಂಧನದಿಂದ ವಿಮೋಚನೆ ಮಾಡಬೇಕೆಂದು ವಿನಯದಿಂದ ಪ್ರಾರ್ಥಿಸುತ್ತೇನೆ."

ದಿಗ್ಭ್ರಾಂತನಾಗಿದ್ದ ನ್ಯಾಯಮೂರ್ತಿ ಡಿಲಾನ್ಸೆ ಮುಖ ವಿಕಾರ ಮಾಡಿಕೊಂಡು ಸಿಡಿಗುಟ್ಟುತ್ತ ಕುಳಿತಿದ್ದ. ಹ್ಯಾಮಿಲ್ಟನ್ನನ ಮಾತುಗಳನ್ನು ಅರ್ಥಮಾಡಿಕೊಳ್ಳುವಷ್ಟು ಜಾಣ್ಮೆ ಅವನಲ್ಲಿತ್ತು. ವೃದ್ಧನ

ವಾದಸರಣಿಯಲ್ಲಿ ಸಂದೇಹವೇನಾದರೂ ಉಳಿದಿದ್ದರೆ, ಜನತೆಯ ವಿಸ್ಮಯಕಾರಕ ವರ್ತನೆ ಅದಕ್ಕೆಲ್ಲ ಉತ್ತರ ನೀಡಿತ್ತು.

ಬಾಯಿ ಬಿಚ್ಚಿದಾಗ ಮಾತೇ ಹೊರಡಲಿಲ್ಲ. ಗಂಟಲು ಸರಿಪಡಿಸಿಕೊಂಡು, ಮತ್ತೆ ಪ್ರಯತ್ನಪಡಬೇಕಾಯಿತು. "ಏನಾದರೂ ಆಕ್ಷೇಪಣೆಗಳಿವೆಯೆ?"

ಷರೀಫ್ ಎದ್ದು ನಿಂತ. ಅವನೂ ದಿಕ್ಕುತೋಚದಾಗಿದ್ದ. ಅವನ ಕೈಯಲ್ಲಿ ಬಿಲ್ಲುಗಳ ಕಂತೆಯೇ ಇತ್ತು. "ಈ ಬಿಲ್ಲುಗಳಿಗೆ ಹಣ ಕೊಟ್ಟಿಲ್ಲವೆಂದು ಜೈಲರ್ ತಿಳಿಸುತ್ತಾನೆ. ಬಂದಿಗೆ ಒದಗಿಸಿದ ಆಹಾರ, ಸೌದೆಗಳಿಗೆ ಸಂಬಂಧಿಸಿದವಿವು."

ಲ್ಯೂಯಿ ಮಾರಿಸ್, ಜ್ಯೂನಿಯರ್, ತಟಕ್ಕನೆ ಉಸುರಿದ "ಅರ್ಧ ಹಣ ನಾನು ಕೊಡುತ್ತೇನೆ. ಉಳಿದರ್ಧ ನನ್ನ ಸ್ನೇಹಿತರುಗಳು ಕೊಡುವುದಾದರೆ" ಎಂದು ತನ್ನ ಹ್ಯಾಟನ್ನು ಮುಂದೆ ಹಿಡಿದು ಹೊರಟ. ಆದರೆ ಅವನು ವೃದ್ಧ ನೌಕಾ ನಿರ್ಮಾಪಕ ರಿಪರ್ವಾ ಡಾಂಸಿಂದಾಚೆಗೆ ಹೋಗಬೇಕಾಗಲಿಲ್ಲ. ಆ ಸಣ್ಣ ಮೊತ್ತ ಜೈಲರ ಕೈಸೇರಿತು.

ಒಂದು ಕೈನಲ್ಲಿ ತನ್ನ ಒಂದು ವರ್ಷದ ಫ್ರೆಡ್ಡಿಯನ್ನು ಎತ್ತಿಕೊಂಡು, ಇನ್ನೊಂದು ಕೈಯಲ್ಲಿ ಪತ್ನಿಯ ಕೈಹಿಡಿದು, ಮುದ್ರಕ ಸುಸ್ತಿನಿಂದ, ನಿಧಾನವಾಗಿ ಹೆಜ್ಜೆಹಾಕಿದ. ೯ ತಿಂಗಳನಂತರ ಮೊದಲ ಬಾರಿಗೆ ಸೂರ್ಯನ ಬಿಸಿಲು ಅವನ ಮೇಲೆ ಬಿತ್ತು.

ಅದೇ ಸಂಜೆ ೪೦ ಕ್ಕೂ ಹೆಚ್ಚು ಮಂದಿ ಪಾಪ್ಯುಲರ್ ಪಾರ್ಟಿಯ ನಾಯಕರುಗಳು ಬ್ಲಾಕ್‌ಹಾರ್ಸ್ ಹೋಟೆಲಿನಲ್ಲಿ ಹ್ಯಾಮಿಲ್ಟನನ್ನು ಸತ್ಕರಿಸಿದರು. ಅವರ ಧ್ಯೇಯ ಪದಾವಳಿ ದಪ್ಪಕ್ಷರಗಳಿಂದ ಚಿತ್ರಿಸಲ್ಪಟ್ಟು ಗೋಡೆಯ ಮೇಲೆ ಹೆಮ್ಮೆಯಿಂದ ತೂಗುತ್ತಿತ್ತು: "ಸ್ವಾತಂತ್ರ್ಯ ಮತ್ತು ನ್ಯಾಯ!"

ನಗರಕ್ಕೂ, ಮಾನವ ಜನಾಂಗಕ್ಕೂ ಹ್ಯಾಮಿಲ್ಟನ್ ವಿದ್ವತ್ಪೂರ್ಣವಾಗಿ ಉತ್ಸಾಹೋಜ್ಜನಕವಾಗಿ ಸಲ್ಲಿಸಿದ ಸೇವೆಗಾಗಿ, ಅವರನ್ನು ಅಭಿನಂದಿಸಿ ಅನೇಕ ಮಂದಿ ಭಾಷಣ ಮಾಡಿದರು.

ಸತಿ ಅಲೆಕ್ಸಾಂಡರಳ ಎರಡು ಹಾಯಿಪಟಗಳ ದೋಣಿಯಲ್ಲಿ

ಆತ ಪ್ರಯಾಣ ಬೆಳೆಸಿದಾಗ, 'ಜರ್ನಲ್' ಈ ರೀತಿ ವರದಿ ಮಾಡಿತು:

"ಆತ ಮರುದಿನ ಪ್ರಯಾಣ ಕೈಗೊಂಡಾಗ ಸ್ವಾತಂತ್ರ್ಯ ಧ್ಯೇಯದ ಗೌರವ ಸಂರಕ್ಷಕನಿಗೆ ಸಾರ್ವಜನಿಕ ಮನ್ನಣೆಯ ಕುರುಹಾಗಿ ಬಂದರಿನಲ್ಲಿ ನಿಂತಿದ್ದ ಅನೇಕ ಹಡಗುಗಳು ಕುಶಾಲ ತೋಪುಗಳನ್ನು ಹಾರಿಸಿ ಅಭಿನಂದಿಸಿದವು."

ಈ ಕೆಟ್ಟ ಸುದ್ದಿಯನ್ನು ಗವರ್ನರಿಗೆ ತಾನೇ ಖುದ್ದು ಮುಟ್ಟಿಸಬೇಕೆಂದು ಯೋಚಿಸಿದ ಡಿಲಾನ್ಸೆ ಸಿಡುಕಿನಿಂದ ನೇರವಾಗಿ ಬ್ರಾಡ್ವೆಯ ಕೋಟೆಗೆ ಹೋದ. ಹಿಂದೆಂದೂ ಅಷ್ಟು ನಿಧಾನವಾಗಿ ಅವನು ನಡೆದಿರಲಿಲ್ಲ. ಕಾಸ್ಬಿಯ ಕಛೇರಿಯಲ್ಲಿ ನಿಂತು ಅಗಲವಿಲ್ಲದ ತನ್ನ ಎದೆಯನ್ನು ಸಾಧ್ಯವಿದ್ದಷ್ಟು ಅರಳಿಸಿಕೊಂಡು, ನೇರವಾಗಿ ಸುದ್ದಿಯನ್ನು ತಿಳಿಸಿದ.

ಕಾಸ್ಬಿ ಸಿಡಿದೆದ್ದು, ಶಪಿಸುವನೆಂದೂ, ಕೂಗಾಡುವನೆಂದೂ ನಿರೀಕ್ಷಿಸುತ್ತ ನಿಂತ. ಬಹು ಹೊತ್ತು ಆ ದಬ್ಬಾಳಿಕೆಯ ಪ್ರಭು ಕುರ್ಚಿಯಲ್ಲಿ ಕುಸಿದು ಮೌನವಾಗಿ ಕುಳಿತ. ಇನ್ನು ತನ್ನ ಸರಕಾರಿ ಸುಕಾರ್ಯ ಕುಕಾರ್ಯಗಳೆರಡನ್ನೂ ವರದಿಮಾಡುವ ಸ್ವಾತಂತ್ರ್ಯ ಪತ್ರಿಕೆಗಳಿಗೆ ಲಭ್ಯವಾಗುವುದು. ಕಟ್ಟಕಡೆಗೆ ತಲೆಯಲ್ಲಾಡಿಸಿದ, ನಿರಾಶಾವಾದ ಕಣ್ಣುಗಳಿಂದ ದಿಟ್ಟಿಸಿದ. ಮೌನವಾಗಿ ಮೇಜಿನ ಮೇಲಿದ್ದ ವ್ಹಿಸ್ಕಿ ಸೀಸೆಗಾಗಿ ಕೈಯಾಡಿಸಿದ.

ಪ್ರತಿಷ್ಠೆಯಿಲ್ಲದೆ ಮನುಷ್ಯ ಬಾಳುವಂತಿಲ್ಲ; ತನ್ನ ಪ್ರತಿಷ್ಠೆಯ ಕಳಶ ಮುರಿದುಬಿದ್ದಿತ್ತು. ವಿಚಾರಣೆ ನಡೆದ ಕೆಲವು ತಿಂಗಳುಗಳ ನಂತರ ಕೆಮ್ಮುತ್ತ ಹಾಸಿಗೆ ಹಿಡಿದ. ಛಳಿಗಾಲ, ಜ್ವರದ ಉಡುಗೊರೆಯನ್ನು ನೀಡಿತು. ವಸಂತದ ಪ್ರಥಮ ದಿನಗಳ ಬಿಸಿಲಿನಲ್ಲಿ ಹಿಮ ಕರಗುತ್ತಿದ್ದಾಗ, ಎಲ್ಲಿ ತನ್ನ ಅಧಿಕಾರದ ಚಾಟಿಯನ್ನು ಸ್ವೇಚ್ಛೆಯಿಂದ ಬೀಸುತ್ತಿದ್ದನೋ ಅದೇ ಕೋಟೆಯ ಚರ್ಚಿನ ಅಂಗಣದಲ್ಲಿ ಗವರ್ನರ್ ಕಾಸ್ಬಿಯ ಸಮಾಧಿ ಸಂಸ್ಕಾರವಾಯಿತು.

ಅಧಿಕಾರಿಗಳ ಇಷ್ಟಾನಿಷ್ಟಗಳ ರೀತ್ಯ ರಹಸ್ಯವಾಗಿ ಸರಕಾರ

ನಡೆಯಬೇಕು, ಪ್ರಜೆಗಳು ತಮಗೇನಾದರೂ ಅದನ್ನು ಮೌನದಿಂದ ಸ್ವೀಕರಿಸಬೇಕು–ಎಂಬ ಅಪಾಯಕಾರಿ ಭಾವನೆಯೂ ಅವನೊಂದಿಗೇ ಸತ್ತುಹೋಯಿತು. ಇಂಥ ಅಪಾಯಕಾರಿಯಾದ, ನೈ ನಡುಗಿಸುವ ಭಾವನೆ ಅಮೆರಿಕದ ನೆಲದಲ್ಲಿ ಕುಡಿಯೊಡೆಯಲು ಮತ್ತೆಂದೆಂದೂ ಆಸ್ಪದ ಕೊಡಲೇಕೂಡದು.

ಅನಂತರ ಅವನ ಮಿತ್ರ ನ್ಯಾಯಮೂರ್ತಿ ಹ್ಯಾರಿಸನ್ನನ ಸರದಿ. ನ್ಯೂಯಾರ್ಕಿನಲ್ಲಿ ಪ್ರಬಲ ರಿಕಾರ್ಡರೆಂದು ಮೆರೆದ ಅವನು, ಲಂಡನ್ನಿನ ದರಿದ್ರರ ಗೃಹವೊಂದರಲ್ಲಿ, ಹೊಟ್ಟೆಗಿಲ್ಲದೆ ಸತ್ತ. ಚಿನ್ನದ ಹಿಡಿಯ ಬೆತ್ತವನ್ನೂ, ಬೆಳ್ಳಿ ಗುಂಡಿಗಳಿದ್ದ ಸುಂದರ ಕೋಟನ್ನೂ ಅವನು ಮಾರಿಕೊಂಡಿರಬೇಕು. ಅವನ ಬಗೆಗೆ ಗೊತ್ತಿರುವ ಕೊನೆಯ ಸುದ್ದಿ ಇಷ್ಟೇ. ಅವನ ಅನೇಕ ಪಾತಕಗಳು ಎಂದೂ ಗೊತ್ತಾಗುವುದೇ ಇಲ್ಲ. ಅತ್ಯಂತ ಪ್ರಭಾವಶಾಲಿಯಾಗಿದ್ದ ಅವನು, ತನ್ನ ಪಾತಕಗಳ ವರದಿಗಳಲ್ಲಿ ತನ್ನ ಹೆಸರು ಸೇರದಂತೆ ತಪ್ಪಿಸಿದ್ದ. ಸರಕಾರದ ಸಂರಕ್ಷಣೆ ಪಡೆದು, ಪಾತಕಗಳನ್ನು ನಡೆಸುವ ಸರಕಾರದ ಗುಲಾಮ ಅಧಿಕಾರಿಗಳ ಬಗೆಗೆ ಜನತೆಯಲ್ಲಿ ಸತ್ಯಪ್ರಚಾರ ಮಾಡುವುದು, ಪತ್ರಿಕಾ ಸ್ವಾತಂತ್ರ್ಯದ ಪ್ರಧಾನ ಹೊಣೆಗಾರಿಕೆಗಳಲ್ಲೊಂದು.

ಜೆಂಗರ್ ವಿಚಾರಣೆಯಿಂದ ನ್ಯಾಯಮೂರ್ತಿ ಡಿಲಾನ್ಸೆಯ ಮೇಲಾದ ಪರಿಣಾಮ ತೀವ್ರವಾದುದು. ಇನ್ನೂ ಅಧ್ಯಯನ ಮುಂದುವರಿಸುವಷ್ಟು ತರುಣನವನು. ಎರಡು ವರ್ಷಗಳ ಕಾಲ ಹೆಚ್ಚು ಕಮ್ಮಿ ಅಜ್ಞಾತವಾಸದಲ್ಲಿದ್ದ. ಶಾಸನ ಸಭೆಯ ಚುನಾವಣೆಗಳು ಬಂದಾಗ, ತಟಕ್ಕನೆ ಹೊರಬಂದು ಚುನಾಯಿತನಾದ.

ಜೆಂಗರ್ ವಿಚಾರಣೆಯ ಪರಿಣಾಮವಾಗಿ ಸಂಪೂರ್ಣವಾಗಿ ಬದಲಾಯಿಸಿಹೋಗಿದ್ದ ಡಿಲಾನ್ಸೆ ಪ್ರಜಾ ಹಕ್ಕುಗಳ ಪ್ರೌಢ ಪ್ರತಿಪಾದಕನಾದ. ಅದಕ್ಕಾಗಿ ತನ್ನ ಅಗಾಧ ಶಕ್ತಿಯನ್ನೂ, ಜಾಣ್ಮೆಯನ್ನೂ ವಿನಿಯೋಗಿಸಿ ಹೋರಾಡಿದ.

ಮಾಜಿ ನ್ಯಾಯಮೂರ್ತಿ ಮಾರಿಸ್ ಲಂಡನ್ನಿನಲ್ಲಿಯೇ ಇದ್ದ. ಕಡೆಗೊಂದು ದಿನ ದೊರೆಯ ಅಧಿಕಾರಿಗಳು ಸುಪ್ರೀಂ ಕೋರ್ಟಿನ

ನ್ಯಾಯಮೂರ್ತಿ ಮಾರಿಸ್ಸನ ನಿವೃತ್ತಿಗೆ ಕೊಟ್ಟಿರುವ ಕಾರಣಗಳು ಸಾಲದೆಂದು, ಗವರ್ನರ್ ಕಾಸ್ಬಿಗೆ ಬರೆದರು : ಕಾಸ್ಬಿಯ ಕ್ರಮ ತಪ್ಪೆಂದು ತೋರಿಸುವ ಸಲುವಾಗಿ ಅದೇ ತಾನೇ ನ್ಯೂಯಾರ್ಕಿನಿಂದ ಪ್ರತ್ಯೇಕಿತವಾದ ನ್ಯೂಜೆರ್ಸಿಯ ಗವರ್ನರಾಗಿ ಮಾರಿಸ್ಸನನ್ನು ನೇಮಿಸಿದರು.

ತನ್ನ ದೊಡ್ಡ ಚಚೌಕವಾದ ಕೈಗಳನ್ನು ಕುಲುಕಿ, ಅಭಿನಂದನೆಗಳನ್ನು ಸಲ್ಲಿಸಲು ಸಂತತವಾಗಿ ಬರುತ್ತಿದ್ದ ನಾಗರಿಕರನ್ನು ಸ್ವಾಗತಿಸುತ್ತ, ತನ್ನ ಮನೆ ಬಾಗಿಲಿನಲ್ಲಿ, ಬಿಸಿಲಿನಲ್ಲೇ ಕುಳಿತು, ಜೆಂಗರ್ ಎರಡು ವಾರಗಳನ್ನು ಕಳೆದ.

ಜೈಲು ವಾಸದ ದುಷ್ಪರಿಣಾಮಗಳಿಂದ ಚೇತನಗೊಂಡೊಡನೆಯೇ, ಒಂದೂವರೆ ವರ್ಷಗಳ ಕೆಳಗೆ ತಾನೆಲ್ಲಿ ಬಿಟ್ಟಿದ್ದನೋ ಅಲ್ಲಿಂದ ಮುಂದಕ್ಕೆ ನಗರ ಘೋಷಣೆಯ ಮುದ್ರಣಕಾರ್ಯವನ್ನು ಆರಂಭಿಸಿದ. ಕೆಲವೇ ವಾರಗಳಲ್ಲಿ ಅದನ್ನೂ ಮುಗಿಸಿ, ತನ್ನ ವಿಚಾರಣೆ ನಡೆದ ಸ್ಥಳದಲ್ಲೇ ಇದ್ದ ನಗರದ ಆಲ್ಡರ್ ಮನ್‌ಗಳಿಗೆ ಅದರ ಆರು ಪ್ರತಿಗಳನ್ನು ಸಲ್ಲಿಸಿ, ೭ ಪೌಂಡುಗಳನ್ನು ಪಡೆದ. ಅವನ ಮುದ್ರಣಗಳಲ್ಲೆಲ್ಲ ಅತ್ಯಂತ ಸುಂದರವಾದುದು ಈ ಘೋಷಣೆ.

ತನ್ನ 'ಜರ್ನಲ್' ಪತ್ರಿಕೆಯಲ್ಲಿ ಬೇಗನೆ, ತನ್ನ ವ್ಯವಹಾರಕ್ಕೆ ಸಂಬಂಧಿಸಿದ ಎಲ್ಲಾ ದಾಖಲೆಗಳನ್ನೂ ಪ್ರಕಟಿಸಿದ. ತಮ್ಮ ಅಪೂರ್ವ ವಿಜಯದ ಪೂರ್ಣಲಾಭ ಪಡೆಯಲು, ಒಂದಕ್ಷರವೂ ಲೋಪವಾಗದಂತೆ ವಿಚಾರಣೆಯ ಪೂರ್ಣ ವಿವರವನ್ನು ಒದಗಿಸಲು ಅಲೆಕ್ಸಾಂಡರ್ ಅತ್ಯಂತ ಆಸಕ್ತಿಯಿಂದ ನೆರವಾದ. "ಜಾನ್ ಪೀಟರ್ ಜೆಂಗರನ ವ್ಯವಹಾರ ಮತ್ತು ವಿಚಾರಣೆ" ಎಂಬ ಪುಸ್ತಕ, ಅವನ ಜೀವಮಾನ ಕಾಲದಲ್ಲೆಲ್ಲ ಅತ್ಯಂತ ಖ್ಯಾತ ಪುಸ್ತಕವೆನಿಸಿತ್ತು. ಅನೇಕ ಮುದ್ರಣಗಳನ್ನು ಕೈಗೊಳ್ಳುವಷ್ಟು ಪ್ರತಿಗಳನ್ನು ಜೆಂಗರ್ ಮಾರಿದ. ಬಾಸ್ಟನ್ನಿನಲ್ಲೂ ಇನ್ನೆರಡು ಮುದ್ರಣಗಳಾದವು.

ಇಂಗ್ಲೆಂಡಿನ ಪ್ರಜಾ ಸ್ವಾತಂತ್ರ್ಯದ ಮೇಲೂ ಅವನ ವಿಚಾರಣೆ ಪ್ರಭಾವ ಬೀರಿತು. ಲಂಡನ್ನಿನಲ್ಲಿ ಅವನ ಪುಸ್ತಕ ಬೇಗ ಬೇಗನೆ

ಐದು ಮುದ್ರಣ ಕಂಡಿತು.

ಎಂದಿನಂತೆ ಪ್ರತಿ ಸೋಮವಾರ "ಜರ್ನಲ್" ಅನ್ನು ಹೊರ ತರುತ್ತಿದ್ದರೂ, ಸ್ವಲ್ಪ ಎಚ್ಚರಿಕೆಯನ್ನು ಕಲಿತಿದ್ದ. ಹಳೆಯ ದೊಣ್ಣೆ ಪೆಟ್ಟಿನ ಮಾತುಗಳೂ, ಕಿಡಿಯುಗುಳುವ ವಾಕ್ಯಗಳೂ ಮರೆಯಾಗಿದ್ದವು. ಆದರೆ ಸತ್ಯ ಪ್ರಕಟಣೆಯಲ್ಲಿ ಪತ್ರಿಕೆ ಹಿಂದಿನ ಧೈರ್ಯವನ್ನೇ ದೃಢಪಡಿಸುತ್ತಿತ್ತು. ಕಾಸ್ಬಿಯ ಕೃತ್ಯಗಳ ಪುನರಾವೃತ್ತಿಗೆ ಕೈಹಾಕಲು ಮತ್ಯಾವ ಗವರ್ನರಿಗೂ ಸಾಧ್ಯವಾಗಲಿಲ್ಲ.

ಬ್ರಾಡ್‌ಫರ್ಡ್ ಕೆಲಸ ಮಾಡಲಾರದಷ್ಟು ಮುದುಕನಾದಾಗ, ನ್ಯೂಯಾರ್ಕ್ ವಸಾಹತಿನ ಸಾರ್ವಜನಿಕ ಮುದ್ರಣಕಾರ್ಯವನ್ನೆಲ್ಲ, ಬಹುಮಾನದ ಕೊಡುಗೆಯಾಗಿ ಶಾಸನ ಸಭೆ ಜೆಂಗರಿಗೊಪ್ಪಿಸಿತು. ಇಷ್ಟಾದರೂ ತಾನು ಬದುಕಿದ್ದ ಅನಂತರದ ಹನ್ನೊಂದು ವರ್ಷಗಳ ಕಾಲವನ್ನು ಜೆಂಗರ್ ದರಿದ್ರನಾಗಿಯೇ ಕಳೆದ. ಅವನಿಗಾದ ಮಕ್ಕಳು ಒಟ್ಟು ಏಳು. ಕೊನೆಯ ವರ್ಷಗಳಲ್ಲಿ ಸಾಕಷ್ಟು ಗದ್ದಲ ಮಾಡಲು ಆರು ಮಂದಿ ಬದುಕಿದ್ದರು.

ಜೆಂಗರನ ಮರಣಾನಂತರವೂ 'ಜರ್ನಲ್' ಪ್ರಕಟವಾಗುತ್ತಿತ್ತು. ಎರಡು ವರ್ಷಗಳ ಕಾಲ ಪತ್ರಿಕೆಯ ಕೊನೆಯಲ್ಲಿ "ವಿಧವೆ ಕ್ಯಾಥರೀನ್ ಜೆಂಗರ್ ಮುದ್ರಿಸಿದುದು" ಎಂಬ ವಾಕ್ಯ ಅಚ್ಚಾಗುತ್ತಿತ್ತು. ಸ್ವತಂತ್ರ ಪತ್ರಿಕೆ, ಜನತೆಯ ಜೀವ, ಸ್ವಾತಂತ್ರ್ಯಗಳನ್ನು ಸಂರಕ್ಷಿಸುವ ಪ್ರಬಲ ಆಯುಧವಾಗುವಂತೆ, ಆಕೆ ಕಷ್ಟಪಟ್ಟು ದುಡಿದಳು.

ತನ್ನ ಗಂಡನ ವಿಚಾರಣೆಯಿಂದ ಮೊಟ್ಟ ಮೊದಲಬಾರಿಗೆ ಅಮೆರಿಕದಲ್ಲಿ ವಾಕ್‌ಸ್ವಾತಂತ್ರ್ಯ, ಪತ್ರಿಕಾ ಸ್ವಾತಂತ್ರ್ಯಗಳ ಪ್ರತಿಷ್ಠಾಪನೆಯಾಯಿತೆಂದು, ಅನಂತರದ ಘಟನೆಗಳು ತೋರಿಸಿದವು. ತಮ್ಮ ವಾದ ಸಮರ್ಥನೆಗಾಗಿ, ಹ್ಯಾಮಿಲ್ಟನ್ ಮತ್ತು ಅಟಾರ್ನಿ ಜನರಲ್ ಬ್ರಾಡ್ಲೀ ಹಿಂದಿನ ವಿಚಾರಣೆಗಳನ್ನು ಉದಹರಿಸಿದಂತೆ, ಅಂದಿನಿಂದ, ಇತರ ನ್ಯಾಯವಾದಿಗಳೂ ಅಂತಹ ವಿಚಾರಣೆಗಳಲ್ಲಿ ಯಾವುದೇ ಅಧಿಕಾರಿಯ ಅಧಿಕಾರಿ ಕೃತ್ಯಗಳ ಬಗೆಗೆ ಸತ್ಯವನ್ನು ಪ್ರಕಟಿಸುವ ಹಕ್ಕು ಪತ್ರಿಕೆಗಳಿಗೆ ಇದೆಯೆಂದು ಸಮರ್ಥಿಸಲು ಜೆಂಗರ್

ವಿಚಾರಣೆಯನ್ನು ಉದಾಹರಿಸುತ್ತಿದ್ದರು.

ಲ್ಯೂಯಿ ಮಾರಿಸ್, ಜ್ಯೂನಿಯರನ ಒಬ್ಬ ಮಗನಿಗೆ ಗವರ್ನರ್ ಮಾರಿಸ್ ಎಂಬ ಹೆಸರಿಡಲಾಯಿತು. ಅವನು ಪ್ರಮುಖ ಆಡಳಿತಗಾರನಾದ. ಅವನು ಪ್ರತಿಭಾವಂತ ಬರೆಹಗಾರನೂ ಆಗಿದ್ದುದರಿಂದ, ಅಮೆರಿಕದ ಸಂಯುಕ್ತ ಸಂಸ್ಥಾನಗಳ ಸಂವಿಧಾನದ ಪೂರ್ಣ ಪಾಠವನ್ನು ಬರೆವ ಕಾರ್ಯಕ್ಕೆ ಅವನನ್ನು ಆಯ್ಕೆ ಮಾಡಲಾಯಿತು. "ಅಮೆರಿಕದ ವಿಮೋಚನೆಯ ಕುಡಿಯೊಡೆದದ್ದು ಜೆಂಗರ್ ವಿಚಾರಣೆಯಲ್ಲಿ" ಎಂದು ಹೇಳಿದವನೂ ಅವನೇ.

## ಗ್ರಂಥಕರ್ತನ ವಿವರಣೆ

ಸತ್ಯವನ್ನು ನುಡಿವ, ಮುದ್ರಿಸುವ ಹಕ್ಕೇ ಪ್ರಥಮ ಸ್ವಾತಂತ್ರ್ಯ. ಅಮೇರಿಕಾ, ಇಂಗ್ಲೆಂಡುಗಳೆರಡಕ್ಕೂ ಪತ್ರಿಕಾ ಸ್ವಾತಂತ್ರ್ಯವನ್ನು ಗಳಿಸಿಕೊಟ್ಟ ೧೭೩೫ರ ಪೀಟರ್ ಜೆಂಗರ್ ವಿಚಾರಣೆಯೇ, ಈ ಸ್ವಾತಂತ್ರ್ಯಕ್ಕಾಗಿ ಅಮೆರಿಕ ನಡೆಸಿದ ಪ್ರಥಮ ಮಹಾ ಸಂಗ್ರಾಮ.

ಘಟನೆಗಳಿಗೆ ಬಣ್ಣ ಕಟ್ಟಿ, ಈ ಹೋರಾಟದ ಚರಿತ್ರೆಯನ್ನು ಕಥೆಯ ರೂಪದಲ್ಲಿ ಚಿತ್ರಿಸಿದ್ದರೂ, ಉಲ್ಲೇಖಿಸಲಾಗಿರುವ ಅಂಶಗಳೆಲ್ಲ ಸತ್ಯವಾದುವು. ಒಂದೇ ಒಂದು ಸಂಗತಿ ಕೂಡ ಊಹೆಯದಲ್ಲ.

ಜೆಂಗರನ ಕಾಲದ ಪತ್ರಿಕೆಗಳ ಪರಿಶೀಲನೆಯಿಂದ ಈ ಪುಸ್ತಕವನ್ನು ಸಿದ್ಧಗೊಳಿಸಲಾಗಿದೆ. ಇದರಲ್ಲಿರುವ ಅನೇಕ ಸಂಗತಿಗಳು, ಈಗ ಪ್ರಚಾರದಲ್ಲಿರುವ ಮತ್ತಾವ ಪುಸ್ತಕದಲ್ಲೂ ಇಲ್ಲ. ಆದ್ದರಿಂದ, ಇನ್ನೂ ಹೆಚ್ಚು ವಾಸ್ತವಾಂಶಗಳನ್ನೂ ಮತ್ತು ಜೆಂಗರ್ ಪ್ರಕಟಿಸಿದ ಬರೆಹಗಳ ಮಾದರಿಗಳನ್ನೂ ಒಳಗೊಂಡ ಈ ಹೆಚ್ಚಿನ ಪ್ರಕರಣ ಅವಶ್ಯವೆನಿಸಿದೆ.

ಜರ್ಮನಿಯ ಪಶ್ಚಿಮ ಭಾಗದ ಪ್ಯಾಲಟಿನೇಟ್ ಎಂಬಲ್ಲಿ ೧೬೯೭ರಲ್ಲಿ ಜೆಂಗರ್ ಜನಿಸಿದ. ತನ್ನ ಕುಟುಂಬದೊಡನೆ ಮೊದಲು ನೆದರ್‌ಲೆಂಡ್ಸಿಗೂ, ಅನಂತರ ಇಂಗ್ಲೆಂಡಿಗೂ ಓಡಿಬಂದ.

ಅವನ ಪೂರ್ಣ ನಾಮಧೇಯ ಜಾನ್ ಪೀಟರ್ ಜೆಂಗರ್ ಎಂದಾದರೂ ಜೆ. ಪೀಟರ್ ಜೆಂಗರ್ ಎಂದೇ ಸಾಮಾನ್ಯವಾಗಿ ಸಹಿ ಹಾಕುತ್ತಿದ್ದ. ಅವನ ತಾಯಿ ಹನ್ನಾ ಜೆಂಗರ್; ತಮ್ಮ ಜಾರ್ಜ್, ತಂಗಿ ಅನ್ನಾ ಕ್ಯಾಥರೀನ್. ೧೭೧೦ರ ಬೇಸಿಗೆಯಲ್ಲಿ ಅವರೆಲ್ಲ ಅಮೆರಿಕಕ್ಕೆ ಬಂದರು. ತಂದೆ ಹಡಗಿನಲ್ಲಿ ಮೃತನಾದ.

೧೭೧೦ರ ಅಕ್ಟೋಬರ್ ೨೬ರಿಂದ ೮ ವರ್ಷಗಳ ಕಾಲ ಬ್ರಾಡ್‌ಫರ್ಡ್ ಬಳಿ ಅಪ್ರೆಂಟಿಸ್ ಆಗಿದ್ದ. ಅಂದು ಜೆಂಗರ್, ಅವನ ತಾಯಿ ಮತ್ತು ಬ್ರಾಡ್‌ಫರ್ಡ್ ಸಹಿ ಹಾಕಿದ ಕರಾರುಪತ್ರದ ಪ್ರತಿ ಇನ್ನೂ ಇವೆ.

ಶೀಘ್ರದಲ್ಲೇ ನ್ಯೂಯಾರ್ಕಿಗೂ ಕೆನಡಾದಲ್ಲಿದ್ದ ಫ್ರೆಂಚರಿಗೂ ಯುದ್ಧ ಸಂಭವಿಸಿತು. ಬಂದಿಗಳಾದ ಕೆಲವು ಫ್ರೆಂಚ್ ಅಧಿಕಾರಿಗಳಿಗೆ ಸ್ಥಳವೊದಗಿಸಿ, ಸ್ವಲ್ಪ ಹೆಚ್ಚಿನ ಸಂಪಾದನೆ ಮಾಡಿಕೊಂಡ ಬ್ರಾಡ್‌ಫರ್ಡ್, ಆ ಕಾಲದಲ್ಲಿ ತನ್ನ ಅಪ್ರೆಂಟಿಸ್‌ನನ್ನೂ ಕೆಲಸಗಾರನನ್ನೂ ಹಿಂಬದಿಯ ಉಪ್ಪರಿಗೆಯ ಛಾವಣಿ ಕೆಳಗಿನ ಕೊಠಡಿಗೆ ರವಾನಿಸಿದ.

ಗವರ್ನರ್ ಹಂಟರ್ ಬರೆದ ನಾಟಕವೊಂದನ್ನು ೧೭೧೪ರಲ್ಲಿ ಬ್ರಾಡ್‌ಫರ್ಡ್ ಮುದ್ರಿಸಿದ. ಮರುವರ್ಷ ಮೋಹಾಕ್ ಇಂಡಿಯನ್ ಭಾಷೆಯಲ್ಲಿ ಪ್ರಾರ್ಥನಾ ಪುಸ್ತಕವೊಂದನ್ನು ಮುದ್ರಿಸಿದ. ಅದನ್ನು ಜೋಡಿಸಿದವನು ಜೆಂಗರೇ ಆಗಿದ್ದರೆ, ಬಹು ಪ್ರಯಾಸಪಟ್ಟಿರಬೇಕು.

೧೭೧೮ರಲ್ಲಿ ೨೧ ವರ್ಷದ ಜೆಂಗರ್ ಮೇರಿಲ್ಯಾಂಡ್ ಕೆಂಟ್ ಕೌಂಟಿಯ ಚೆಸ್ಟರ್ ಟೌನಿಗೆ ಹೋಗಿ ಮುದ್ರಣಾಲಯವೊಂದನ್ನು ಸ್ಥಾಪಿಸಿದ; ವಿವಾಹವಾದ; ವೋಟಿನ ಹಕ್ಕುಳ್ಳ ನಾಗರಿಕನೂ ಆದ. ೧೭೨೦ರ ಏಪ್ರಿಲ್ ತಿಂಗಳಲ್ಲಿ ತನ್ನ ಅಧಿಕೃತ ಮುದ್ರಣಗಳಿಗೆ ಪ್ರತಿಯಾಗಿ ೭೦೦ ಪೌಂಡು ಹೊಗೆಸೊಪ್ಪನ್ನು ಕೊಡಲು ಮೇರಿಲ್ಯಾಂಡ್ ಶಾಸನಸಭೆ ಒಪ್ಪಿತು. ಆದರೆ ಅವನ ಪತ್ನಿ ಮೃತಳಾದಳು. ಸಹಜವಾಗಿ ಮುದ್ರಣ ಕಾರ್ಯವೆಲ್ಲವನ್ನೂ ಅವನು ಮಾಡಿಕೊಡಲೂ ಇಲ್ಲ, ಪೂರ್ತಿ ಹೊಗೆಸೊಪ್ಪನ್ನು ಪಡೆಯಲೂ ಇಲ್ಲ.

ಕೆಲ ದಿನಗಳ ನಂತರ ಜೆಂಗರ್ ನ್ಯೂಯಾರ್ಕಿನಲ್ಲಿದ್ದ. ಕೆಲವು

14

ಸರಕಾರಿ ದಾಖಲೆಗಳನ್ನು ಸಾಕಷ್ಟು ಬೇಗ ಮುದ್ರಿಸದೆ, ಬ್ರಾಡ್‌ಫರ್ಡ್ ನ್ಯೂಯಾರ್ಕ್ ಶಾಸನಸಭೆಯ ಕೋಪಕ್ಕೆ ಪಾತ್ರನಾಗಿದ್ದ. ಮರುವರ್ಷ ೧೭೦೯ರಲ್ಲಿ, ಬ್ರಾಡ್‌ಫರ್ಡ್ ನಗರಸಭೆಗೆ ೩೦ ಪೌಂಡುಗಳಷ್ಟು ಮೋಸ ಮಾಡಲೆಳೆಸಿದ. ಷಿಲಿಂಗ್ ನೋಟುಗಳ ಮುದ್ರಣಕ್ಕಾಗಿ, ಹೊಸ ತಾಮ್ರದ ಪ್ಲೇಟನ್ನು ಸಿದ್ಧಗೊಳಿಸುವುದಕ್ಕೆಂದು ಅಷ್ಟು ಹಣ ಪಡೆದ. ಆದರೆ ಹೊಸ ಪ್ಲೇಟನ್ನು ಮಾಡಿಸದೆ, ಹಳೇ ಪ್ಲೇಟನ್ನೇ ಉಪಯೋಗಿಸಿದ. ಜೂನ್‌ನಲ್ಲಿ ಅಧಿಕಾರಿಗಳು ಈ ಸಂಗತಿಯನ್ನು ಪತ್ತೆಮಾಡಿ, ಕೊಟ್ಟಿದ್ದ ಮೊಬಲಗನ್ನು ವಸೂಲುಮಾಡಿದರು.

೧೭೨೨ರ ವಸಂತದಲ್ಲಿ ನ್ಯೂಯಾರ್ಕಿಗೆ ಮರಳಿದ ಜೆಂಗರ್ ಸೆಪ್ಟೆಂಬರ್ ೧೧ರಂದು ಅನ್ನಾ ಕ್ಯಾಥರೀನ್ ಮೌಲಿನ್ನಳನ್ನು ವಿವಾಹವಾದ. ಅಂದಿನಿಂದ ಆಕೆ ಕ್ಯಾಥರೀನ್ ಜೆಂಗರ್ ಎಂದೇ ಸಹಿ ಹಾಕುತ್ತಿದ್ದಳು. ಭಾನುವಾರದ ಶಾಲೆಗಳ ಆರಂಭ ಕರ್ತಳೆಂದೂ, ಪತ್ರಿಕಾ ಪ್ರಕಾಶನವನ್ನು ಕೈಗೊಂಡ ಪ್ರಪ್ರಥಮ ಮಹಿಳೆಯೆಂದೂ ಆಕೆ ಪ್ರಖ್ಯಾತಳಾಗಿದ್ದಾಳೆ. ೧೭೩೪-೩೫ರಲ್ಲಿ ಜೆಂಗರ್ ಜೈಲಿನಲ್ಲಿದ್ದಾಗ, 'ಜರ್ನಲ್' ಪತ್ರಿಕೆಯ ವ್ಯವಸ್ಥಾಪಕತ್ವವನ್ನು ಬಹುವಾಗಿ ನೋಡಿಕೊಂಡವಳು ಆಕೆಯೇ. ೧೭೩೯ರಲ್ಲಿ ಎಲಿಜಬೆತ್ ಟಿಮೊತಿ 'ಸೌತ್ ಕೆರೊಲಿನ ಗೆಜೆಟ್' ಅನ್ನೂ, ೧೭೪೨ರಲ್ಲಿ ಆಂಡ್ರ್ಯೂ ಬ್ರಾಡ್‌ಫರ್ಡಿನ ವಿಧವೆ 'ಅಮೆರಿಕನ್ ವೀಕ್ಲಿ ಮರ್ಕ್ಯುರಿ'ಯನ್ನೂ, ಕ್ಯಾಥರೀನ್ ಜೆಂಗರ್ ೧೭೪೬ರಲ್ಲಿ ತನ್ನ ಗಂಡ ಜೆಂಗರನ ನಿಧನಾನಂತರದಿಂದ ಎರಡು ವರ್ಷ ಕಾಲ 'ಜರ್ನಲ್' ಅನ್ನೂ ಹೊರಡಿಸಿದರು.

೧೭೨೩ರ ಜುಲೈ ೬ ರಂದು ಜೆಂಗರ್, ಹೆಂಡ್ರಿಕ್ ಮೈಕೇಲ್ ಕುಕ್ ಮತ್ತು ಅವರ ಅನೇಕ ಮಂದಿ ಇತರ ಸ್ನೇಹಿತರೂ ವೋಟಿನ ಹಕ್ಕು ಪಡೆದು ನ್ಯೂಯಾರ್ಕಿನ ನಾಗರಿಕರಾದರು. ಈ ಹಕ್ಕಿಗಾಗಿ ಅವರು ಅರ್ಜಿಹಾಕಿ ಶುಲ್ಕವನ್ನು ತೆರಬೇಕಾಗಿತ್ತು. ಕುಕ್ ನೆಯ್ಗೆಯವನು; ಜೊತೆಗೆ ಸಂಗೀತವನ್ನೂ ಕಲಿತಿದ್ದ. ತನ್ನ ಸ್ನೇಹಿತರು ಅಧಿಕೃತ ದಾಖಲೆಗಳಿಗೆ ಸಹಿ ಹಾಕಬೇಕಾದಾಗಲೆಲ್ಲ ಜೆಂಗರ್ ಸಾಕ್ಷಿ

ಹಾಕುತ್ತಿದ್ದ.

ಕೆಲಸ ಕೇಳಲು ಬ್ರಾಡ್‌ಫರ್ಡಿನ ಬಳಿಗೆ ಬೆಂಜಮಿನ್ ಫ್ರಾಂಕ್‌ಲಿನ್ ಬಂದದ್ದು ೧೭೨೩ರ ಅಕ್ಟೋಬರಿನಲ್ಲಿ. ಶೀಘ್ರದಲ್ಲೇ ಬ್ರಾಡ್‌ಫರ್ಡ್ ಫಿಲಿಡೆಲ್ಫಿಯಕ್ಕೆ ಪ್ರಯಾಣ ಬೆಳೆಸಿದ. ಅಲ್ಲಿ ಫ್ರಾಂಕ್‌ಲಿನ್ನೊಡನೆ ಇನ್ನೂ ಹೆಚ್ಚಿನ ವ್ಯವಹಾರ ನಡೆಸಿದ. ಅಂತೆ ಫ್ರಾಂಕ್‌ಲಿನ್ನನ್ನು ತಂಟೆಕೋರನೆಂದು ಬಗೆದ ಬ್ರಾಡ್‌ಫರ್ಡ್ ಅವನಿಗೆ ಕೆಲಸ ದೊರಕದಂತೆ ಮಾಡಿದ. ಬ್ರಾಡ್‌ಫರ್ಡನನ್ನು 'ಕುಯುಕ್ತಿಯ ತೋಳ', 'ಅತಿ ಸ್ವಾರ್ಥಿ', 'ನಂಬಲಾಗದ ಜಾರುಗಳ್ಳ' – ಎಂದು ಫ್ರಾಂಕ್‌ಲಿನ್ ವರ್ಣಿಸಿದ್ದಾನೆ.

ಫ್ರಾಂಕ್‌ಲಿನ್ ನ್ಯೂಯಾರ್ಕಿಗೆ ಬಂದುಹೋದ ಒಂದು ತಿಂಗಳ ನಂತರ ನವೆಂಬರ್‌ನಲ್ಲಿ ಜೆಂಗರನ ಮೊದಲ ಮಗು ಜನಿಸಿತು. ಅದಕ್ಕೆ ಜಾರ್ಜ್ ಎಂಬ ಹೆಸರಿಟ್ಟ. ಮರುವರ್ಷ ಜೆಂಗರನ ಪತ್ನಿಯ ತಂಗಿ ಉರ್ಸುಲಾ ನಿಕ್ ಸಿಜ್ನನ್ನು ಮದುವೆಯಾದಳು. ೧೭೨೫ರಲ್ಲಿ ಜೆಂಗರನ ಎರಡನೆ ಮಗ ಪೈಟರ್ ಹುಟ್ಟಿದ.

೧೭೨೫ರಲ್ಲಿ ಜೆಂಗರ್ ಬ್ರಾಡ್‌ಫರ್ಡನ ಪಾಲುದಾರನಾದ. ಅನಂತರ ನ್ಯೂಯಾರ್ಕಿನ ಪ್ರಥಮ ಪತ್ರಿಕೆಯ ಪ್ರಕಟನೆಯ ವಿಷಯದಲ್ಲಿ ಜಗಳವಾಡಿದ. ೧೭೨೬ರಲ್ಲಿ ಸ್ಮಿತ್ ಸ್ಟ್ರೀಟಿನಲ್ಲಿ ತನ್ನದೇ ಸ್ವಂತ ಮುದ್ರಣಾಲಯವನ್ನು ಸ್ಥಾಪಿಸಿದ – ಇವೆಲ್ಲವನ್ನೂ ಈ ಕಥೆ ವಿವರಿಸಿದೆ.

೧೭೨೬ರ ಜೂನ್‌ನಲ್ಲಿ ಅವನ ತಮ್ಮ ಜಾರ್ಜ್, ಅನೇಕ ಮಿತ್ರರೊಡನೆ ವೋಟಿನ ಹಕ್ಕು ಪಡೆದು ನಾಗರಿಕನಾದ. ೧೭೨೭ರಲ್ಲಿ ಜೆಂಗರನ ಮೂರನೆಯ ಮಗ ನಿಕೋಲಾಸ್ ಜನಿಸಿದ. ನಾಮಕರಣವಾದ ಕೆಲವೇ ದಿನಗಳಲ್ಲಿ ಜೆಂಗರನ ತಂಗಿ ಫ್ರೆಡ್ ಬೆಕ್ಕರನ್ನು ಮದುವೆಯಾದಳು. ಆಕೆಗೆ ಎಲಿಜಬತ್ ಮತ್ತು ಫ್ರೆಡರಿಕ್ ಎಂಬ ಇಬ್ಬರು ಮಕ್ಕಳಾದರು. ಅವರ ಬ್ಯಾಪ್ಟಿಸಮ್ ಕಾಲದಲ್ಲಿ ಜೆಂಗರೇ ಸಾಕ್ಷಿಯಾಗಿದ್ದ.

ಚರ್ಚ್ ವಾದ್ಯದ ತಿದಿಯೊತ್ತುವ ಕೆಲಸಕ್ಕೆ, ಜೆಂಗರಿಗೆ ದೊರೆಯುತ್ತಿದ್ದ ವೇತನ ವರ್ಷಕ್ಕೆ ೧೨ ಪೌಂಡುಗಳು. ೧೭೨೭ರ ಡಿಸೆಂಬರ್

೧೫ರಂದು ಗವರ್ನರ್ ಬರ್ನೆಟ್ (ಅವನ ಹೆಂಡತಿ ಡಚ್) ಡಚ್ ಚರ್ಚಿಗೆ ಹೊಸ ವಾದ್ಯವೊಂದನ್ನು ದಾನ ಮಾಡಿದಳು. ಆ ದಿನವೇ ಹೆಂಡ್ರಿಕ್ ಮೈಕೇಲ್ ಕುಕ್‌ನನ್ನು ಅದರ ವಾದನಕ್ಕೂ, ಜೆಂಗರಿಗೆ ವಾದನ ಕಲಿಸುವುದಕ್ಕೂ ನೇಮಿಸಲಾಯಿತು.

ಕೆಲವು ದಿನಗಳನಂತರ ಜೆಂಗರ್ ತನ್ನ ಕೆಲವು ಪ್ಯಾಲಟೈನ್ ಮಿತ್ರರೊಡನೆ ಸೇರಿ, ಸ್ವಲ್ಪ ಭೂಮಿಯನ್ನು ಕೊಂಡ. ಇನ್ನೊಂದು ತಪ್ಪು; ಅವನಿಗೆ ಇದರಿಂದ ಏನೂ ಲಭಿಸಲಿಲ್ಲ.

೧೭೨೮ರಲ್ಲಿ ನಾಲ್ಕನೆ ಮಗು ಎಲಿಜಬೆತ್, ೧೭೩೨ರಲ್ಲಿ ಐದನೆ ಮಗು ಎವರ್ಟ್ ಹುಟ್ಟಿದವು.

ಜೆಂಗರ್ ವಾದ್ಯಗಾರನಾದಮೇಲೆ, ಚರ್ಚ್ ಅಧಿಕಾರಿಗಳು ಅವನಿಗೆ ವೇತನ ಕೊಡಲಿಲ್ಲ. ೧೭೩೨ರಲ್ಲಿ ಅವರ ಮೇಲೊಂದು ಹೂಬಾಣವೆಸೆದು, ತನ್ನ ಸಂಬಳಕ್ಕಾಗಿ, ಪ್ರಾರ್ಥನೆಗೆ ನೆರೆದವರ ಮುಂದೆ ಹ್ಯಾಟು ಹಿಡಿದು ಚಂದಾ ಕೇಳಲು ಅನುಮತಿ ಕೊಡಬೇಕೆಂದು ಅರ್ಜಿ ಕೊಟ್ಟ. ಚರ್ಚಿನ ಫಾದರುಗಳು ಈ ಅರ್ಜಿಯನ್ನು ಅರ್ಥ ಮಾಡಿ ಕೊಂಡು, ಅವನಿಗೆ ವೇತನ ಕೊಡಲೊಪ್ಪಿದರು.

ಅದೇ ಬೇಸಿಗೆಯಲ್ಲಿ ಗವರ್ನರ್ ಕಾಸ್ಬಿ ಬಂದ; ೧೭೩೩ರ ನವೆಂಬರ್ ೧ ರಂದು 'ಜರ್ನಲ್' ಆರಂಭವಾಯಿತು. ೧೭೩೫ರ ಜನವರಿಯಲ್ಲಿ ಎರಡು ಪತ್ರಿಕೆಗಳ ನಡುವೆ, ಭೀಕರ ಸಂಗ್ರಾಮ ನಡೆಯುತ್ತಿದ್ದಾಗ ಫ್ರೆಡರಿಕ್ ಹುಟ್ಟಿದ. ಅವನ ಪತ್ರಿಕೆ ತಿಳಿಸಿದಂತೆ ಮೇ ೧ ನೇ ತಾರೀಖು 'ಬ್ರಾಡ್ ಸ್ಟ್ರೀಟನಲ್ಲಿನ ಲಾಂಗ್ ಬ್ರಿಡ್ಜಿನ ಮೇಲ್ತುದಿಯ ಬಿಳಿಯ ಹೊಸ ಮಳಿಗೆ'ಗೆ ಮುದ್ರಣಾಲಯವನ್ನು ಸ್ಥಳಾಂತರಿಸಿದ.

ತೀವ್ರ ಸ್ಪರ್ಧೆಯಿದ್ದ, ಆಲ್ಡರ್‌ಮನ್‌ಗಳ ಚುನಾವಣೆ ಹೊತ್ತಿಗೆ ಸರಿಯಾಗಿ, ಅವನ ಮೈದುನ ಫ್ರೆಡ್‌ಬೆಕ್ಕರ್ ವೋಟಿನ ಹಕ್ಕು ಪಡೆದು ನಾಗರಿಕನಾದ.

ಚುನಾವಣಾನಂತರ ಎಲ್ಲಾ ಅಧಿಕೃತ ಮುದ್ರಣಗಳನ್ನೂ ಬ್ರಾಡ್‌ಫರ್ಡನ ಬದಲು ಜೆಂಗರಿಗೇ ಕೊಡಲಾಗುತ್ತಿತ್ತು. ೧೭೩೪ರ

ನವೆಂಬರ್ ೧೭ರಂದು ಜೆಂಗರ್ ಜೈಲಿಗೆ ಹೋದ. ಮರುವರ್ಷ ಆಗಸ್ಟ್ ೪ನೇ ತಾರೀಕು ವಿಚಾರಣೆ ನಡೆದು ಅದರ ಮರುದಿನ ಬಿಡುಗಡೆ ಮಾಡಲಾಯಿತು.

ಸೇವೆಗೆ ಪ್ರತಿಫಲವಾಗಿ, ನ್ಯೂಯಾರ್ಕ್ ವಸಾಹತಿನ ಸರಕಾರಿ ಮುದ್ರಣಗಳನ್ನು ೧೭೩೭ರಿಂದ ಜೆಂಗರಿಗೇ ವಹಿಸಿಕೊಡಲಾಯಿತು. ಮರುವರ್ಷ ಆಗ ನ್ಯೂ ಜರ್ಸಿಯ ಗವರ್ನರಾಗಿದ್ದ ಅವನ ಸ್ನೇಹಿತ ನ್ಯಾಯಮೂರ್ತಿ ಮಾರಿಸ್, ಅವನನ್ನೇ ನ್ಯೂ ಜರ್ಸಿಯ ಸರಕಾರಿ ಮುದ್ರಕನನ್ನಾಗಿ ನೇಮಿಸಿದ.

ತೆರಿಗೆ ವಸೂಲಿನ ಅಧಿಕಾರಿಗಳಲ್ಲೊಬ್ಬನಾಗಿ ನೇಮಿತನಾದರೂ ಬಡತನದ ಮಹಿಮೆಯಿಂದ ಸರಕಾರಕ್ಕೆ ಕಟ್ಟಬೇಕಾಗಿದ್ದ ಹಣದಲ್ಲಿ ಸ್ವಲ್ಪವನ್ನು ಸ್ವಂತಕ್ಕೆ ಖರ್ಚುಮಾಡಿಕೊಂಡನೆಂದು ವಜಾ ಆದ. ನಗರದ ಮುದ್ರಣಗಳನ್ನೂ ಬಹುಬೇಗನೆ ಕಳೆದುಕೊಂಡ. 'ಶ್ರದ್ಧೆಯಿಲ್ಲದ, ಇಂಗ್ಲಿಷ್ ಭಾಷೆಯನ್ನು ಏನೇನೂ ಅರಿಯದ ಮುದ್ರಕ'ನೆಂಬುದೇ, ಆ ರೀತಿ ಕೆಲಸ ತಪ್ಪಿಸಿದಾಗ ಕೊಟ್ಟ ಕಾರಣ. ಆದರೆ ಈ ಆಕ್ಷೇಪಣೆ ನಿಜವಲ್ಲ. ಅವನ ಮುದ್ರಣ ಬ್ರಾಡ್‌ಫರ್ಡ್‌ನ ಮುದ್ರಣದಷ್ಟೇ ಉತ್ತಮವಿತ್ತೆಂಬುದಕ್ಕೆ ದಾಖಲೆಗಳಿವೆ. ಆದರೆ ಕೆಲಸದಲ್ಲಿ ಬಹು ನಿಧಾನ ಎಂದು ಅವನ ಮಿತ್ರರೂ ಒಪ್ಪಿದ್ದಾರೆ.

೧೭೩೮ ರಲ್ಲಿ ಅವನ ಏಳನೆ ಮಗು ಕ್ಯಾಥರೀನ್ ಹುಟ್ಟಿತು.

ಜೆಂಗರ್ ವಿಚಾರಣೆಯ ನಂತರ, ವಿದೇಶಿ ಸುದ್ದಿಗಳ ವ್ಯವದಾನದಲ್ಲೂ, ಇಂಗ್ಲೀಷ್ ಪತ್ರಿಕೆಗಳಿಂದ ಉತ್ತಮ ಸಾಹಿತ್ಯಾಂಶಗಳನ್ನು ಆರಿಸಿ ಹಾಕುವುದರಲ್ಲೂ ಅವನ ಪತ್ರಿಕೆ ವಿಶೇಷ ಕುಶಲತೆಯನ್ನು ವ್ಯಕ್ತಪಡಿಸಿತು. ಆ ಹನ್ನೊಂದು ವರ್ಷಗಳ ಅವಧಿಯಲ್ಲಿ ಜೆಂಗರೇ ಪತ್ರಿಕೆಯ ಸಂಪಾದಕತ್ವವನ್ನು ನಿರ್ವಹಿಸಿರಬಹುದಾದುದರಿಂದ, ಅವನಿಗೆ ಉತ್ತಮ ಸಂಪಾದಕೀಯ ಸಾಮರ್ಥ್ಯವಿತ್ತೆಂದು ಒಪ್ಪಲೇಬೇಕು.

೧೭೪೩ರ ಜುಲೈ ೬ ರಂದು ಅವನ ಮಗಳು ಎಲಿಜಬೆತ್, ಅವನಿಗೆ ವಾದನ ಕಲಿಸಿದ ಕುಕ್ಕನ ಮಿತ್ರನೊಬ್ಬನ ನೆಯ್ಗಾರ ಪುತ್ರ

ನನ್ನು ವಿವಾಹವಾದಳು.

ಮೂರು ವಾರಗಳ ನಂತರ, ೧೭೪೬ರ ಜುಲೈ ೨೮ ರಂದು ಜೆಂಗರ್ ಮೃತನಾದ. ಸ್ವಲ್ಪ ಲ್ಯಾಟಿನ್ ಭಾಷೆಯ ಪರಿಚಯವೂ ಇದ್ದು, ಉತ್ತಮ ಹಾಸ್ಯ ಪದ್ಯಗಳನ್ನು ಇಂಗ್ಲಿಷ್‌ನಲ್ಲಿ ಬರೆಯಬಲ್ಲವ ನಾಗಿದ್ದರಿಂದ, ಅವನನ್ನು ವಿದ್ವಾಂಸನೆಂದು ಅವನ ಗೆಳೆಯ ಕರೆದಿ ದ್ದಾನೆ. ಆದರೆ ನ್ಯಾಯಮೂರ್ತಿ ಡಿಲಾನ್ಸೆ, "ಪ್ರಾಸದ ಹುಟ್ಟು ಗುಣವಿದ್ದ", "ದಪ್ಪ ತಲೆಯ ದಡ್ಡ" ಎಂದ.

ಜೆಂಗರನ ಹಿರಿಯ ಮಗ ಜಾನ್ ೧೭೪೧ರಲ್ಲಿ ವಿವಾಹವಾದ. ಅವನಿಗೆ ಮೂರು ಮಕ್ಕಳು. ತಾಯಿಯೊಂದಿಗೆ ಜಗಳವಾಡಿ, ಪ್ರತ್ಯೇಕವಾಗಿ ಮುದ್ರಕನಾದ. ಅವನು ಬರೆದ ಕೆಲವು ಲೇಖನಗಳನ್ನು ಪರಿಶೀಲಿಸಿದಾಗ, ಅವನಿಗೂ ತಂದೆಯಂತೆಯೇ ನೇರವಾಗಿ, ಸರಳ ಮಾತುಗಳಲ್ಲಿ ಬರೆವ ಸಾಮರ್ಥ್ಯವಿತ್ತೆಂದೂ, ತಂದೆಯಂತೆಯೇ ಹಾಸ್ಯ ಪ್ರವೃತ್ತಿಯಿತ್ತೆಂದೂ, ಆದರೆ ಆ ಹಾಸ್ಯದಲ್ಲಿ ಸ್ವಲ್ಪ ಹೆಚ್ಚಿನ ಕುಟುಕು ಇರುತ್ತಿತ್ತೆಂದೂ ವ್ಯಕ್ತವಾಗುತ್ತದೆ. ಜೆಂಗರನ ಎರಡನೆ ಮಗ ಪೀಟರ್ ವಿವಾಹವಾದ ೧೭೫೧ರಲ್ಲೇ ಜಾನ್ ಮೃತನಾದ.

ವಿಲಿಯಂ ಬ್ರಾಡ್‌ಫರ್ಡ್ ೧೬೬೩ರಲ್ಲಿ ಇಂಗ್ಲೆಂಡಿನಲ್ಲಿ ಹುಟ್ಟಿದ. ಸೌಲೆ ಎಂಬ ಮುದ್ರಕನಲ್ಲಿ ಅಪ್ರೆಂಟಿಸ್ ಆಗಿ ಸೇರಿ, ಅವನ ಮಗಳನ್ನೇ (ಎಲಿಜಬೆತ್) ಮದುವೆಯಾದ.

೧೬೮೫ರಲ್ಲಿ ಕ್ವೇಕರ್ ನಾಯಕ ಜಾರ್ಜ್ ಫಾಕ್ಸ್ ಅವನನ್ನು ಅಮೆರಿಕಕ್ಕೆ ಕಳಿಸಿದ.

ಬ್ರಾಡ್‌ಫರ್ಡ್ ಮೊದಲು ಫಿಲಿಡೆಲ್ಫಿಯಾದಲ್ಲಿ ನೆಲೆಸಿದ. ಕ್ವೇಕರ್ ಧರ್ಮವನ್ನು ಸುಧಾರಿಸಲು ಪ್ರಯತ್ನಿಸಿದುದರಿಂದ, ಅವನು ಅವರೊಡನೆ ಜಗಳವಾಡಬೇಕಾಯಿತು. ಅಧಿಕಾರಿಗಳೂ ಅನೇಕ ಸರ್ತಿ ಅವನ ಮೇಲೆ ರೇಗಿದರು. ಹೆದರಿ ಇಂಗ್ಲೆಂಡಿಗೆ ಓಡಿಹೋದ. ಆದರೆ ಮತ್ತೆ ಅಮೆರಿಕಕ್ಕೇ ೧೬೯೨ರಲ್ಲಿ ಮರಳಿದ. ೨೯ ವಯಸ್ಸಾಗಿ ದ್ದಾಗ ಕತೆಯಲ್ಲಿ ತಿಳಿಸಿರುವಂತೆ, ಬಂಧಿತ ವಿಚಾರಣೆಗಳಿಗೆ ಗುರಿಯಾಗಿ

ಮರು ವರ್ಷ ನ್ಯೂಯಾರ್ಕಿಗೆ ರವಾನಿಸಲ್ಪಟ್ಟ.

ನ್ಯೂಯಾರ್ಕಿನಲ್ಲಿ ಇಂಗ್ಲಿಷ್, ಡಚ್, ಫ್ರೆಂಚ್ ಭಾಷೆಗಳಲ್ಲಿ ಬಹುವಾಗಿ ಪಂಚಾಂಗಗಳನ್ನು, ಧರ್ಮ ಗ್ರಂಥಗಳನ್ನು ಮುದ್ರಿಸಿದ. ಸರಕಾರದ ಅಧಿಕೃತ ವರದಿಗಳನ್ನು ಕಾಗದದ ಹಣವನ್ನು ಮುದ್ರಿಸಿದ. ೧೭೨೪ರಲ್ಲಿ ನ್ಯೂ ಜೆರ್ಸಿಯಲ್ಲಿ ಕಾಗದದ ಕಾರ್ಖಾನೆಯೊಂದನ್ನು ಆರಂಭಿಸಿದ.

೧೭೩೧ರಲ್ಲಿ ಅವನ ಪತ್ನಿ ಮೃತಳಾದಳು. ೧೭೩೩ರ ಮೇ ೧೭ರಂದು ಅವನ ಅಪ್ರೆಂಟಿಸ್ ಜೇಂಸ್ ಪಾರ್ಕರ್ ಎಂಬುವನು, ಕೆಲವು ಪುಸ್ತಕಗಳನ್ನೂ, ಚಾಕುಗಳನ್ನೂ ಮುದ್ರಕನ ಹತಾರಗಳನ್ನೂ ಮತ್ತು ತನ್ನ ಅಂಗಡಿಯಲ್ಲಿ ಬ್ರಾಡ್‌ಫರ್ಡ್ ಮಾರುತ್ತಿದ್ದ ರೇಷ್ಮೆ ಹಾಗೂ ಉಣ್ಣೆಯ ಅನೇಕ ಜೊತೆ ಕಾಲು ಚೀಲಗಳನ್ನೂ ಕದ್ದು ಪರಾರಿಯಾದ. ಅವನನ್ನು ಹಿಡಿದುಕೊಟ್ಟವರಿಗೆ ೨೦ ಶಿಲಿಂಗ್ ಬಹುಮಾನ ಕೊಡುವುದಾಗಿ ಬ್ರಾಡ್‌ಫರ್ಡ್ ಜಾಹೀರಾತು ಕೊಟ್ಟ. ಆದರೆ ಸ್ವಲ್ಪ ಕಾಲದ ನಂತರ ಹುಡುಗನೇ ತಾನಾಗಿಯೇ ವಾಪಸ್ ಬಂದು, ಮಾಲಿಕನೊಡನೆ ಸಂಬಂಧವನ್ನು ಸರಿಪಡಿಸಿಕೊಂಡ.

೧೭೩೪ರಲ್ಲಿ ತನ್ನ ಪತ್ರಿಕೆಗೂ ಜೆಂಗರ್ ಪತ್ರಿಕೆಗೂ ತೀವ್ರ ಕಾಳಗ ನಡೆಯುತ್ತಿದ್ದಾಗ ಬ್ರಾಡ್‌ಫರ್ಡ್ ಕಾರ್ನಿಲಿಯಾ ಸ್ಮಿತ್ ಎಂಬ ವಿಧವೆಯನ್ನು ವಿವಾಹವಾಗಿ ಹ್ಯಾನೋವರ್ ಚೌಕದ ಮನೆಯೊಂದಕ್ಕೆ ಸ್ಥಳಾಂತರನಾದ.

೧೭೪೨ರಲ್ಲಿ ನಿವೃತ್ತನಾಗಿ, ಹತ್ತು ವರ್ಷಗಳ ನಂತರ ತನ್ನ ೮೯ನೇ ವಯಸ್ಸಿನಲ್ಲಿ ಮೃತನಾದ.

ಜೆಂಗರ್ ಅಮೆರಿಕಕ್ಕೆ ಬರುವುದಕ್ಕೆ ಎರಡು ವರ್ಷ ಮುಂಚೆಯೇ ೧೭೦೮ರಲ್ಲಿ ಬ್ರಾಡ್‌ಫರ್ಡನ ಮಗ ಆಂಡ್ರ್ಯೂ ವೋಟಿನ ಹಕ್ಕು ಪಡೆದ. ೧೭೧೧ರಲ್ಲಿ ಜೆಂಗರ್ ಅವರ ಮನೆಗೆ ಬಂದಾಗ ಆಂಡ್ರ್ಯೂ, ಬ್ರಾಡ್‌ಫರ್ಡನ ಪಾಲುದಾರನಾಗಿದ್ದ. ಎರಡು ವರ್ಷಗಳ ನಂತರ ಆಂಡ್ರ್ಯೂ ಫಿಲಿಡೆಲ್ಫಿಯಕ್ಕೆ ಹೋಗಿ, ಸ್ವಂತ ಮುದ್ರಣಾಲಯವನ್ನು ಆರಂಭಿಸಿದ. ೧೭೧೯ರಲ್ಲಿ "ಅಮೆರಿಕನ್ ವೀಕ್ಲಿ ಮರ್ಕ್ಯುರಿ"('ಅಮೆರಿಕನ್ ವೀಕ್ಲಿ

ಮೆಸೆಂಜರ್' ಎಂಬ ಹೆಸರೂ ಇತ್ತು)ಯನ್ನು ಆರಂಭಿಸಿದ.

ಪೆನ್ಸಿಲ್ವೇನಿಯ ಸರಕಾರದ ಮುದ್ರಣವನ್ನೆಲ್ಲ ೧೦ ವರ್ಷಗಳ ಕಾಲ ನಿರ್ವಹಿಸಿದ.

ತಾಪತ್ರಯಗಳು ಅವನಿಗೆ ಬೇಕಾದಷ್ಟಿದ್ದವು. ೧೭೨೨ರಲ್ಲಿ ಪೆನ್ಸಿಲ್ವೇನಿಯ ಶಾಸನ ಸಭೆಗೆ ಇಷ್ಟವಾಗದ ಕೆಲವು ಸಲಹೆಗಳನ್ನು ಪ್ರಕಟಿಸಿದನೆಂದು, ಆ ಸಭೆ ಅವನನ್ನು ಕರೆಸಿ ಆಕ್ಷೇಪಿಸಿತು. "ಈ ಪ್ರಾಂತ್ಯದ ಗವರ್ನರ್ ಅಥವಾ ಕಾರ್ಯದರ್ಶಿಯ ಅನುಮತಿ ಯಿಲ್ಲದೆ, ಈ ಸರಕಾರಕ್ಕೆ ಅಥವಾ ದೊರೆಗಳ ಯಾವುದೇ ವಸಾಹತು ಸರಕಾರಕ್ಕೆ ಸಂಬಂಧಿಸಿದ ವ್ಯವಹಾರಗಳನ್ನು ಇನ್ನು ಮುಂದೆ ಪ್ರಕಟಿಸ ಕೂಡದು" ಎಂಬ ಆಜ್ಞೆಯನ್ನು ಗವರ್ನರ್ ಅವನ ಮೇಲೆ ಜಾರಿ ಮಾಡಿದ.

ಮುರ್ಖನಲ್ಲವಾದ್ದರಿಂದ, ಸಹಜವಾಗಿಯೇ ಬ್ರಾಡ್‌ಫರ್ಡ್ ಕ್ಷಮೆ ಯಾಚಿಸಿದ. ಈ ಅತ್ಯಾಚಾರದ, ಪ್ರಜಾಪೀಡಕ, ಅನಾಗರಿಕ ಆಜ್ಞೆಯನ್ನು ಅವನಾಗಲಿ ಮತ್ತಾವ ಮುದ್ರಕನೇ ಆಗಲಿ ಪಾಲಿಸ ದಿದ್ದರೆ, ಅಮೆರಿಕದ ಪತ್ರಿಕಾ ಪ್ರಪಂಚವೇ ಹಾಳಾಗಿ, ವ್ಯರ್ಥ ವಾಗುತ್ತಿತ್ತು.

ಅದೃಷ್ಟವಶಾತ್ ಅವನಿಗೆ ಧೈರ್ಯವಿತ್ತು. ತನ್ನನ್ನು "ಅಂಧ ಶ್ರದ್ಧರು, ವಿಶ್ವಾಸಘಾತುಕರು, ದಬ್ಬಾಳಿಕೆಯ ಅಪರಾವತಾರಿಗಳು" ಎಂದು ಕರೆದನೆಂದು ಬೆಂಜಮಿನ್ ಫ್ರಾಂಕ್‌ಲಿನ್ನನ ಮೇಲೆ ಮೆಸಾಚ್ಯುಸೆಟ್ಸ್ ಅಧಿಕಾರಿಗಳು ಕ್ರಮುಗೊಂಡಾಗ ೧೭೨೩ರ ಫೆಬ್ರವರಿ ೨೬ ರಂದು ಉಗ್ರಟೀಕೆಗಳನ್ನು ಪ್ರಕಟಿಸಿದರು.

ಕೆಲ ವರ್ಷಗಳನಂತರ ಬೆಂಜಮಿನ್ ಫ್ರಾಂಕ್‌ಲಿನ್ ಮತ್ತಿತರರು ಬರೆದ "ಬ್ಯುಸಿ ಬಾಡಿ ಪೇಪರ್ಸ್" ಎಂಬ ಪ್ರಬಂಧಗಳ ಮಾಲೆಯನ್ನು ಪ್ರಕಟಿಸಿದ. ಈ ಪೈಕಿ ಒಂದು ಲೇಖನ ಜೆಂಗರನ ಸ್ನೇಹಿತರಾದ ಲಾಂಗ್ ದ್ವೀಪದ ರೆವರೆಂಡ್ ಡಾ॥ಅಲೆಕ್ಸಾಂಡರ್ ಕ್ಯಾಂಬೆಲ್ ಅವರು ಬರೆದುದು. ಸ್ವಾತಂತ್ರ್ಯವನ್ನು ಎತ್ತಿಹಿಡಿದು ಆನುವಂಶಿಕ ಅಧಿಕಾರ ವನ್ನು ಖಂಡಿಸಿ ಬರೆದಿದ್ದ ಈ ಲೇಖನದಿಂದ ಗಾಬರಿಗೊಂಡ

ಪೆನ್ಸಿಲ್ವೇನಿಯ ಅಧಿಕಾರಿಗಳು, ಆಂಡ್ರ್ಯೂ ಬ್ರಾಡ್‌ಫರ್ಡನನ್ನು ಬಂಧಿಸಿ ಜೈಲಿಗೆ ಹಾಕಿದರು.

ವಿಚಾರಣೆಯಿಲ್ಲದೆಯೇ ಕೇವಲ ಸಂಧಾನದಿಂದಲೇ ಹೊರಗೆ ಬಂದ ಆಂಡ್ರ್ಯೂ ಧೃತಿಗೆಟ್ಟಿರಬೇಕೆಂದು ಪ್ರಾಯಶಃ ಅವರು ಭಾವಿಸಿರಬೇಕು. ಆ ರೀತಿ ಭಾವಿಸಿದ್ದರೆ ಬಲುಬೇಗ ಅವರಿಗೆ ನಿರಾಶೆಯುಂಟಾಯಿತು. ಅಂದಿನಿಂದ ಪತ್ರಿಕೆ ಇನ್ನೂ ಧೀರವಾಯಿತು. ರಾಜಕೀಯ ಸ್ವಾತಂತ್ರ್ಯಕ್ಕೆ ಸಂಬಂಧಿಸಿದ ಇನ್ನೂ ಉಗ್ರವಾದ ಪ್ರಬಂಧಗಳೂ ಪ್ರಕಟವಾಗತೊಡಗಿತು.

ಬೆಂಜಮಿನ್ ಫ್ರಾಂಕ್‌ಲಿನ್ ತತ್‌ಕ್ಷಣದಿಂದ ಸ್ಪರ್ಧಿಯಾಗಿ ಇನ್ನೊಂದು ಪತ್ರಿಕೆಯನ್ನು ಪ್ರಕಟಿಸಲಾರಂಭಿಸಿದ. ೧೭೩೦ರಲ್ಲಿ, ಆಂಡ್ರ್ಯೂ ಬ್ರಾಡ್‌ಫರ್ಡನ ಬಂಧನದ ಒಂದು ವರ್ಷದ ನಂತರ, ಫ್ರಾಂಕ್‌ಲಿನ್ ಸರಕಾರಿ ಮುದ್ರಣವನ್ನೆಲ್ಲ, ಅವನಿಂದ ತನ್ನ ಕೈಗೆ ಪಡೆದುಕೊಂಡ.

ವೃದ್ಧ ಬ್ರಾಡ್‌ಫರ್ಡನ ಇನ್ನೊಬ್ಬ ಮಗ ವಿಲಿಯಂ ಜ್ಯೂನಿಯರ್ ಮುದ್ರಕನಾಗಲಿಲ್ಲ. ಡಚ್ ಸ್ತ್ರೀಯೊಬ್ಬಳನ್ನು ವಿವಾಹವಾಗಿ ತಂದೆಯ ಮುದ್ರಣಶಾಲೆಯ ಪಕ್ಕದಲ್ಲೇ ಮನೆಯೊಂದನ್ನು ತೆಗೆದುಕೊಂಡ. ಅವನಿಗೂ ಎರಡು ಮಕ್ಕಳಾದವು. ಈ ಪೈಕಿ ಮೂರನೆ ವಿಲಿಯಂ ಬ್ರಾಡ್‌ಫರ್ಡನನ್ನು ಫಿಲಿಡೆಲ್ಫಿಯದಲ್ಲಿದ್ದ ಆಂಡ್ರ್ಯೂ ಬ್ರಾಡ್‌ಫರ್ಡ್ ದತ್ತು ತೆಗೆದುಕೊಂಡ. ಈ ವಿಲಿಯಂ ಮುಂದೆ ಅಮೆರಿಕದ ಕ್ರಾಂತಿಗೆ ಬೆಂಬಲ ನೀಡುವ ಅತ್ಯಂತ ಧೀರ ಮುದ್ರಕನಾದ.

ಪತ್ರಿಕಾ ಪ್ರಕಟನಕಾಲಕ್ಕೆ ಸರಿಯಾಗಿ ೧೭೨೫ ರಲ್ಲಿ ಬ್ರಾಡ್‌ಫರ್ಡಿನ ಅಪ್ರೆಂಟಿಸ್‌ಗಳಾಗಿ ಸೇರಿದ ಜೇಂಸ್‌ಪಾರ್ಕರ್ ಮತ್ತು ಹೆನ್ರಿ ಡಿ ಫಾರೆಸ್ಟ್ ಎಂಬಿಬ್ಬರು ಅನಂತರ ಸುವಿಖ್ಯಾತ ಮುದ್ರಕರುಗಳಾದರು. ಅವರಿಬ್ಬರೂ ಶುದ್ಧ ಸುಳ್ಳುಗಾರರು. ಅಂತೆ ಬ್ರಾಡ್‌ಫರ್ಡ್ ಹಾಗೂ ಜೆಂಗರನ್ನು ಕುರಿತು ಅವರು ಬರೆದಿರುವುದೇನನ್ನೂ ನಂಬುವಂತಿಲ್ಲ.

ವಿಲಿಯಂ ಕಾಸ್ಬಿ ಗವರ್ನರಾದದ್ದು ಹೇಗೆ ?

ಸರಕಾರಿ ಹಣವನ್ನು ತನ್ನ ಸ್ವಂತಕ್ಕೆ ಖರ್ಚು ಮಾಡಿದುದರಿಂದ ಕಾಸ್ಬಿ ಮಿನೊರ್ಕಾ ಗವರ್ನರಾಗಿದ್ದಾಗ, ಅಲ್ಲಿನ ಜನ ಆಕ್ಷೇಪವೆತ್ತಿದರು. ಒಬ್ಬ ಸ್ಪಾನಿಷ್ ವರ್ತಕನೊಂದಿಗೆ ಜಗಳವಾಡಿ ಅವನಿಂದ ವಿಪರೀತ ಪ್ರಮಾಣದ ನಶ್ಯವನ್ನು ವಶಪಡಿಸಿಕೊಂಡು, ೯ ಸಾವಿರ ಪೌಂಡುಗಳಿಗೆ ಅದನ್ನು ಮಾರಿದ. ಜನರ ದೂರು ಅವನನ್ನ ವಾಪಸ್ ಕಳಿಸಿತು. ಮಾರ್ಗದಲ್ಲಿ ಲೂಟಿ ಹೊಡೆದುದನ್ನೆಲ್ಲ ದುಂದುಮಾಡಿ, ವೈಭವದಿಂದ ಯೂರೋಪ್ ಪ್ರವಾಸಮಾಡಿದ.

ಲಂಡನ್ನಿನಲ್ಲಿ ಅವನ ವಿಚಾರಣೆಯಾಗಿ, ತಪ್ಪಿತಸ್ಥನೆಂದೇ ತೀರ್ಮಾನವಾಯಿತು. ಹಣ ವಾಪಸ್ ಮಾಡಬೇಕು ಇಲ್ಲ ಜೈಲಿಗೆ ಹೋಗಬೇಕು ಎನ್ನುವ ಪರಿಸ್ಥಿತಿ ಬಂತು. ಎಲ್ಲವನ್ನೂ ಖರ್ಚು ಮಾಡಿದ್ದುದರಿಂದ ವಾಪಸ್ ಮಾಡುವಂತಿರಲಿಲ್ಲ.

ಆದರೆ ಅವನಿಗೆ ಪ್ರಬಲ ಮಿತ್ರರುಗಳಿದ್ದರು. ಡ್ಯೂಕ್ ಆಫ್ ಗ್ರಾಫ್ಟನ್ ಮತ್ತು ಡ್ಯೂಕ್ ಆಫ್ ನ್ಯೂಕ್ಯಾಸಲ್ ಇಂಥವರು ಮಿತ್ರರುಗಳಾದರೆ, ಅವನ ಪತ್ನಿ ಗ್ರೇಸ್‌ಮಾಂಟೆಗೂ ಎರಡನೇ ಅರ್ಲ್ ಆಫ್ ಹ್ಯಾಲಿಫಾಕ್ಸನ ತಂಗಿ. ಇವರುಗಳಿಗೆಲ್ಲ ಇವನು ಜೈಲಿಗೆ ಹೋಗುವುದು ಇಷ್ಟವಿಲ್ಲದ್ದರಿಂದ, ಹತ್ತುಸಾವಿರ ಪೌಂಡುಗಳ ಸಾಲ ಕೊಟ್ಟರು. ಈ ಪೈಕಿ ಬಹುಭಾಗವನ್ನು ಕೋರ್ಟಿಗೇ ಕಟ್ಟಬೇಕಿತ್ತು.

ಅನಂತರ ಈ ಮಿತ್ರರೇ ಅವನಿಗೆ ಉದ್ದೇಶಪೂರ್ವಕವಾಗಿ ನ್ಯೂಯಾರ್ಕ್ ಮತ್ತು ನ್ಯೂ ಜೆರ್ಸಿಯ ಗವರ್ನರ್ ಹುದ್ದೆಯನ್ನು ಕೊಡಿಸಿದರು. ತಮ್ಮ ಹಣ ಶೀಘ್ರದಲ್ಲಿ ವಾಪಸ್ ಬಂದೀತೆಂಬುದೇ ಅವರ ಈ ಕ್ರಮದ ಕಾರಣ.

ಕಾಸ್ಬಿ ಕೂಡ ತತ್‌ಕ್ಷಣದಿಂದ ಅದೇ ಕೆಲಸಮಾಡತೊಡಗಿದ. ನ್ಯೂಯಾರ್ಕಿನ ಸೈನಿಕರಿಗೆಲ್ಲ ಹೊಸ ಸಮವಸ್ತ್ರಗಳನ್ನೂ, ಉಪಕರಣಗಳನ್ನೂ ಇಂಗ್ಲಿಷ್ ಬೆಲೆಯಲ್ಲಿ ಕೊಂಡು, ಬ್ರಿಟಿಷ್ ಸರಕಾರಕ್ಕೆ ಅಮೆರಿಕದ ಬೆಲೆಯಲ್ಲಿ ಬಿಲ್‌ಕೊಟ್ಟ. ಇಂಗ್ಲಿಷ್ ಬೆಲೆಯ ದ್ವಿಗುಣ ಅಮೆರಿಕನ್ ಬೆಲೆ. ಈ ಲಾಭವನ್ನು ಜೇಬಿಗೆ ಸೇರಿಸಿದ. "ಇಂಡಿ

ಯನ್ನರಿಗೆ ಬಹುಮಾನಗಳನ್ನು ಕೊಡುವುದಕ್ಕೆಂದು" ಹಣ ಸಂಗ್ರಹಿಸಿದ. ಲಂಡನ್ ಬಿಡುವ ಮುಂಚೆ ನ್ಯೂಯಾರ್ಕ್ ಶಾಸನ ಸಭೆಗೆ ತಾನು ಸೇವೆ ಸಲ್ಲಿಸಿದೆನೆಂದೂ, ಅದಕ್ಕಾಗಿ ತನಗೆ ಪ್ರತಿಫಲಕೊಡಬೇಕೆಂದೂ, ಶಾಸನ ಸಭೆಯನ್ನು ಒತ್ತಾಯಪಡಿಸಿದ. ಸಭೆ ೭೫೦ ಪೌಂಡುಗಳನ್ನು ಮಂಜೂರುಮಾಡಿದಾಗ ಅದನ್ನು ಸಾವಿರಕ್ಕೆ ಏರಿಸಬೇಕೆಂದು ಕೂಗಿ, ಗಲಾಟೆಮಾಡಿ ಪಡೆದ.

ಈ ಮಾರ್ಗಗಳಿಂದ ಅಮೆರಿಕದಲ್ಲಿ ಕಾಲಿಡುವುದರಲ್ಲಿಯೇ ೮೦೦೦ ಪೌಂಡುಗಳನ್ನು ಗಳಿಸಿದ್ದ. ಸಾಲ ತೀರಿಸಲು ಈ ಹಣ ಸಾಲದ್ದರಿಂದ, ಅವನಿಗೆ ತೃಪ್ತಿಯಾಗಿರಲಿಲ್ಲ.

ವಾನ್ ಡಾಂನ ಸಂಬಳದಲ್ಲಿ ಅರ್ಧದಷ್ಟನ್ನುಪಡೆಯಲು ಅವಕಾಶ ಕೊಡಬೇಕೆಂದು, ದೊರೆಯನ್ನು ಕೇಳಿದ್ದ. ನ್ಯೂಯಾರ್ಕಿನ ನೆಲದ ಮೇಲೆ ಕಾಲಿಟ್ಟೊಡನೆಯೆ ಅದಕ್ಕಾಗಿ ತಗಾದೆಮಾಡತೊಡಗಿದ.

ಇದು ಅವನ ಮೂರ್ಖತನ. ಕಾಸ್ಬಿ ನ್ಯೂಯಾರ್ಕಿಗೆ ಬರುವ ಮುನ್ನ ಕಾಸ್ಬಿ ಮತ್ತು ವಾನ್ ಡಾಂ ಪಡೆದ ಮೊತ್ತಗಳನ್ನು ಸಮ ಸಮವಾಗಿ ಹಂಚಿಕೊಳ್ಳಬೇಕೆಂಬ ಅರ್ಥ ಬರುವಂತೆ ದೊರೆಯ ಆಜ್ಞೆಯನ್ನು ಬರೆಯಲಾಗಿತ್ತು. ೯೫೦ ಪೌಂಡುಗಳನ್ನು ಕೊಡೆಂದು ಕಾಸ್ಬಿ ವಾನ್ ಡಾಂನನ್ನು ಕೇಳಿದಾಗ, ಅವನು ತನ್ನ ಲಂಡನ್ ಮಿತ್ರನೊಬ್ಬನಿಗೆ ಶುಲ್ಕತೆತ್ತು, ಸ್ವಲ್ಪ ಸಂಶೋಧನೆ ನಡೆಸುವಂತೆ ಕೇಳಿಕೊಂಡ. ಅದರಂತೆ ಕಾಸ್ಬಿಯೇ ವಾನ್ ಡಾಂಗೆ ೩೫೦೦ ಪೌಂಡುಗಳಿಗಿಂತಲೂ ಅಧಿಕ ಮೊತ್ತವನ್ನು ತೆರಬೇಕಾಗಿತ್ತು. ಅಲ್ಲಿಗೆ ಈ ವಿಷಯ ಇತ್ಯರ್ಥವಾಯಿತು. ವಾನ್ ಡಾಂನ ಕಿರಿಹೊತ್ತಿಗೆ ಕಾಸ್ಬಿಯ ಸುಲಿಗೆಯ ಯತ್ನಕ್ಕೆ ಮುಕ್ತಾಯ ಹಾಡಿತು.

ಜೇಂಸ್ ಅಲೆಕ್ಸಾಂಡರ್ ಹುಟ್ಟಿದ್ದು ೧೬೯೧ ರಲ್ಲಿ, ಸ್ಕಾಟ್‌ಲೆಂಡಿನಲ್ಲಿ. ಅವನು ವಿಜ್ಞಾನವನ್ನು ಅಧ್ಯಯನಮಾಡಿದ. ೧೭೧೫ ರಲ್ಲಿ ಇಂಗ್ಲಿಷ್‌ರೊಡನೆ ಕಾದಲು ಹೊರಟ ಸ್ಕಾಟ್ ಸೇನೆಯೊಂದರ ಜೊತೆ ಸೇನಾ ಎಂಜಿನಿಯರ್ ಆಗಿ ಹೊರಟ. ಇನ್ನೂ ಭಾರಿಯಾದ ಇಂಗ್ಲಿಷ್

ಸೇನೆ ಎದುರಿಸಿದಾಗ, ಸ್ಕಾಟರು ತಮ್ಮ ಕ್ರಮದ ಪುನರ್ವಿಮರ್ಶೆ ಮಾಡಿ ಸ್ವದೇಶಕ್ಕೆ ಮರಳಿದರು. ಆದರೆ ಕೆಲವರು ಸೆರೆಸಿಕ್ಕಿ ಶಿಕ್ಷೆಗೊಳಗಾದರು.

ತರುಣ ಅಲೆಕ್ಸಾಂಡರ್, ತನ್ನ ದಾಯಾದಿ ಐದನೆ ಅರ್ಲ್ ಆಫ್ ಸ್ಟರ್ಲಿಂಗ್ ಹೆನ್ರಿಯ ಆಶ್ರಯ ಪಡೆದ. ಆ ದಾಯಾದಿಯೇ ಅಲೆಕ್ಸಾಂಡರನನ್ನು ಅಮೆರಿಕಾಕ್ಕೆ ಕಳಿಸುವ ವ್ಯವಸ್ಥೆ ಮಾಡಿದ. ಹಡಗಿನ ಮೇಲೆ ಸ್ಮಿತ್ತನನ್ನು ಸಂಧಿಸಿದ. ಅವನು ಅನಂತರ ಅಲೆಕ್ಸಾಂಡರನ ಪಾಲುದಾರನಾದ.

ಅಲೆಕ್ಸಾಂಡರ್ ನ್ಯೂ ಜೆರ್ಸಿಯ ಸರ್ವೇಯರಾದ. ಅವನನ್ನು ಪೆರ್ತ್ ಅಂಬಾಯ್‌ನ ರಿಕಾರ್ಡರ್ (ಕ್ರಿಮಿನಲ್ ಕೋರ್ಟಿನ ನ್ಯಾಯಮೂರ್ತಿ) ಆಗಿ ನೇಮಿಸಲಾಯಿತು. ಬೇಗ ಬೇಗನೆ ಅನೇಕ ರಾಜಕೀಯ ಅಧಿಕಾರಿಗಳಲ್ಲಿದ್ದ. ರಾಜಪ್ರತಿನಿಧಿ ಮಂಡಳದ ಸದಸ್ಯನೂ ಆದ.

ಪ್ರೊವೂಸ್ಟ್ ಎಂಬ ಡಚ್ ವರ್ತಕನ ವಿಧವೆ, ಪೋಲಿ ಸ್ಪ್ರೈಟ್ ಎಂಬಾಕೆಯನ್ನು ೧೭೨೧ರಲ್ಲಿ ವಿವಾಹವಾದ. ಆಕೆ ಹುಡುಗಿಯಾಗಿದ್ದಾಗ, ಬೇಸಿಗೆಯಲ್ಲಿ ದೋಣಿ ನಡೆಸುತ್ತಿದ್ದಳು. ಛಳಿಗಾಲದಲ್ಲಿ ಮಂಜುಗಡ್ಡೆಯ ಮೇಲೆ ಜಾರುತ್ತಿದ್ದಳು, ಕಾಲಿಗೆ "ಷೀ" ಕಟ್ಟಿಕೊಂಡು, ಹುಡುಗರಿಗಿಂತ ವೇಗವಾಗಿ ಗುಡ್ಡದಿಂದ ಜಾರುತ್ತಿದ್ದಳಂತೆ. ಡಚ್ ಮತ್ತು ಇಂಗ್ಲಿಷ್‌ಗಳಲ್ಲದೆ, ಇಂಡಿಯನ್ನರೊಂದಿಗೆ ಅವರ ಭಾಷೆಗಳಲ್ಲೇ ಮಾತನಾಡಬಲ್ಲವಳಾಗಿದ್ದಳು.

ಮೃತ ಗಂಡನ ವ್ಯಾಪಾರವಾದ ಆಮದು-ರಫ್ತು ಕಾರ್ಯವನ್ನು ಆಕೆ ಮುಂದುವರಿಸಿದಳು. ವ್ಯಾಪಾರವೆಲ್ಲ ಬಹುಮಟ್ಟಿಗೆ ಬಟ್ಟೆ ಮತ್ತು ಹಿಟ್ಟು. ಅಲೆಕ್ಸಾಂಡರ್ ಕಾನೂನನ್ನು ಓದಿ ನ್ಯೂಯಾರ್ಕಿನ ಪ್ರಮುಖ ಲಾಯರಾದ.

ಆದರೆ ವಿಜ್ಞಾನಾಸಕ್ತಿಯನ್ನು ಉಳಿಸಿಕೊಂಡಿದ್ದ. ಇಂಗ್ಲೆಂಡ್ ಮತ್ತು ಯೂರೋಪಿನ ಪ್ರಮುಖ ವಿಜ್ಞಾನಿಗಳೊಡನೆ, ಸುವಿಖ್ಯಾತ ಖಗೋಳ ಶಾಸ್ತ್ರಜ್ಞ, ಹ್ಯಾಲಿಯೊಡನೆ ಸಹಾ ಪತ್ರವ್ಯವಹಾರವಿಟ್ಟು

ಕೊಂಡಿದ್ದ.

ಅಲೆಕ್ಸಾಂಡರ್ ದಂಪತಿಗಳಿಗೆ ಕನಿಷ್ಠಪಕ್ಷ ಒಂಬತ್ತು ಮಕ್ಕಳುಗಳಾದರೂ ಆಗಿರಬೇಕು.

ಕವಿಯಾಗಿದ್ದ ಅವನ ಪ್ರಾಚೀನ ಆರ್ಟ್ ಆಫ್ ಸ್ಟರ್ಲಿಂಗ್ ಸರ್ ವಿಲಿಯಂ ಅಲೆಕ್ಸಾಂಡರಿ(೧೫೮೦-೧೬೪೦) ಗೆ, ಒಂದನೇ ಚಾರ್ಲ್ಸ್ ೧೬೨೧ರಲ್ಲಿ (ಎಲ್ಲಾ ಬಿಟ್ಟು) ಕೆನಡವನ್ನು ಬಹುಮಾನವಾಗಿ ಕೊಟ್ಟುದೊಂದು ವಿಚಿತ್ರ ಸಂಗತಿ.

೧೭೪೭ರಲ್ಲಿ ಜೇಂಸ್ ಅಲೆಕ್ಸಾಂಡರಿಗೆ ಈ ಪ್ರಶಸ್ತಿ ಲಭ್ಯವಾದರೂ, ಅದರ ಬಗೆಗೆ ಅವನು ಏನೂ ಮಾಡಲಿಲ್ಲ.

ಅವನ ನಿಧನಾನಂತರ ೧೭೫೬ರಲ್ಲಿ ಅವನ ಮಗ ವಿಲಿಯಂ (೧೭೨೬ರಲ್ಲಿ ಹುಟ್ಟಿದವನು) ಬ್ರಿಟನ್ನಿಗೆ ಹೋಗಿ, ಪ್ರಶಸ್ತಿಯನ್ನು ಕೇಳಿದ. ಇಂಗ್ಲೆಂಡಿನಲ್ಲಿಲ್ಲವಾದರೂ, ಸ್ಕಾಟ್‌ಲೆಂಡಿನಲ್ಲಿ ಆ ಪ್ರಶಸ್ತಿಯನ್ನು ಉಪಯೋಗಿಸುವ ಹಕ್ಕನ್ನು ಅವನಿಗೆ ಕೊಡಲಾಯಿತು. ಅನಂತರ ಲಾರ್ಡ್ ಸ್ಟರ್ಲಿಂಗ್ ಎಂಬ ಹೆಸರು ಹೊಂದಿ, ಅಮೆರಿಕದ ಕ್ರಾಂತಿಯಲ್ಲಿ ಜಾರ್ಜ್ ವಾಷಿಂಗ್ಟನ್ನನ ಕೈಕೆಳಗೆ ಸೇನಾಪತಿಯಾಗಿ ಪ್ರಧಾನ ಕದನವೊಂದರಲ್ಲಿ ಸೋತ.

ಜೆಂಗರನ ಪರ ಪ್ರತಿವಾದಿತ್ವವನ್ನು ವಹಿಸಿ ವಾದಿಸುವ ಕಾಲದಲ್ಲಿ ಅಲೆಕ್ಸಾಂಡರ್ ಮತ್ತು ಸ್ಮಿತ್‌ರು ಹೇಗೆ ನ್ಯಾಯವಾದಿತ್ವದಿಂದ ವಜಾ ಮಾಡಲ್ಪಟ್ಟರೆಂಬುದನ್ನು ಈ ಪುಸ್ತಕ ವಿವರಿಸಿದೆ. ತಮ್ಮನ್ನು ನ್ಯಾಯವಾದಿತ್ವದಿಂದ ನ್ಯಾಯಮೂರ್ತಿ ವಜಾ ಮಾಡಿದುದು, ಅಕ್ರಮವಾದುದೆಂದು, ಶಾಸನ ಸಭೆಯ ಮುಂದೆ ಅವರು ವಾದಿಸಿದರು.

ಎರಡು ವರ್ಷಗಳ ನಂತರ (೧೭೩೭ರಲ್ಲಿ) ಅದೇ ನ್ಯಾಯಮೂರ್ತಿಗಳು, ಹಿಂದಿನ ಕೃತಿ ಅಕ್ರಮವೆಂದು ಒಪ್ಪಿಕೊಂಡರು. ನ್ಯಾಯವಾದಿಗಳು ಮತ್ತೆ ತಮ್ಮ ಉದ್ಯಮಕ್ಕೆ ಹಿಂತಿರುಗಿದರು. ಆದರೆ ನಷ್ಟವಾದ ಅವಧಿ ಬಹು ದೀರ್ಘವಾದ ಎರಡು ವರ್ಷಗಳು. ಆ ಕಾಲದಲ್ಲಿ ಅಲೆಕ್ಸಾಂಡರ್, ತನ್ನ ಪತ್ನಿಗೆ ಅಂಗಡಿ ನಡೆಸಲು ನೆರವಾದ. ಆದರೆ ಸ್ಮಿತ್ತಿಗೆ, ತನ್ನ ದೊಡ್ಡ ಕುಟುಂಬವನ್ನು ಪೋಷಣೆ ಮಾಡುವ ಮಾರ್ಗ

ವಾವುದೂ ಇರಲಿಲ್ಲ.

ನ್ಯಾಯಮೂರ್ತಿಗಳಿಗೆ ಸ್ವಾತಂತ್ರ್ಯ ಕೊಡಿಸಿಕೊಡುವ ಅವರ ಪ್ರಯತ್ನಗಳು ವಿಫಲವಾಗಿದ್ದವು. ಇನ್ನೂ ನಲವತ್ತು ವರ್ಷಗಳ ಕಾಲ ದೊರೆಯ ಪ್ರತಿನಿಧಿಗಳಾದ ಗವರ್ನರುಗಳು "ತಮ್ಮ ಇಷ್ಟಪ್ರಕಾರದ ಅವಧಿಗೆ" ನೇಮಿಸುತ್ತಿದ್ದ ನ್ಯಾಯಮೂರ್ತಿಗಳನ್ನೇ ಅಮೆರಿಕ ಸಹಿಸ ಬೇಕಾಯಿತು. ಅಂತೆ ಈ ನ್ಯಾಯಮೂರ್ತಿಗಳು ಗವರ್ನರರ ಆಜ್ಞೆಗಳ ಪಾಲಕರುಗಳಾಗಿರಬೇಕಾಯಿತು. ಈ ಅವಧಿಯಲ್ಲಿ ಕ್ರೂರಿಗಳೂ ಅನ್ಯಾಯಪರರೂ ಆದ ನ್ಯಾಯಮೂರ್ತಿಗಳಿಂದ ಅಮೆರಿಕದ ಪ್ರಜೆಗಳು ಬಳಲಿದರು.

ಅನೇಕ ವರ್ಷಗಳನಂತರ, ಗವರ್ನರರ ಇಷ್ಟ ಪ್ರಕಾರದ ಅವಧಿಗೆ ನೇಮಿತವಾದ ಈ ನ್ಯಾಯಮೂರ್ತಿಗಳಿಗೆ ಸಂಬಳಕೊಡಲು ಶಾಸನ ಸಭೆ ನಿರಾಕರಿಸಿತು. ನ್ಯಾಯಮೂರ್ತಿಗಳ ಸಂಬಳಕ್ಕಾಗಿ, ನ್ಯೂಯಾರ್ಕಿನ ಪ್ರಜೆಗಳಿಂದ ವಿಶೇಷ ತೆರಿಗೆಯನ್ನು ವಸೂಲುಮಾಡುವ ಮೂಲಕ ಲಂಡನ್ ಸರಕಾರ ಈ ಸವಾಲಿಗೆ ಉತ್ತರವಿತ್ತಿತು. ಈ ಕದನ ಬಿರುಸಾಯಿತು.

ಜೆಂಗರನ ವಿಚಾರಣೆಯಲ್ಲಿ ವಿಫಲವಾದ ಈ ಉದ್ದೇಶ, ಅಮೆರಿಕದ ಕ್ರಾಂತಿಯಲ್ಲಿ ಒಂದು ಪ್ರಮುಖ ಸ್ಥಾನಪಡೆಯಿತು. ೧೭೭೬ ರ ಸ್ವಾತಂತ್ರ್ಯ ಘೋಷಣೆ, ದೊರೆ ಮೂರನೇ ಚಾರ್ಲ್ಸ್‌ನನ್ನು ಹೀಗೆಂದು ಆಪಾದಿಸಿತು: "ನ್ಯಾಯಮೂರ್ತಿಗಳು ತಮ್ಮ ಅಧಿಕಾರಾವಧಿಗೂ, ಸಂಬಳಕ್ಕೂ ತನ್ನನ್ನೇ ಆಶ್ರಯಿಸಿರುವಂತೆ ಮಾಡಿದ್ದಾನೆ."

ಕೊನೆಗೆ ರಕ್ತ ಚೆಲ್ಲಿ, ಅಮೆರಿಕದ ನ್ಯಾಯಮೂರ್ತಿಗಳಿಗೆ ಸ್ವಾತಂತ್ರ್ಯವನ್ನು ಗಳಿಸಿಕೊಡಬೇಕಾಯಿತು.

ಮೊದಮೊದಲು ಜೆಂಗರ್ ನಂಬದೇ ಹೋದ ಚೇಂಬರ್ಸ್, ೧೭೨೨ ರಲ್ಲಿ ನ್ಯೂಯಾರ್ಕಿನಲ್ಲಿ ವ್ಯಾಪಾರಿಯಾಗಿದ್ದ. ೧೭೨೫ ರಲ್ಲಿ ನ್ಯಾಯವಾದಿತ್ವವನ್ನು ಅವಲಂಬಿಸಿದ. ನಗರಕ್ಕೆ ಸಲ್ಲಿಸಿದ ಸೇವೆಗೆಂದು

ಅನೇಕಾವರ್ತಿ ಅವನಿಗೆ ಬಹುಮಾನಗಳು ಸಂದವು. ೧೭೪೯ ರ ಜುಲೈ ೨೮ನೇ ತಾರೀಖು ವಿಲಿಯಂ ಸ್ಮಿತ್ ಪ್ರಾಯಶಃ ನ್ಯೂಯಾರ್ಕಿನಲ್ಲಿ ಮೊಟ್ಟಮೊದಲ ಬಾರಿಗೆ ನ್ಯಾಯವಾದಿಗಳ ಸಂಘವನ್ನು ಸ್ಥಾಪನೆ ಮಾಡಿದಾಗ, ಚೇಂಬರ್ಸ್ ಅದರ ಸದಸ್ಯನಾದ. ಅದೇ ಬೇಸಿಗೆಯಲ್ಲಿ ಆಲ್ಡರ್‌ಮನ್ ಆದ. ೧೭೩೪ ರಲ್ಲಿ ನಡೆದ ಬಿರುಸಿನ ಚುನಾವಣೆಯಲ್ಲಿ ಪರಾಜಿತನಾಗುವವರೆಗೂ, ಸಂತತವಾಗಿ ಆಲ್ಡರ್‌ಮನ್ ಆಗಿದ್ದ. ಈ ಚುನಾವಣೆಯಲ್ಲೇ ಜೆಂಗರ್ ಚೇಂಬರ್ಸ್ ವಿರುದ್ಧ ಹಸ್ತ ಪತ್ರಿಕೆಯನ್ನು ಮುದ್ರಿಸಿದ್ದು.

ಒಂದು ಸಂದರ್ಭದಲ್ಲಿ ನಗರಕ್ಕೆ ಸಾಲಕೊಟ್ಟ, ಎಂದರೆ ಅಷ್ಟು ಶ್ರೀಮಂತನಾಗಿದ್ದ ಚೇಂಬರ್ಸ್. ಬ್ರಾಡ್‌ಫರ್ಡ್‌ನಂತೆ ಟ್ರಿನಿಟಿ ಚರ್ಚಿನ ವೆಸ್ಟ್ರಿಮನ್ ಆಗಿದ್ದ. ಬ್ರಾಡ್ವೆಯಲ್ಲಿ ಅವನದು ಭವ್ಯಭವನ. ಸುವಿಖ್ಯಾತ ಪೆರೇಡ್ ಮೈದಾನ ಭಾಗದ ವ್ಯವಹಾರದಲ್ಲಿ ನೆರೆಯವರೊಡನೆ ಚೇಂಬರ್ಸ್ ಕೂಡ ಸೇರಿದ್ದ. ವರ್ಷಕ್ಕೆ ಒಂದು ಕಾಳು ಧಾನ್ಯದ ಬಾಡಿಗೆಯ ಮೇಲೆ ಹನ್ನೊಂದು ವರ್ಷಗಳ ಅವಧಿಗೆ ಮೈದಾನ ಭಾಗವನ್ನು ಭೋಗ್ಯಕ್ಕೆ ಪಡೆವ ಕರಾರಿಗೆ ೧೭೫೩ ರ ಮಾರ್ಚಿಯಲ್ಲಿ ಇನ್ನಿಬ್ಬರೊಂದಿಗೆ ಸಹಿಹಾಕಿದ.

ಕೋಟೆ ಬದಿಯ ಬ್ರಾಡ್ವೇ ಕೊನೆಯಲ್ಲಿದ್ದ ಈ ಚಿಕ್ಕ ಮೈದಾನಕ್ಕೆ ಅವರೇ ಸ್ವಂತ ಖರ್ಚಿನಲ್ಲಿ ಬೇಲಿ ಹಾಕಿಕೊಳ್ಳಬೇಕಿತ್ತು. ಬೀದಿಯ ಸೌಂದರ್ಯ, ಅಲಂಕಾರಗಳಿಗಾಗಿಯೂ, ನಗರ ನಿವಾಸಿಗಳ ಕ್ರೀಡಾ ವಿಹಾರಗಳಿಗಾಗಿಯೂ ಆಟದ ಹಸಿರು ಮೈದಾನವನ್ನೂ ಅದರ ಮಧ್ಯೆ ಕಾಲುಹಾದಿಗಳನ್ನೂ ಸೃಷ್ಟಿಸಬೇಕಿತ್ತು.

ಇದು ನ್ಯೂಯಾರ್ಕಿನ ಪ್ರಥಮ ಪಾರ್ಕು. ಆಟದ ಮೈದಾನದಲ್ಲಿ ಕ್ರೀಡೆಗೆ ಬಂದವರಿಂದ ತಲಾ ಒಂದು ಪೆನ್ನಿಯಂತೆ ವಸೂಲು ಮಾಡಿದ, ಚೇಂಬರ್ಸ್ ಮತ್ತು ಅವನ ಮಿತ್ರರು ಗಳಿಸಿದ ಹಣ ಅಷ್ಟಕ್ಕಷ್ಟೆ. ಆಗ ಅದಕ್ಕೆ ಬಂದ 'ಬೌಲಿಂಗ್ ಗ್ರೀನ್' ಎಂಬ ಹೆಸರೇ ಈಗಲೂ ಇದೆ.

ವಿವಾಹದ ಮೂಲಕ ಚೇಂಬರ್ಸಿಗೂ ನ್ಯಾಯಮೂರ್ತಿ

ಡಿಲಾನ್ಸೆಗೂ ಬಂಧುತ್ವ ಉಂಟಾಗಿತ್ತು. ಆದರೆ ಈ ನಂಟತನ ಬಳಸಿ ನದು. ಚೇಂಬರ್ಸ್‌ನ ಪತ್ನಿ ಆನೆ ವಾನ್ ಕೋರ್ಟ್‌ಲ್ಯಾಂಡಳ ದಾಯಾದಿ, ಇನ್ನೊಬ್ಬ ಆನೆ ವಾನ್ ಕೋರ್ಟ್‌ಲ್ಯಾಂಡ್ ತರುಣ ನ್ಯಾಯಮೂರ್ತಿಯ ತಾಯಿ.

ಸತಿಚೇಂಬರ್ಸ್‌ಗೆ ಸತಿ ಅಲೆಕ್ಸಾಂಡರ್ ಕೂಡ ದಾಯಾದಿ. ಅಂತೆ ನ್ಯಾಯಮೂರ್ತಿ ಡಿಲಾನ್ಸೆ ಮತ್ತು ಅಲೆಕ್ಸಾಂಡರ್ ನಡುವೆ ತಾನು ನಿಲ್ಲುವುದು ಅತಿವಿಚಿತ್ರವೆನಿಸಿರಬೇಕು ಚೇಂಬರ್ಸ್‌ಗೆ.

ಜೆಂಗರ್ ವಿಚಾರಣೆ ನಂತರ ಚೇಂಬರ್ಸ್ ಬಹಳ ಯಶಸ್ಸು ಪಡೆದ. ೧೭೫೪ ರಲ್ಲಿ ರಾಜಪ್ರತಿನಿಧಿ ಮಂಡಳದ ಸದಸ್ಯನೂ, ೧೭೫೬ ರಲ್ಲಿ ಸುಪ್ರೀಂ ಕೋರ್ಟ್ ನ್ಯಾಯಮೂರ್ತಿಯೂ, ಅನಂತರ ಶ್ರೇಷ್ಠ ನ್ಯಾಯಮೂರ್ತಿಯೂ ಆದ. ಅವನ ನಿಧನ ೧೭೬೫ರಲ್ಲಿ.

ಜೆಂಗರ್ ಪತ್ರಿಕೆಗೆ ಪ್ರಮುಖವಾಗಿ ಬರೆಯುತ್ತಿದ್ದವರಾರೆಂಬು ದನ್ನು ಊಹಿಸಿ, ನ್ಯಾಯಮೂರ್ತಿ ಹ್ಯಾರಿಸನ್ ೧೭೩೪ರ ಏಪ್ರಿಲ್ ೧೫ರ 'ಗೆಜೆಟ್'ನಲ್ಲಿ ಹೀಗೆಂದು ಬರೆದ; ೧. ಅಮ್‌ಸ್ಟರ್ಡಾಂ ಕೊಕ್ಕರೆ, ೨. ಕನೆಕ್ಟಿಕಲ್ ಮ್ಯಾಸ್ಟಿಫ್ (ಜಾತಿನಾಯಿ) ೩. ಫಿಲಿಪ್ ಕೋತಿ, ಹಿರಿಯ ೪. ಫಿಲಿಪ್ ಕೋತಿ, ಕಿರಿಯ ೫. ಸಿತಿರ್ಯ ಜೋಳ ೬. ರೈನ್ ದಂಡೆಯ ಕಾಡುಪಾಪ ಪೀಟರ್.

ಇವರುಗಳು ಯಾರೆಂದರೆ ೧. ರಿಪ್ ವಾನ್ ಡಾಂ, ೨. ವಿಲಿಯಂ ಸ್ಮಿತ್, ೩. ಲೂಯಿ ಮಾರಿಸ್, ಮಾಜಿ ಶ್ರೇಷ್ಠ ನ್ಯಾಯಮೂರ್ತಿ, ೪. ಲೂಯಿ ಮಾರಿಸ್ ಜ್ಯೂನಿಯರ್, ೫. ಜೇಂಸ್ ಅಲೆಕ್ಸಾಂಡರ್, ೬. ಜೆಂಗರ್.

೧೭೩೩ರ ನವೆಂಬರ್ ೧೭ರ ಜೆಂಗರ್ ' ಜರ್ನಲ್ 'ನಿಂದ:-

"ಕೆಲವು ಗವರ್ನರುಗಳು, ಖಚಿತವಾಗಿ ತಪ್ಪು ಹೆಜ್ಜೆ ಹಾಕ ಬಹುದು, ದುರ್ವರ್ತಿಸಬಹುದು, ಪಾತಕಿಗಳೂ ಆಗಬಹುದು. ಇಂಥ ಪರಿಸ್ಥಿತಿ ಕಾರಣವಾಗಿಯೇ ಪತ್ರಿಕಾ ಸ್ವಾತಂತ್ರ್ಯ ಅಗತ್ಯವೆನಿಸುತ್ತದೆ.

ಸಾಮಾನ್ಯ ನ್ಯಾಯ ಕ್ರಮಗಳಿಂದ ಇಂಥ ಕೊಬ್ಬಿದ ಪಾತಕಿಯನ್ನು ಅಥವಾ ಅಸಮಾನ್ಯವಾದ ತಂಟೆಕೋರ ಪೆಡಂಭೂತವನ್ನು ತತ್‌ಕ್ಷಣ ಹಿಡಿಯಲು ಸಾಧ್ಯವಾಗದಿದ್ದರೆ, ವ್ಯಂಗ್ಯದ ಏಟುಗಳಾದರೂ ಅದಕ್ಕೆ ಬೀಳಬೇಕು. ಅಕ್ರಮ ಆಡಳಿತದ ಕಣ್ಣು ಕಕ್ಕುವ ಸತ್ಯಾಂಶಗಳು ಸಾಧ್ಯವಿದ್ದರೆ, ಹೃದಯವನ್ನು ಎಚ್ಚರಿಸಲಿ. ಹೃದಯವೇ ಇಲ್ಲವಾದರೆ, ಹೆದರಿಕೆಯನ್ನಾದರೂ ಹುಟ್ಟಿಸಲಿ. ಕೃತಿಗಳನ್ನು ವೀಕ್ಷಿಸಿ, ಬಹಿರಂಗಪಡಿಸುವ ಈ ಕ್ರಮಗಳು ಇನ್ನು ಮುಂದೆಯಾದರೂ ಸ್ವಲ್ಪ ಎಚ್ಚರಿಕೆಯಿಂದ ಪ್ರವರ್ತಿಸುವಂತೆ ಮಾಡಿಯಾವು; ಪ್ರಾಯಶಃ ಕಟ್ಟಕಡೆಗೆ ಈ ಮಹಾ ಠೇಂಕಾರದ ಪಾತಕಿಯನ್ನು ಸಾಮಾನ್ಯ ನ್ಯಾಯವಿಧಾನದ ವರ್ತುಲಕ್ಕೆ, ಹಿಡಿತಕ್ಕೆ ಒಳಪಡಿಸಿಯಾವು. ಸರಕಾರದ ದುಷ್ಟ ಅಧಿಕಾರಿಗಳ ಪಾತಕಗಳನ್ನು ಬಹಿರಂಗಪಡಿಸುವ ಅನುಕೂಲವನ್ನು ಒದಗಿಸುವುದರಿಂದಲೇ ಪತ್ರಿಕಾ ಸ್ವಾತಂತ್ರ್ಯ ಅತ್ಯಗತ್ಯವೆನಿಸಿದೆ. ಪತ್ರಿಕಾ ಸ್ವಾತಂತ್ರ್ಯ ದುಷ್ಟ ಗವರ್ನರುಗಳಿಗೊಂದು ಹತೋಟಿ, ತಡೆ, ಬೆದರಿಕೆ, ಅಪಮಾನ, ನಿರ್ಬಂಧ."

೧೭೩೩ರ ನವೆಂಬರ್ ೧೯ರ ಜೆಂಗರ್ 'ಜರ್ನಲ್' ನಿಂದ: "ಮಾತಿನ, ಬರೆಹದ ಅಥವಾ ಮುದ್ರಣದ ಸ್ವಾತಂತ್ರ್ಯವನ್ನು ಯಾವ ರಾಷ್ಟ್ರವೂ ಚಿರಕಾಲ ಕಳೆದುಕೊಳ್ಳಲಿಲ್ಲ; ಆದರೆ ತತ್ಕಾಲದಲ್ಲಿ ಎಲ್ಲಾ ಸ್ವಾತಂತ್ರ್ಯಗಳನ್ನೂ ಕಳೆದುಕೊಂಡು ಗುಲಾಮ ಸ್ಥಿತಿಗಳಿದವು. ಪತ್ರಿಕಾ ಸ್ವಾತಂತ್ರ್ಯಕ್ಕೆ ವಿರೋಧಿಯಾದವನು ತನ್ನ ರಾಷ್ಟ್ರಕ್ಕೂ ಶತ್ರುವೇ."

ಗವರ್ನರರ ಸರಕಾರಿ ಕೃತಿಗಳನ್ನು ವರದಿ ಮಾಡುವ ಪತ್ರಿಕಾ ಹಕ್ಕಿಗಾಗಿ ಜೆಂಗರ್ ಮತ್ತು ಪಾಪ್ಯುಲರ್ ಪಾರ್ಟಿಯ ನಾಯಕರುಗಳು ಹೋರಾಡಿದರು. ಆದರೆ ಉದ್ರೇಕದ ಭರದಲ್ಲಿ ಇನ್ನೂ ಮುಂದೆ ಹೋಗಿ ಕಾಸ್ಬಿಯ ಕೆಂಪು ಕೋಟಿನ ಮೇಲೆ, ಕಡೆಗೆ ಅವನ ಹಲ್ಲಿನ ಮೇಲೂ ಟೀಕೆಗಳನ್ನು ಪ್ರಕಟಿಸಿದರು. "ಮುದಿ ಕೋತಿ" ಎಂದೂ ಬರೆದರು.

“ ಕೋತಿಯ ಬಣ್ಣ ಕೆಂಪು, ಸದಾ ಕಿಚುಗುಟ್ಟುತ್ತಿರುತ್ತದೆ; ಆದರೆ ಮೇಲು ಸಾಲಿನ ಹಲ್ಲುಗಳೆಲ್ಲ ಉದುರಿಹೋಗಿರುವುದರಿಂದ, ಅದು ಯಾರನ್ನಾದರೂ ಕಚ್ಚೀತೆಂಬ ಹೆದರಿಕೆಯಿಲ್ಲ. ದೊಡ್ಡದೊಂದು ಮರದ ಬೋನು ಕಟ್ಟಬೇಕೆಂದು ಕೆಲವು ನಾಗರಿಕರ ಸಲಹೆ. ಅದರ ಪ್ರದರ್ಶನದಿಂದ ಹಣ ಗಿಟ್ಟಿಸಬಹುದೆಂಬುದರಲ್ಲಿ ಅವರಿಗೆ ಅನುಮಾನವೇ ಇಲ್ಲ.”

ಕಾಸ್ಬಿಯ ಶಪಿಸುವ ಅಭ್ಯಾಸವನ್ನೂ ‘ ಜರ್ನಲ್ ’ ಉಗ್ರವಾಗಿ ಟೀಕಿಸಿತು. (ಆದರೆ ಅವನು ಉಪಯೋಗಿಸುತ್ತಿದ್ದ ಮಾತುಗಳನ್ನೇ ಬಳಸಲಿಲ್ಲ).

“ ಆಕಾರವೊಂದನ್ನು ಬಿಟ್ಟರೆ ಇನ್ನೇನೂ ಮಾನ್ಯತೆಯಿಲ್ಲದ, ತಲೆಯಲ್ಲಿ ಗದ್ದಲ ಮಾಡುವ ನಾಲಗೆಯೊಂದನ್ನು ಬಿಟ್ಟರೆ ಇನ್ನೇನೂ ಇಲ್ಲದ ಪ್ರಾಣಿಯೇ, ಆಡಳಿತ ನಡೆಸಲು ಸಮರ್ಥವಾದ ಯಂತ್ರ ವೇನೋ ಎನ್ನುವಂತೆ ‘Sacrament, Donder, and Blixum!’ ಎಂಬ ಮಾತುಗಳೇ ಬಾಯ್ತುಂಬಿದ, ದಡ್ಡತನಕ್ಕೆ ಒಂದಿಷ್ಟು ಅತಿಯಾದವನೊಬ್ಬ, ಸ್ವೇಚ್ಛೆಯಾಗಿ ನಮ್ಮನ್ನೂ ನಮ್ಮ ಆಸ್ತಿಗಳನ್ನೂ ವಿನಿಯೋಗಿಸಬಹುದೇ ?”

ಫ್ರಾನ್ಸಿಸ್ ಹ್ಯಾರಿಸನ್ ಗವರ್ನರ್ ಕಾಸ್ಬಿಯ ಮೇಲೆ ಪ್ರಶಂಸೆಯ ಮಳೆ ಕರೆದು, ಅವುಗಳನ್ನು ೧೭೩೩ರ ನವೆಂಬರ್ ೫ರ ‘ ಗೆಜೆಟ್ ’ನಲ್ಲಿ ಪ್ರಕಟಿಸಿದ.

“ ಸರಕಾರದ ಆಶ್ರಯದಲ್ಲಿ ನಾವು ಅನುಭವಿಸುತ್ತಿರುವ ಸುಖ ಸಂತೋಷಾದಿಗಳು ತೀವ್ರ ಅಸೂಯೆಗೆ ಕಾರಣವಾಗಿವೆ ” ಎಂದು ಬರೆದ.

ಗವರ್ನರರ ಮಹಲಿನಲ್ಲಿ ಏರ್ಪಟ್ಟ ಭೋಜನ ಕೂಟವೊಂದನ್ನು ವರ್ಣಿಸುತ್ತ, “ ಸಮಾರಂಭದುದ್ದಕ್ಕೂ ಕಂಡುಬಂದ ಸರಳ ನಡತೆ, ಶಿಸ್ತು, ಪ್ರಶಂಸನೀಯ ವರ್ತನೆ, ಇಂದಿನ ರಾತ್ರಿಯನ್ನು ಅತ್ಯಂತ ಶೋಭಾಯಮಾನವಾಗಿ ಮಾಡಿದವು ” ಎಂದೂ ಬರೆದ.

ನ್ಯಾಯಮೂರ್ತಿಯ ವರ್ಣನೆಯ ಮೂಲಕ ಜೆಂಗರ್ ಈ ರೀತಿ ಉತ್ತರಿಸಿದ :

"ಐದುಅಡಿ ಐದುಅಂಗುಲ ಎತ್ತರದ, ದೊಡ್ಡ ಆಕಾರದ ಸ್ಪ್ಯಾನಿಯಲ್ ನಾಯಿಯೊಂದು, ತನ್ನ ಗೂಡಿನಿಂದ ತಪ್ಪಿಸಿಕೊಂಡು, ಬಾಯಲ್ಲಿ ಪ್ರಶಂಸೆಗಳ ದೊಡ್ಡ ತುಂಡು ಕಚ್ಚಿ, ಅಲ್ಲಲ್ಲಿ ಅಲೆದಾಡುತ್ತ, "ನ್ಯೂಯಾರ್ಕ್ ಗೆಜೆಟ್"ನಲ್ಲಿ ಅದನ್ನುಗುಳಿತು. ಮರಿಯಾಗಿದ್ದಾಗ ಅದರ ಹಣೆಯಮೇಲೆ ಎಫ್. ಹೆಚ್. ಎಂಬ ಅಕ್ಷರಗಳನ್ನೂ, ಶಿಲುಬೆ ಗುರುತನ್ನು ಹಾಕಲಾಗಿತ್ತು. ಗುರುತುಗಳು ಅಳಿಸಿಹೋಗಿರುವುದರಿಂದ ಅಧಿಕಾಧಿಕ ಸಂಖ್ಯೆಯಲ್ಲಿ ಭಾರಿ ಸುಳ್ಳುಗಳನ್ನು ಎರಚುವ ಮೂಲಕ ಮಾನವ ಜನಾಂಗವನ್ನೇ ಶಪಿಸುವ, ಅಕ್ರಿಸ್ತ ಕಾರ್ಯಭಾರವನ್ನು ವಹಿಸಿಕೊಂಡಿದೆ. ಈ ಮುಂಚೆ ತಿಳಿಸಿದ ಪ್ರಶಂಸೆಗಳ ಬಾಹ್ಯ ರೂಪ ವನ್ನು ಸಂಪೂರ್ಣವಾಗಿ ಕಿತ್ತೊಗೆದು, ಈ ದುಷ್ಟ ಪ್ರಾಣಿಯನ್ನು ಯಾರು ಅದರ ಗೂಡಿಗೆ ಮರಳಿಸುವರೋ ಅವರಿಗೆ, ಎಲ್ಲಾ ಸತ್ಯ ನಿಷ್ಠ ನಾಗರಿಕರ ಅಭಿನಂದನೆಗಳೂ, ನ್ಯಾಯ ಸಮ್ಮತವಾದ ಖರ್ಚು ವೆಚ್ಚ ಗಳೂ ಸಲ್ಲಲಿವೆ"

ಈ ಬರೆಹ ಹೋಟೆಲುಗಳಲ್ಲೆಲ್ಲ ನಗೆ ಕೋಲಾಹಲವನ್ನೆಬ್ಬಿಸಿತು. ಸ್ವಲ್ಪಕಾಲ ಹ್ಯಾರಿಸನ್ "ಗೆಜೆಟ್" ನಲ್ಲಿ ಏನೂ ಬರೆಯಲಿಲ್ಲ. ಆತನ ಮೌನ ಕುರಿತು 'ಜರ್ನಲ್' ಹೀಗೆಂದು ಬರೆಯಿತು :

"ತನ್ನ ಇಷ್ಟ ಪ್ರಕಾರವೇ ಗೂಡು ಬಿಟ್ಟಿದ್ದ ಸ್ಪ್ಯಾನಿಯಲ್ ಮತ್ತೆ ಸ್ವಸ್ಥಾನಕ್ಕೆ ಮರಳಿತು. ಆ ಎಲ್ಲ ಮುಕ್ತ ಪ್ರಶಂಸೆಗಳನ್ನೂ ತನ್ನ ಯಜಮಾನನ ಆಜ್ಞಾನುಸಾರ ತಾನು "ನ್ಯೂಯಾರ್ಕ್ ಗೆಜೆಟ" ನಲ್ಲಿ ಹಾಕಿದುದಾಗಿ, ಪ್ರಜಾಸಮುದಾಯಕ್ಕೆ ತನ್ನ ಭರವಸೆಯನ್ನು ತನ್ನ ಗೂಡಿನಿಂದಲೇ ಅದು ಕೊಡ ಬಯಸುತ್ತದೆ. ಮಾನವ ಜನಾಂಗದ ಮೇಲೆ ಎರಚಿದ ಸುಳ್ಳಿನ ಕುಪ್ಪೆಯ ವಿಷಯದಲ್ಲಿ, ಈ ಸುಳ್ಳುಗಳಲ್ಲಿ ಒಂದನ್ನಾದರೂ ನಂಬುವಂತಹ ತನ್ನನ್ನ ಬಲ್ಲ ವ್ಯಕ್ತಿ ಈ ಪ್ರಾಂತ್ಯದಲ್ಲಿ ಇದ್ದಾನೆಂದು ಯಾವುದೇ ಕೋರ್ಟಿನಲ್ಲಿ ಜನತೆ ಸಿದ್ಧಾಂತಪಡಿಸಿ ತೋರಿಸುವುದಾದರೆ ಜನತೆ ವಿಧಿಸುವ ಶಿಕ್ಷೆಗೆ ತಾನು ಪಾತ್ರನಾಗುವುದಾಗಿ

ತಿಳಿಸಿದೆ."

ಜೆಂಗರನ "ಜಾನ್ ಪೀಟರ್ ಜೆಂಗರನ ವ್ಯವಹಾರ ಮತ್ತು ವಿಚಾರಣೆ" ಪುಸ್ತಕ ಅನೇಕ ಪುನರ್ಮುದ್ರಣಗಳನ್ನೂ ಕಂಡಿದ್ದು ಈಗಲೂ ಮಾರಾಟಕ್ಕಿದೆ. ಬಹು ಪಾಲು ಪುಸ್ತಕ ಭಂಡಾರಗಳಲ್ಲೂ ಈ ಪುಸ್ತಕವಿದೆ. ಅವನ ಪತ್ರಿಕೆಗಳ ದಹನ, ಅವನ ಬಂಧನ, ಅವನ ವಿಚಾರಣೆಯ ಬಹು ಭಾಗದ ಪದಶಃ ವರದಿ, ಈ ಪುಸ್ತಕದಲ್ಲಿವೆ.

ಜ್ಯೂರಿಗಳನ್ನು ದ್ದೇಶಿಸಿ ಹ್ಯಾಮಿಲ್ಟನ್ ಮಂಡಿಸಿದ ಭವ್ಯವಾದದ ಮಾದರಿಯೊಂದಿದು:

"ಮಾನ್ಯರೆ, ಇದು ಸ್ವತಂತ್ರ ಆಡಳಿತದ ಕಾಲ, ಜನ ಸತ್ಯದ ಗಡಿಯೊಳಗೆ ಇರುವವರೆಗೆ, ಅಧಿಕಾರದಲ್ಲಿರುವವರ ವರ್ತನೆಗಳನ್ನು —ಎಂದರೆ ಅವರ ಆಡಳಿತದಲ್ಲಿ, ಜನತೆಯ ಸ್ವಾತಂತ್ರ್ಯ ಅಥವಾ ಆಸ್ತಿಗಳ ಮೇಲೆ ಪರಿಣಾಮುವನ್ನುಂಟುಮಾಡುವ ವರ್ತನೆಗಳನ್ನು ಕುರಿತು ತಮ್ಮ ಅಭಿಪ್ರಾಯಗಳನ್ನು ನುಡಿಯಬಹುದು, ಬರೆಯಬಹುದು ಎಂದು ನಂಬುತ್ತೇನೆ. ಇದು ಸಲ್ಲದೇ ಹೋದರೆ ಮುಂದೆ ಗುಲಾಮಗಿರಿಗಳಾದಾರು! ದೂರಿಡುವ ಸ್ವಾತಂತ್ರವೂ ಇಲ್ಲದೆ, ಮಹತ್ತರವಾದ ಪೆಟ್ಟುಗಳನ್ನೂ ದಬ್ಬಾಳಿಕೆಯನ್ನೂ ಅನುಭವಿಸುವುದು ಗುಲಾಮಗಿರಿಯಲ್ಲದೆ ಇನ್ನೇನು?

ಔದಾರ್ಯ ತುಂಬಿದ ಮನಸ್ಸಿಗೆ ಸ್ವಾತಂತ್ರ್ಯದ ನಷ್ಟ, ಸಾವಿಗಿಂತ ಅತೃಪ್ತ. ಆದರೆ ತಮ್ಮ ಸ್ವಪ್ರಗತಿಗಾಗಿಯೇ ಅಥವಾ ಯಾವುದೋ ಊಹಾತ್ಮಕವಾದ ಗೌರವಕ್ಕಾಗಿಯೋ, ದಬ್ಬಾಳಿಕೆಗೆ—ಅಲ್ಲಲ್ಲಿ—ತಮ್ಮ ರಾಷ್ಟ್ರದ ವಿನಾಶಕ್ಕೆ, ನೆರವಿನ ಕೈನೀಡುವಂಥ ಜನ ಎಲ್ಲ ಕಾಲದಲ್ಲೂ ಇದ್ದರೆಂಬುದು ನಮಗೆಲ್ಲ ತಿಳಿದ ವಿಷಯ. ಬಲು ಪ್ರಬಲರಾದರೂ, ಯಾವ ದೃಷ್ಟಿಯಿಂದಲೂ ಸಜ್ಜನರಲ್ಲದ ಸೀಜರನ ನೌಕರರ ಕಡೆ ನೋಡಿದಾಗ, ಆ ಚಿರಂಜೀವಿ ಬ್ರೂಟಸ್ ನುಡಿದ ನುಡಿ ಈ ಸಂದರ್ಭದಲ್ಲಿ ನೆನಪಿಗೆ ಬರುತ್ತಿದೆ "ರೋಮನ್ನರೇ," ಎಂದು ಬ್ರೂಟಸ್ ಆರಂಭಿಸಿದ, "ಇನ್ನೂ ನಾನು ನಿಮ್ಮನ್ನು ಹಾಗೆಂದೇ ಕರೆಯಬಹುದಾದರೆ, ನೀವು ಮಾಡುತ್ತಿರುವುದೇನೆಂದು ಪರ್ಯಾ

ಲೋಚಿಸಿ! ಒಂದು ದಿನ ಅವನೇ ನಿಮಗೆ ತೊಡಿಸಬಹುದಾದ ಆ ಸರಪಳಿಗಳನ್ನೇ ಇಂದು ಬಿಗಿಯಲು, ಸೀಜರನಿಗೆ ನೀವು ಸಹಾಯ ಮಾಡುತ್ತಿದೀರಿ ಎಂಬುದನ್ನು ಸ್ಮರಿಸಿಕೊಳ್ಳಿ!"

ಇಂಥ ಕಾರ್ಯಭಾರದ ಹೊರೆ ಹೊರಲು ನಿಜವಾಗಿಯೂ ನಾನು ಅಸಮರ್ಥ. ವಯೋಭಾರದಿಂದಲೂ, ದೇಹದ ಅಸ್ವಾಧೀನತೆಯಿಂದಲೂ ನಾನು ನರಳುತ್ತಿರುವುದನ್ನು ನೀವೇ ನೋಡುತ್ತಿದೀರಿ. ಆದರೆ, ಅಧಿಕಾರದಲ್ಲಿರುವವರ ಸ್ವೇಚ್ಛಾ ಪ್ರವರ್ತನೆಯ ವಿರುದ್ಧ ದೂರಿಡುವ ಹಕ್ಕುಗಳನ್ನು ಜನತೆಯಿಂದ ಕಿತ್ತುಕೊಳ್ಳುವ ಉದ್ದೇಶದಿಂದ ಹೂಡುವ ಕ್ರಮಗಳ ಜ್ವಾಲೆಯನ್ನಾರಿಸಲು, ನನ್ನ ಅಲ್ಪ ಸಹಾಯ ಪ್ರಯೋಜಕವಾಗುವುದಾದರೆ, ಅಗತ್ಯವೆನಿಸಿದರೆ ಈ ವೃದ್ಧಾಪ್ಯದಲ್ಲೂ, ಈ ದುರ್ಬಲ ಸ್ಥಿತಿಯಲ್ಲೂ ರಾಷ್ಟ್ರದ ಯಾವ ಮೂಲೆಗೆಬೇಕಾದರೂ ಹೋಗಬೇಕಾದುದು ನನ್ನ ಕರ್ತವ್ಯವೆಂದು ಭಾವಿಸುತ್ತೇನೆ.

ಮಾತು ಮುಗಿಸುವ ಮುನ್ನ ಇಷ್ಟು ಹೇಳಬೇಕಾಗಿದೆ: ಮಾನ್ಯ ಜ್ಯೂರಿಗಳೇ, ನಿಮ್ಮ ಮುಂದೂ, ಕೋರ್ಟಿನ ಮುಂದೂ ಇರುವ ವಿಷಯ ಅಲ್ಪವಾದ್ದೂ ಅಲ್ಲ, ಖಾಸಗಿಯಾದ್ದೂ ಅಲ್ಲ. ಬಡ ಮುದ್ರಕನದೂ ಅಲ್ಲ, ನೀವು ವಿಚಾರಣೆ ನಡೆಸುತ್ತಿರುವ ನ್ಯೂಯಾರ್ಕಿನದೂ ಅಲ್ಲ. ಇದರ ಪರಿಣಾಮ ಎಲ್ಲ ಸ್ವತಂತ್ರ ಅಮೆರಿಕನ್ನರಮೇಲೂ ತನ್ನ ಪ್ರಭಾವವನ್ನು ಬೀರೀತು. ಇದು ಶ್ರೇಷ್ಠ ನಿಮಿತ್ತ! ಇದು ಸ್ವಾತಂತ್ರ್ಯದ ನಿಮಿತ್ತ!

ನಿಮ್ಮ ಹಿಂದಿನ ಸದ್ವರ್ತನೆಯಿಂದ, ನೀವು ನಿಮ್ಮ ನೆರೆ ನಾಗರಿಕರ ಪ್ರೀತಿ, ಗೌರವಗಳಿಗೆ ಪಾತ್ರರಷ್ಟೇ ಅಲ್ಲ; ಸತ್ಯ ಪ್ರವಚನ, ಲೇಖನಗಳ ಮೂಲಕ ಸ್ವೇಚ್ಛಾಧಿಕಾರವನ್ನು ವಿರೋಧಿಸುವ, ಬಹಿರಂಗ ಪಡಿಸುವ ಹಕ್ಕುಗಳನ್ನು ನಮಗೆ ಕರುಣಿಸಿರುವ ನಮ್ಮ ರಾಷ್ಟ್ರದ ಸ್ವಭಾವ ಹಾಗೂ ಶಾಸನಗಳ ರೀತ್ಯ, ತಮ್ಮ ನಿಷ್ಪಕ್ಷಪಾತವಾದ ಹಾಗೂ ಸ್ವಲೋಭನ ರಹಿತವಾದ ಪರಿಶುದ್ಧ ತೀರ್ಪುಗಳಿಂದ ನಮಗೂ, ನಮ್ಮ ನೆರೆಯವರಿಗೂ, ನಮ್ಮ ಮಕ್ಕಳಿಗೂ ಶ್ರೇಷ್ಠವಾದ ಭದ್ರ ಬುನಾದಿಯನ್ನು ಹಾಕಿಕೊಟ್ಟಿರುವವರಂತೆ, ಗುಲಾಮಗಿರಿಯ ಬದಲು

ಸ್ವಾತಂತ್ರ್ಯವೇ ಬೇಕೆಂದು ಬಯಸುವ ಪ್ರತಿಯೊಬ್ಬರೂ ನಿಮ್ಮನ್ನು ಗೌರವ, ಸದಾಶಯಗಳಿಂದ ಪುರಸ್ಕರಿಸುತ್ತಾರೆ, ಎನ್ನುವುದರಲ್ಲಿ ನನಗೆ ಎಳ್ಳಷ್ಟೂ ಸಂಶಯವಿಲ್ಲ !”



# ಪೀಟರ್ ಜೆಂಗರ್

'ಪೀಟರ್ ಜೆಂಗರ್' ಹದಿನೆಂಟನೆಯ ಶತಮಾನದಲ್ಲಿ ನಿರಂಕುಶಾಧಿಕಾರದ ವಿರುದ್ಧ ಹೋರಾಡಿ, ಅಮೆರಿಕದಲ್ಲಿ ಪತ್ರಿಕಾ ಸ್ವಾತಂತ್ರ್ಯದ ಪತಾಕೆಯನ್ನು ಮೆರೆಸಿದ ಮೊದಲಿಗ. ಆ ಹೋರಾಟದ ಕತೆ ಇದು.

ನಿರಂಕುಶತ್ವ ಬುಟ್ಟಿಯಲ್ಲಿ ಕೂಡಿಟ್ಟ ಹಾವಿನಂತೆ, ಅವಕಾಶ ಸಿಕ್ಕಾಗಲೆಲ್ಲ ಹೆಡೆಯೆತ್ತಲು ಹವಣಿಸುತ್ತಲೇ ಇರುತ್ತದೆ. ಅಂಥ ಹವಣಿಕೆಯ ಬಗ್ಗೆ ಎಲ್ಲ ಸ್ವಾತಂತ್ರ್ಯ ಪ್ರೇಮಿಯೂ ಸದಾ ಎಚ್ಚರದಿಂದಿರಬೇಕು. ಆ ಬಗ್ಗೆ ಹೋರಾಟ ನಡೆಸಿದವರ, ನಡೆಸುತ್ತಿರುವವರ ಇತಿಹಾಸವು ಚಿರಸ್ಮರಣೀಯ.

'ಪೀಟರ್ ಜೆಂಗರ್'ನ ಕತೆಯಲ್ಲಿ ಬರುವ ಹಲವಾರು ಸನ್ನಿವೇಶಗಳನ್ನು ಹೋಲುವಂತಹ ಘಟನಾವಳಿಗಳು ಮೈಸೂರು ರಾಜಕೀಯದಲ್ಲೂ ಜರುಗಿದುದು ಓದುಗರಿಗೆ ಮನವರಿಕೆಯಾಗದಿರದು. ಸರ್ಕಾರದ ಕಾರ್ಯಾಂಗವು ನ್ಯಾಯಾಂಗದ ನಿಯಂತ್ರಣ ಮಾಡುವುದಾಗಲೀ, ನ್ಯಾಯಾಂಗವು ಕಾರ್ಯಾಂಗದ ಕೈಗೊಂಬೆಯಾಗಿರುವುದಾಗಲೀ, ಅಥವಾ ನ್ಯಾಯಾಂಗವು ಸರ್ವತಂತ್ರ ಸ್ವತಂತ್ರವಾಗಿದ್ದೂ ದೇಶದ ರಾಜಕೀಯ ಆಗುಹೋಗುಗಳಲ್ಲಿ ಕೈಯಾಡಿಸುವುದಾಗಲೀ ಎಂತಹ ದುಷ್ಪರಿಣಾಮಗಳಿಗೆ ಎಡೆಕೊಡುವುವೆಂಬುದು ಮೈಸೂರು ಜನತೆ ಕಂಡ ವಿಷಯ.

ವಾಹಿನಿ ಪ್ರಕಾಶನ ಬೆಂಗಳೂರು-೨

ಮಾರಾಟದ ಪೂರ್ಣ ಹಕ್ಕುದಾರರು:

ಸ್ಟ್ಯಾಂಡರ್ಡ್ ಬುಕ್ ಡಿಪೋ

ಅವೆನ್ಯೂ ರೋಡ್ : : ಬೆಂಗಳೂರು

THE EASTERN PRESS, BANGALORE-2